# ಕಸ್ತೂರಿ

ಕನ್ನಡ ಡೈಜೆಸ್ಟ್



ಸಂಪಾದಕ :
ಬಿ. ವಿ. ಜಿಗಜಿನ್ನಿ

ಕಲೆ :
ಕೆ. ಬಿ. ಕುಲಕರ್ಣಿ

ಮುಖಪುಟ :
'ಹೋಗಿ ಬರುವೆ...'

ಚಿತ್ರ :
ದೇವಜಾನಿ ಬ್ಯಾನರ್ಜಿ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೦೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೩-೦೦ |
| ೨ ವರ್ಷಕ್ಕೆ | ,, | ೪೫-೦೦ |
| ೩ ವರ್ಷಕ್ಕೆ | ,, | ೬೬-೦೦ |



## ಬೆಳಕಿಂಡಿ

"ಸ್ವಲ್ಪ ಸಂಬಳ ಬರುವಲ್ಲಿ ಸಾಹೇಬನಾಗಿರುವುದಕ್ಕಿಂತ ಸಾಕಷ್ಟು ಸಂಬಳವಿರುವಲ್ಲಿ ಚಪರಾಸಿಯಾಗಿರುವುದು ಲೇಸು."

—ಮಗನಿಗೆ ತಂದೆಯ ಉಪದೇಶ

*

ಮತ್ತೊಬ್ಬರ ಬಗ್ಗೆ ಚಿಂತಿಸುತ್ತಿರಬೇಕು, ಅವರ ಒಳಿತನ್ನೇ ಬಯಸುತ್ತಿರಬೇಕು—ಅಂದರೆ ಉನ್ನತಿಯಾಗುತ್ತದೆ. ಈ ಮಾತಿಗೆ ಶ್ರೇಷ್ಠ ಉದಾಹರಣೆ ಎಂದರೆ ನಮ್ಮ ವಿಮಾ ಏಜಂಟರು. ಅವರು ಇನ್ನೊಬ್ಬರ ಭವಿಷ್ಯದ ಚಿಂತೆ ಮಾಡಿ ತಮ್ಮ ಭವಿಷ್ಯವನ್ನು ಭದ್ರಪಡಿಸಿಕೊಳ್ಳುತ್ತಾರೆ. —ಯಬ್ಬಂಕ

*

ಅರ್ಧ ಬರಿದಾದ ಮದ್ಯದ ಬಾಟಲಿ ಆಶಾವಾದಿಯ ದೃಷ್ಟಿಯಲ್ಲಿ ಅರ್ಧ ತುಂಬಿರುತ್ತದೆ. —ಅಜ್ಞಾತ

*

ಪ್ರಜಾತಂತ್ರ ನಮಗೆ ಕೊಟ್ಟಿರುವುದೇನು? ಸಮಾನಾಧಿಕಾರ ಅಂದರೆ ಸಮ್ಮಾನ-ಧಿಕ್ಕಾರ.

—ಸರೋಜಿನಿ ಪ್ರೀತಂ

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ

# ಸಹಚಿಂತನ

### ಶ್ರೇಷ್ಠ ಲೇಖನ

'ಕಸ್ತೂರಿ' ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾದ ಪುಸ್ತಕ ವಿಭಾಗವನ್ನು ಓದಿ ಸಂತೋಷವಾಯಿತು. ತಕ್ಷಣದಲ್ಲಿ ನನ್ನ ನೆನಪಿಗೆ ಹೊಳೆದವು ಜೋನಾಥನ್ ಸ್ವಿಫ್ಟ್ (ಗಲಿವರ್ಸ್ ಟ್ರಾವಲ್ಸ್), ಸ್ಯಾಮುಯಲ್ ಬಟ್ಲರ್ ಮತ್ತು ಜಾರ್ಜ್ ಆರ್ವೆಲ್‌ರವರ ಕೃತಿಗಳು. ಕನ್ನಡದಲ್ಲಿ ಈ **satire** ಜಾತಿಗೆ ಸೇರಿದ ಮೇಲ್ತರಗತಿಯ ಕೃತಿಗಳು ಬಹು ವಿರಳ. ಆಯಾ ಕಾಲದ ರಾಜಕೀಯ, ಸಾಮಾಜಿಕ ಅತಿರೇಕಗಳನ್ನು ಶಿಳಿಹಾಸ್ಯದ ಮಾತುಗಳಲ್ಲಿ ಪರಿಣಾಮಕಾರಿಯಾಗುವಂತೆ ಬರೆಯುವುದು ಸುಲಭವಲ್ಲ. ಯಾತ್ರಿಕರು ಇಲ್ಲಿ ಬಹಳ ಯಶಸ್ವಿಯಾಗಿದ್ದಾರೆ. ಇನ್ನೂ ಸ್ವಲ್ಪ ತೀಕ್ಷ್ಣ (ಖಾರ)ವಾಗಿದ್ದರೂ ಸರಿಯೆ. ಅವರ ಮುಂದಿನ ಬರಹಗಳನ್ನು ಸ್ವಾಗತಿಸುತ್ತೇವೆ.

ಬೆಂಗಳೂರು —ಎಸ್. ಕೃಷ್ಣಸ್ವಾಮಿ

### ಯೋಗ್ಯ ಅಭಿರುಚಿಯಲ್ಲ

ಖಂಡಿತವಾಗಿಯೂ ಈ ಪತ್ರವನ್ನು 'ಸಹಚಿಂತನ'ದಲ್ಲಿ ಪ್ರಕಟಿಸುವಿರಾ ?

ಇದೇನ್ ಹೀಗೆ ಬರೆಶೀರಾ? ಅವಿವೇಕ ಸ್ವಾಮಿ, ನಿಮಗೇನು ಬೇರೆ ಉತ್ತಮವಾದ ಸಾಹಿತ್ಯ ಬಿಂಬಿಸುವ, ಆನಂದ ನೀಡುವ, ಅಶ್ಲೀಲಕ್ಕೆ ಅವಕಾಶ ನೀಡದ ವ್ಯಂಗ್ಯಚಿತ್ರಗಳು ದೊರಕುವುದಿಲ್ಲವೆ ?

ಮತ್ತೊಮ್ಮೆ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಗಿರುವ ವ್ಯಂಗ್ಯಚಿತ್ರ "ಪೇಪರ್ ವೇಯ್ಟ್ ಆರ್ಡರ್ ಕ್ಯಾನ್ಸಲ್ ಮಾಡಿ" (ಪು. ೧೧೩) ನೋಡಿ ನೀವೇ ಆನಂದಿಸಿರಿ. ಆ ಚಿತ್ರ ಬರೆದವರಿಗೆ ಡಬಲ್ ಅಥವಾ ತ್ರಿಬಲ್ ಸಂಭಾವನೆಗೆ ರೆಕಮೆಂಡ್ ಮಾಡಿ.

ಕುರುಬರಹಳ್ಳಿ —ಕೆ. ಪೊನ್ನಪ್ಪ

ಸ್ವಾಮಿ, ನಾವು ಸುಮಾರು ಇಪ್ಪತ್ತೈದು, ವರ್ಷಗಳಿಂದ ನಿಮ್ಮ ಕನ್ನಡದ ಕಸ್ತೂರಿಯಾದ 'ಕಸ್ತೂರಿ'ಯನ್ನು ಓದುತ್ತಿದ್ದೇನೆ. ಓದಿ ಬಹಳ ಮೆಚ್ಚಿಕೊಂಡಿದ್ದೇನೆ. ಆದರೆ ಏಪ್ರಿಲ್ ತಿಂಗಳ

[illegible] ಪ್ರಕಟವಾಗಿರುವ ವ್ಯಂಗ್ಯಚಿತ್ರ ಉದ್ಯೋಗದಲ್ಲಿರುವ ಮಹಿಳೆಯರಿಗೆ ಬೇಸರ ಮತ್ತು ನೋವು ತರಿಸುವಂತಿದೆ.

ಬೆಂಗಳೂರು —ಬಿ. ಲೀಲಾವತಿ

[ಈ ವ್ಯಂಗ್ಯಚಿತ್ರದ ಪ್ರಕಟನೆಯಿಂದ ಯಾರಿಗಾದರೂ ನೋವಾಗಿದ್ದರೆ ವಿಷಾದಿಸುತ್ತೇವೆ. ಸಂ.]

### ಕೊಡವೂರು ಭಟ್ಟರು

"ಕೊಡವೂರು ಅನಂತರಾಮಭಟ್ಟರು" ಸಂಸ್ಕೃತ ವಿದ್ವಾಂಸರೊಬ್ಬರ ದುರಂತ ಕಥೆ ಆಗಿರದೆ ನಮ್ಮಲ್ಲಿ ನಶಿಸಿ ಅಳಿದುಹೋಗುತ್ತಿರುವ ಅನೇಕ ಜನರ ಕಥೆಯಲ್ಲವೆ ?

ಬೆಳಗಾಂವಿ —ಆರ್. ಕೆ. ಕುಲಕರ್ಣಿ

ಕೊಡವೂರು ಅನಂತರಾಮಭಟ್ಟರ ಬಗೆಗೆ ಅನೇಕ ವರ್ಷಗಳ ಹಿಂದೆ 'ಕಸ್ತೂರಿ'ಯಲ್ಲೇ ಲೇಖನವೊಂದನ್ನು ಓದಿದ ನೆನಪು.

ಶಿರಸಿ (ಉ.ಕ.) —ನರಸಿಂಹ ಮೋಟನ್ಸರ

[ಈ ಲೇಖನವನ್ನು ೧೯೬೩ರ ಜುಲೈ ಸಂಚಿಕೆಯಿಂದಲೇ ಆಯ್ದುಕೊಳ್ಳಲಾಗಿದೆ ಎಂಬುದನ್ನು ಲೇಖನದೊಟ್ಟಿಗೇ ಪ್ರಕಟಿಸಿದ್ದೇವಲ್ಲ. —ಸಂ.]

### ಸಿನಿಮಾ ಯೋಗ್ಯ ಕಥೆ

ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾದ 'ಫ್ಲೈಟ್ ನಂ. ೩೦೩' ಇಂಗ್ಲಿಷ್ ಕಥೆ ಕುತೂಹಲಕರವಾಗಿದ್ದು ಸಿನಿಮಾ ಕಥೆಯಂತೆ ಆಸಕ್ತಿ ಕೆರಳಿಸುತ್ತದೆ. ನಾನೇನಾದರೂ ಚಲನಚಿತ್ರ ನಿರ್ಮಾಪಕನಾಗಿರುತ್ತಿದ್ದರೆ ರಾಜಕುಮಾರರನ್ನು ನಾಯಕ ಪಾತ್ರಕೆ ನೇಮಿಸಿಕೊಂಡು ಕಥೆಯನ್ನಾಧರಿಸಿ ೭೦ ಎಂ.ಎಂ. ನಲ್ಲಿ ಕನ್ನಡ ಚಿತ್ರವೊಂದನ್ನು ತಯಾರಿಸುತ್ತಿದ್ದೆ...!

ಕೃಷ್ಣರಾಜನಗರ —ಎಡತೊರೆ ಉಮೇಶ್

### ಮೋನಾ ಲಿಸಾ

ಮೋನಾ ಲಿಸಾ ಚಿತ್ರದ ಹಿನ್ನೆಲೆ ಕಥೆಯನ್ನು ಪ್ರಕಟಿಸಿರುವಿರಿ, ವಂದನೆಗಳು. ಅದರ ಬಗ್ಗೆ ಬಂದಿರುವ ಟೀಕೆಗೆ ನನ್ನ ಉತ್ತರ:

೧) 'ನಾಲ್ಕಾರು ದಿನಗಳಲ್ಲಿ ಆ ಚಿತ್ರ ಜೀವ ತುಂಬಿಕೊಳ್ಳತೊಡಗಿತು' ಎಂದರೆ,' It began to take shape' ಎಂದರ್ಥ ವಿನಾ, ನಾಲ್ಕಾರು ದಿನಗಳಲ್ಲಿ ಆ ಚಿತ್ರ ಮುಗಿಯಿತು ಎಂದರ್ಥವಲ್ಲ.

ಆದಷ್ಟು ಬೇಗ ಭಾವಚಿತ್ರವನ್ನು ಮುಗಿ

ಸಬೇಕೆಂಬ ಹುರುಪು ಲಿನಾರ್ಡೊ ಡ ವಿನ್ಸಿಗೆ ಇದ್ದರೂ, ಒಳ್ಳೇ ಭರದಿಂದ ಸಾಗಿದ ಚಿತ್ರ ಮುಕ್ಕಾಲು ವಾಸಿ ಮುಗಿದಾಗ ಗಕ್ಕನೆ ನಿಂತುಬಿಟ್ಟಿತು. ಚಿತ್ರ ಎಂದಿಗೂ ಮುಗಿಯುವುದೇ ಇಲ್ಲವೇನೋ ಎನ್ನುವಷ್ಟರ ಮಟ್ಟಿಗೆ." ಇದಕ್ಕೆ ಕಾರಣ, ಚಿತ್ರಕಾರನ ಅತಿ ಚಂಚಲ ಪ್ರವೃತ್ತಿ ಮತ್ತು ಆಗಿನ ರಾಜಕೀಯ ಸ್ಥಿತಿ. ಅವನ್ನೆಲ್ಲ ಬರೆದರೆ ಲೇಖನ ಬಹಳ ನೀಳವಾಗಬಹುದು, ಎಂದುಕೊಂಡು ಹಾರಿಸಿ ಬಿಟ್ಟ. ಈಗನಿಸುತ್ತದೆ, ಮುಖ್ಯವಾದ ಆ ಕೆಲ ಅಂಶಗಳನ್ನು ಲೇಖನದಲ್ಲಿ ತರಬೇಕಾಗಿದ್ದುದು ನನ್ನ ಕರ್ತವ್ಯ; ಓದುಗರಿಗೂ ಸಮಾಧಾನವಾಗುತ್ತಿತ್ತು ಎಂದು. ಓದುಗರಲ್ಲಿ ಇಷ್ಟೊಂದು ವಿಚಾರ ಪ್ರಜ್ಞೆ ಇರುವುದು ಬಹಳ ಸಂತೋಷ.

೨) ನಾನು ಯಾವುದಾದರೊಂದು ಇಂತಹ ಲೇಖನವನ್ನು ಬರೆಯಬೇಕಾದರೆ ಬೇಕಾದಷ್ಟು ಗ್ರಂಥಗಳಿಂದ ಪ್ರಭಾವಿತಳಾದ ಮೇಲೆಯೇ. ಈ ಮಾತು ಮೋನಾ ಲಿಸಾಗೂ ಅನ್ವಯಿಸುತ್ತದೆ.

ಬೆಂಗಳೂರು –ಎಸ್. ಪಂಕಜ

### ಇದು ತರವಲ್ಲ

'ರೂ. ೧೦,೦೦೦ ಗೆಲ್ಲಿರಿ', 'ಕೇವಲ ರೂ. ೨೦/–ಕ್ಕೆ ಸ್ವಿಸ್ ಮಾದರಿ ೧೭ ಜ್ಯುಯೆಲ್ಲುಗಳ ವಾಚು,' 'ಸ್ವಂತ ರಕ್ಷಣೆ', 'ಭಾರಿಗೆ ಕೊಡುಗೆ' ಇತ್ಯಾದಿ ಕೀಳು ಹಾಗೂ ಮೋಸದ ಜಾಹಿರಾತುಗಳನ್ನು ಪ್ರಕಟಿಸದಿರಿ. ಇವು ಕಸ್ತೂರಿಯಂತಹ ಪತ್ರಿಕೆಗೆ ತರವಲ್ಲ.

'ಗಾಡ್ ಫಾದರ್' ಆಂಗ್ಲ ಕಾದಂಬರಿಯನ್ನು ದಯವಿಟ್ಟು ಪುಸ್ತಕ ವಿಭಾಗದಲ್ಲಿ ಪ್ರಕಟಿಸಿ.

ಮೈಸೂರು – ಅ. ನಾ. ಪ್ರಭಾಕರ

### ಎಸ್. ವೆಂಕಟರಾಮು

ಏಪ್ರಿಲ್ 'ಕಸ್ತೂರಿ'ಯಲ್ಲಿ ಎಸ್. ಆರ್. ವಿಜಯ ಶಂಕರರ "ಎಲ್ಲರಿಗಾದ ಸಮಾಜವಾದಿ–ಎಸ್. ವೆಂಕಟರಾಮು" ಲೇಖನ ಶ್ರವಣಬೆಳಗೊಳದ ಬಾಹುಬಲಿಯನ್ನು ಎರಡಂಗುಲದ ಚಿತ್ರದಲ್ಲಿ ತೋರಿಸಿದಂತೆ ಇದೆ. ಇದು ವೆಂಕಟರಾಮರ ಅಸಂಖ್ಯಾತ ಸ್ನೇಹಿತರಿಗೂ ಸಾವಿರಾರು ಅಭಿಮಾನಿಗಳಿಗೂ ತೃಪ್ತಿ ನೀಡುವುದಿಲ್ಲ. ಅವರ ಪಾಂಡಿತ್ಯ, ಚಿಂತನಶೀಲತೆ ಮತ್ತು ಎಂತಹ ಗಂಭೀರ ಸನ್ನಿವೇಶಗಳಲ್ಲೂ ಅವರು ತೋರುತ್ತಿದ್ದ ಧೈರ್ಯ, ಸಾಹಸ, ಕಾರ್ಯತತ್ಪರತೆಗಳು, ಕರ್ನಾಟಕದಲ್ಲಿ ಮಾತ್ರವಲ್ಲ, ಭಾರತದ ಉದ್ದಗಲಕ್ಕೂ ಹೊರನಾಡುಗಳಿಗೂ ಸುಪರಿಚಿತವಾಗಿವೆ. ಆದ್ದರಿಂದ ವೆಂಕಟರಾಮರನ್ನು ಹೆಚ್ಚು ನಿಕಟವಾಗಿ ಬಲ್ಲವರಿಂದಲೂ ಒಂದು ಲೇಖನವನ್ನು ಆಹ್ವಾನಿಸಿ ಪ್ರಕಟಿಸುವುದು ಉಚಿತ.

ಬೆಂಗಳೂರು – ಎ. ಚಿದಂಬರಯ್ಯ

### ಪುಟ ಹೆಚ್ಚಿಸಿ

ಬೇರಾವ ಮಾಸಪತ್ರಿಕೆಯ ಬೆಲೆಯೂ ಏರದೆ, ಕಸ್ತೂರಿ ಏಕ್‌ದಂ ೧–೫೦ರಿಂದ ೨ಕ್ಕೆ ಏಗರಿದಾಗ, ಹೆಚ್ಚಿನ ಪುಟಗಳನ್ನು ನಿರೀಕ್ಷಿಸಿದ್ದೆ. ಆದರೆ ಪುಟಸಂಖ್ಯೆ ಹೆಚ್ಚದ್ದು ನೋಡಿ ನಿರಾಶೆಯಾದರೂ, 'ಕಸ್ತೂರಿ ಓದುವವರು, ಎಷ್ಟು ಬೆಲೆಯಾದರೂ, ಖಂಡಿತ ಓದುತ್ತಾರೆ' ಅಂತ ಸಮಾಧಾನಪಟ್ಟುಕೊಳ್ಳಬೇಕಾಯಿತು. ಸಾಧ್ಯವಾಗುವುದಲ್ಲಿ ಪುಟ ಸಂಖ್ಯೆಯನ್ನು ೧೫೦ಕ್ಕಾದರೂ ಹೆಚ್ಚಿಸಿ.

ಏಪ್ರಿಲ್ ಸಂಚಿಕೆಯಲ್ಲಿನ ಭಟ್ಟರ (ಕೊಡವೂರು) ಬಗ್ಗೆ ಲೇಖನ ತುಂಬ ಹೃದಯಸ್ಪರ್ಶಿಯಾಗಿದೆ. ಲೇಖನ ಓದಿದ ಮರುದಿನವೇ, ಸಂಜೆ ತರುಗಾಡಿಕೊಂಡು ಬರಲು ನಾನೂ ನನ್ನ ಸ್ನೇಹಿತನೂ ಕೊಡವೂರಿಗೆ ಹೋದೆವು. ಭಟ್ಟರ ಬಗ್ಗೆ ಕೆಲವು ಹಿರಿಯರನ್ನು ಪ್ರಶ್ನಿಸಿದರೂ, ಆಶಾದಾಯಕ ಪ್ರತಿಕ್ರಿಯೆ ಬಾರದ್ದು ನೋಡಿ ನಿರಾಶೆಯಾಯಿತು. 'ಇಷ್ಟೇ ಅಲ್ಲವೆ? ನಾವು ದೊಡ್ಡವರನ್ನು ನೆನೆಸಿಕೊಳ್ಳುವುದು' ಎನ್ನಿಸಿತು.

ಹಳೆಯ ಲೇಖನಗಳನ್ನು ಆಯ್ದು ಪ್ರಕಟಿಸುತ್ತಿರುವ ನಿಮಗೆ ನಾನು ಆಭಾರಿ. ದಯವಿಟ್ಟು ಹಳೆಯ ಕಸ್ತೂರಿಗಳ ಒಂದೆರಡು ಉತ್ತಮ 'ಪುಸ್ತಕ ವಿಭಾಗ'ಗಳನ್ನು, ಪ್ರಕಟಿಸುವಿರಾ?

'ಕಸ್ತೂರಿ' ಎಂದಿನಂತೇ ತನ್ನ ಕಂಪು ಬೀರುತ್ತಿರಲಿ.

ಉಡುಪಿ – ಎ. ಗುರುಪ್ರಸಾದ

[ಕಳೆದ ೨೫ ವರ್ಷಗಳಲ್ಲಿ 'ಕಸ್ತೂರಿ'ಯ ಮುಖಬೆಲೆ ಹೆಚ್ಚಾದದ್ದು ಇದು ನಾಲ್ಕನೆಯ ಸಲ ಮಾತ್ರ. ೧೯೮೬ ಸಪ್ಟಂಬರ್ ನಂತರ ಎರಡು ವರ್ಷಗಳಲ್ಲೇ ಮತ್ತೊಮ್ಮೆ ಬೆಲೆ ಏರಿಸಬೇಕಾಗಿ ಬಂದುದು ತೀರ ಅನಿವಾರ್ಯ ಕಾರಣಗಳಿಗಾಗಿ ಮಾತ್ರ. –ಸಂ.]

# ಕಸ್ತೂರಿ

ವರ್ಷ : ೨೫ ಸಂಚಿಕೆ : ೯

ಮೇ ೧೯೮೧



## ಸಾವು-ಬದುಕು

ನಿಷ್ಕಾರಣವಾಗಿ ತನ್ನ ಪ್ರಜೆಗಳನ್ನು ಪೀಡಿಸುವ ಓರ್ವ ಕ್ರೂರ ರಾಜನಿದ್ದ.

ತಪ್ಪಿತಸ್ಥರನ್ನು ಶಿಕ್ಷಿಸುವುದಕ್ಕೆ ಅವನೊಂದು ಉಪಾಯವನ್ನು ಹುಡುಕಿದ್ದ. ಅದೆಂದರೆ ಎರಡು ಕಾಗದ ತುಂಡುಗಳನ್ನು ತೆಗೆದುಕೊಂಡು, ಒಂದರ ಮೇಲೆ 'ಸಾವು' ಎಂದೂ ಇನ್ನೊಂದರ ಮೇಲೆ 'ಬದುಕು' ಎಂದೂ ಬರೆದು, ಅವನ್ನು ಮಡಿಚಿ, ಅವೆರಡರಲ್ಲಿ ಒಂದನ್ನು ಆಯ್ದು-ಕೊಳ್ಳಲು ತಪ್ಪಿತಸ್ಥನಿಗೆ ಹೇಳುತ್ತಿದ್ದ. ಆ ಅಪ-ರಾಧಿಯು 'ಸಾವು' ಎಂದು ಬರೆದ ಚೀಟಿಯನ್ನು ಎತ್ತಿಕೊಂಡರೆ, ಅವನನ್ನು ವಧಸ್ಥಾನಕ್ಕೆ ಕಳಿಸು-ತ್ತಿದ್ದ, 'ಬದುಕು' ಎಂದು ಬರೆಯಲಾದ ಕಾಗದ ವನ್ನೆತ್ತಿದ್ದಾದರೆ ಅವನನ್ನು ಬದುಕಲು ಬಿಟ್ಟು ಕೊಡುತ್ತಿದ್ದ.

ಒಂದು ಸಲ ಓರ್ವ ಪ್ರಜೆಯು ರಾಜನನ್ನು ಕಂಡಕೂಡಲೇ ನಮಸ್ಕಾರವನ್ನು ಮಾಡದೇ ಉಳಿದ ಅಪರಾಧಕ್ಕಾಗಿ, ರಾಜನ ಮುಂದೆ ತರಲ್ಪಟ್ಟ. ಚೀಟಿಗಳನ್ನು ಬರೆದು ಆ ಅಪರಾಧಿಯ ಮುಂದೆ ಇಟ್ಟರೆ, ಅವನು ಬದುಕಿನ ಚೀಟಿಯನ್ನು ತೆರೆದರೆ ಬದುಕಿ ಬಿಡುವನಲ್ಲ ಎಂಬ ಯೋಚನೆಯಿಂದ ರಾಜ ಚೀಟಿಗಳಲ್ಲಿ ಬರಿ 'ಸಾವು' ಎಂದೇ ಬರೆದು ಆತನ ಮುಂದೆಸೆದು ಎತ್ತಲು ಹೇಳಿದ.

ರಾಜ ಚೀಟಿಯನ್ನು ಬರೆಯುವ ಮುನ್ನ ಒಂದು ಕ್ಷಣ ವಿಚಾರತಂದ್ರಿಯಲ್ಲಿದ್ದ ಬಗೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದ ಆ ಪ್ರಜೆ ಒಂದು ಕಾಗದದ ತುಂಡನ್ನು ಬಾಯಲ್ಲಿ ಹಾಕಿಕೊಂಡು ಜಗಿದು ನುಂಗಿಬಿಟ್ಟ. ರಾಜ ಮನದಲ್ಲೇ ನಗುತ್ತಿದ್ದ. ಅಷ್ಟರಲ್ಲೇ ಆ ಪ್ರಜೆ ರಾಜನಿಗೆ ಹೇಳಿದ,

"ಪ್ರಭುವೆ, ಈ ಇನ್ನೊಂದು ಚೀಟಿಯಲ್ಲಿ ಏನು ಬರೆದಿದೆಯೆಂಬುದನ್ನು ತಾವೇ ನೋಡಿರಿ. ಅದರಲ್ಲಿ 'ಬದುಕು' ಎಂದು ಬರೆದಿದ್ದಾದರೆ ನಾನು ಸಾವಿನ ಚೀಟಿಯನ್ನು ಎತ್ತಿದಂತಾಯಿತು. ಕಾರಣ ನನ್ನನ್ನು ಗಲ್ಲಿಗೇರಿಸಿರಿ. ಒಂದು ವೇಳೆ ಆ ಚೀಟಿಯಲ್ಲಿ 'ಸಾವು' ಎಂದು ಬರೆದಿದ್ದರೆ–ನಾನು ಮುಕ್ತನಾದಂತೆ."

—ರಶ್ಯನ್ ಜಾನಪದ ಕತೆ

# ಸತ್ಯದ ಮೃತ್ಯು

ನೀಲಾಕಾಶದ ದೇವತೆಗಳೆಲ್ಲ ಸೇರಿ ಸತ್ಯವನ್ನು ಭೂಮಿಗೆ ಕಳಿಸುವಾಗ ಆಶೀರ್ವದಿಸಿದರು: "ನೀನು ಮಾತನಾಡುವ ವರೆಗೆ ಅಲ್ಲಿ ಎಲ್ಲರ ಬಾಯಲ್ಲಿ ಸುಖದ ನಗೆ ಕಾಣುತ್ತದೆ, ಎಲ್ಲರ ಕಣ್ಣುಗಳಲ್ಲಿ ಆನಂದ ಹೊಮ್ಮುತ್ತದೆ, ಎಲ್ಲರ ಮೂಗು ಸುಖ ಸೌರಭವನ್ನು ಮೂಸುತ್ತದೆ ಮತ್ತು ಎಲ್ಲೆಡೆಗೆ ಸಿಹಿ ನೀರು ಪ್ರವಹಿಸುತ್ತದೆ, ಬರಗಾಲ ಬಾಯಿ ಮುಚ್ಚಿಕೊಂಡು ಬಿದ್ದುಕೊಂಡಿರುತ್ತದೆ. ಒಟ್ಟಿನಲ್ಲಿ ನೀನು ಮಾತನಾಡುತ್ತ ಇರುವವರೆಗೂ ಅಲ್ಲಿ ಎಲ್ಲವೂ ಶೋಭಾಯಮಾನವಾಗಿರುತ್ತದೆ. ಆದ್ದರಿಂದ ನೀನೆಂದೂ ಮಾತನಾಡುವುದನ್ನು ನಿಲ್ಲಿಸಬೇಡ."

ಭೂಮಿಗೆ ಬಂದ ಸತ್ಯ ಲಕ್ಷಾಂತರ ವರ್ಷಗಳ ವರೆಗೆ ಮಾತನಾಡುತ್ತಲೇ ಇತ್ತು, ಭೂಮಿಯ ಮಕ್ಕಳು ಸುಖವಾಗಿಯೇ ಇದ್ದರು. ಆದರೆ ದಸ್ಯುಗಳಿಗಿದು ಸರಿಬರಲಿಲ್ಲ. ಏನಾದರೂ ಚೇಷ್ಟೆ ಮಾಡಬೇಕೆಂದುಕೊಂಡರು. ದೊಡ್ಡದೊಂದು ಚಿನ್ನದ ಹಾರೆಯನ್ನು ತಂದು ಸತ್ಯದ ಬಾಯಿಗೆ ಬಡಿದರು. ನಂತರ ಕಣ್ಣಿಗೆ ಚುಚ್ಚಿದರು.

ಸತ್ಯ ಈಗ ನೋಡಲು ಅಶಕ್ತ, ಮಾತಾಡಲೂ ಅಶಕ್ತ. ದಿನವಿಡೀ ಮೂಕವಾಗಿ ರೋದಿಸಿತು. ಅದರ ಅಳು ಮತ್ತು ಮೌನ ಕಂಡು ದಸ್ಯುಗಳಿಗೆ ಹಿರಿಹಿರಿ ಹಿಗ್ಗಾಯಿತು. ಪಾಪ, ಸತ್ಯ ಸೊರಗಿತು ಕೊರಗಿತು, ದೇವತೆಗಳ ಆಜ್ಞೆಯನ್ನು ಉಲ್ಲಂಘಿಸುವಂತಾಯಿತಲ್ಲಾ ಎಂದು ಮರ ಮರ ಮರುಗಿತು. ಹಾಗೆಯೇ ಸತ್ತುಹೋಯಿತು.

ಅದು ಸತ್ತದ್ದೆ ತಡ ದಸ್ಯುಗಳ ದೋಸ್ತ ಬರಗಾಲ ತನ್ನ ಮೈ ಒದರಿಕೊಂಡೆದ್ದಿತು. ಭೂಮಿಯಲ್ಲೆಲ್ಲ ಸಂಚರಿಸತೊಡಗಿತು.

–'ಮಂದಾಕ್ರಾಂತಾ'ದಿಂದ



**ಸಿಡಿಲು ಬಂದೆರಗಿತೆಂದರೆ ದುರ್ಮರಣ ಬಂದಿತೆಂದೇ ಅರ್ಥ. ಆದರೆ ಅಮೇರಿಕದ ಎಡ್ವಿನ್ ರಾಬಿನ್‌ಸನ್ ಎಂಬವನಿಗೆ ಅದು ಭಾಗ್ಯದ ಬಾಗಿಲನ್ನೇ ತೆರೆಯಿತು—ಕಾರು ಅಪಘಾತದಲ್ಲಿ ಕಳೆದುಕೊಂಡಿದ್ದ ದೃಷ್ಟಿಯನ್ನು, ಶ್ರವಣಶಕ್ತಿಯನ್ನು ಆತ ಸಿಡಿಲು ಬಡಿದಾಗ ತಿರುಗಿ ಪಡೆದುಕೊಂಡ. ಇದರೊಟ್ಟಿಗೆ ಅವನ ಬೋಳು ತಲೆಯೂ ಚಿಗುರ ತೊಡಗಿ ಕೆಲ ದಿನಗಳಲ್ಲಿ ಆತ ದೀರ್ಘಕೇಶಿಯೂ ಆದ. ನಿಜ, ವಿಧಿವೈಚಿತ್ರ್ಯವನ್ನು ಬಲ್ಲವರಾರು?**

# ಹೈಬ್ರಿಡಾಯಣ

**ರಾವಬಹಾದ್ದೂರ**

ಹೈಬ್ರಿಡ್ ಮೆಕ್ಕೆ ಜೋಳದ ಬೀಜೋತ್ಪಾದನೆಯಲ್ಲಿ ಪಡೆದ ಯಶಸ್ಸಿನಿಂದ ನಾನೊಬ್ಬ ಪ್ರಗತಿಶೀಲ ಬೇಸಾಯಗಾರನೆಂದು ಹೆಸರುಗಳಿಸಿದೆ. ಪ್ರಗತಿಶೀಲ ಬೇಸಾಯಗಾರನೆಂದ ಮೇಲೆ ಕೃಷಿ ಇಲಾಖೆಯುವರು ಹಂಚುವ ಹೊಸ ಹೊಸ ತಳಿಯ ಬೀಜಗಳನ್ನು ಪಡೆಯುವಲ್ಲಿ ಅಗ್ರಪ್ರಾಶಸ್ತ್ಯ ಪಡೆದ ವ್ಯಕ್ತಿ ನಾನಾದೆನೆಂದು ಬೇರೆ ಹೇಳಬೇಕಾಗಿಲ್ಲ.

"ಹೈಬ್ರಿಡ್ ಸಿ.ಎಚ್.ಎಸ್–೧ ಬೀಜೋತ್ಪಾದನೆ ಮಾಡಿರಿ. ನಿಮ್ಮಂಥ ಪ್ರಗತಿಶೀಲರೇ ಅದಕ್ಕೆ ಯೋಗ್ಯ."

ಇದು ಕೃಷಿ ಅಧಿಕಾರಿಗಳು ಬೀಜೋತ್ಪಾದನೆಯ ಕ್ಷೇತ್ರ ವಿಸ್ತರಣೆಗಾಗಿ ನಮ್ಮಂಥ ಬಕರಾಗಳನ್ನು ಹುರಿದುಂಬಿಸಲು ಬಳಸುವ ಮಂತ್ರ.

ಮುಖ ಸ್ತುತಿಗೆ ದೇವರೇ ಬಲಿ ಬೀಳುವಾಗ ನನ್ನಂಥ ಹುಲು ಮಾನವ ಯಾವ ಗಿಡದ ತೊಪ್ಪಲು?

"ಆಗಲಿ. ಐದು ಎಕರೆ ಕ್ಷೇತ್ರಕ್ಕೆ ಸಾಲುವಷ್ಟು ಫೌಂಡೇಶನ್ ಬೀಜ ನನಗಿರಲಿ."

"ಛೇ, ಕನಿಷ್ಟ ೨೦ ಎಕರೆ ಬೀಜ ನಿಮಗಾಗಿ ಮೀಸಲಿಡುವ ನಿರ್ಣಯ ನಮ್ಮದು. ಐದು ಎಕರೆ ಅನುಭವವಿಲ್ಲದವರು ಕೇಳಬೇಕು. ಕೆಲವೇ ತಿಂಗಳಲ್ಲಿ ಲಕ್ಷಾಧೀಶರಾಗುವ ಅವಕಾಶವನ್ನು ಕಳೆದುಕೊಳ್ಳುವದು ನಿಮಗೆ ಸಲ್ಲದ ಮಾತು. ಸಾವಿರ ರೂಪಾಯಿಗೆ ಕ್ವಿಂಟಲ್ ಬೀಜ. ಇಪ್ಪತ್ತು ಎಕರೆ ಕ್ಷೇತ್ರದಲ್ಲಿ ಬೀಜೋತ್ಪಾದನೆ ಮಾಡಿದರೆ ವೆಚ್ಚ ಕಳೆದು ನಿಕ್ಕಿ ೧ ಲಕ್ಷ ರೂಪಾಯಿ ಬ್ಯಾಂಕಿನಲ್ಲಿಡಬಹುದು. ಹೋದ ಸಲ ಎಂಟು ಎಕರೆಯಲ್ಲಿ ೪೦ ಸಾವಿರ ಗಳಿಕೆ ನಿಮ್ಮದಾಗಿರುವಾಗ ಹಿಂಜರಿಯುವುದೇಕೆ?

ನನ್ನನ್ನು ಲಕ್ಷಾಧೀಶನನ್ನಾಗಿ ಮಾಡುವ ಸದುದ್ದೇಶದಿಂದ ೨೦ ಎಕರೆಗೆ ಸಾಲುವಷ್ಟು ಫೌಂಡೇಶನ್ ಬೀಜ ಕೊಡಲು ಯೋಚಿಸಿದ ಅಧಿಕಾರಿಯ ಸ್ನೇಹಭಾವನೆಗೆ ತಲೆಬಾಗದಷ್ಟು ನಿಷ್ಠುರನು ನಾನಲ್ಲ. ಇಷ್ಟು ವಿಸ್ತಾರವಾದ ಕ್ಷೇತ್ರಕ್ಕೆ ನೀರಾವರಿ ಸೌಲಭ್ಯ ಒದಗಿಸುವಂಥ ದೊಡ್ಡ ಬಾವಿ ಇಲ್ಲ. ಬಹಳವಾದರೆ ಎಂಟು ಎಕರೆಗೆ ಸಾಲುವಷ್ಟು ನೀರನ್ನು ಅದು ಒದಗಿಸ

ಬಹುದು. ಇದು ನನ್ನ ನಿಜವಾದ ತೊಂದರೆ, ಈ ವಿಚಾರವನ್ನು ತಿಳಿಸಿದಾಗ,

"ಅಲ್ರೀ, ಇನ್ನೊಂದು ಹೊಸ ಬಾವಿಯನ್ನೇ ತೋಡಿಸುವ ಬಲ ನಿಮಗಿರುವಾಗ ಹೀಗೆ ಹೇಳಬಹುದೇ? ಮನಸ್ಸಿದ್ದರೆ ಮಾರ್ಗವಿದ್ದೇ ಇರುವದು. ನಿಮ್ಮ ಅಣ್ಣನ ಹೊಲಕ್ಕೆ ಹಳ್ಳದ ನೀರಿನಿಂದ ನೀರಾವರಿ ಸೌಕರ್ಯ ಒದಗಿಸಬಹುದು ಅಂತಾ ಹೇಳತಿದ್ರಿ. ಆ ಹೊಲದಲ್ಲಿ ಬೀಜೋತ್ಪಾದನೆಯ ಪ್ರಯೋಗವನ್ನೇಕೆ ಮಾಡಬಾರದು?"

"ಅವರಿಗೇ ಈ ಕೆಲಸ ವಹಿಸಿ ಕೊಟ್ಟರಾಯಿತಲ್ಲ, ನಿಮಗೆ ೨೦ ಎಕರೆ ಬೀಜೋತ್ಪಾದನೆಯ ಕ್ಷೇತ್ರ ಸಿಕ್ಕಂತಾಗುವದು."

"ಛೇ, ಅನನುಭವಿಕರಿಗೆ ಈ ಕೆಲಸ ವಹಿಸಿ ಕೊಡಲಿಕ್ಕೆ ಬರುವದಿಲ್ಲ. ನೀವು ಅನುಭವಿಕರು, ಪ್ರಗತಿಶೀಲ ರೈತರು. ನಿಮ್ಮ ಹೆಸರಿಗೆ ಇಷ್ಟು ದೊಡ್ಡ ಕ್ಷೇತ್ರ ಮಂಜೂರು ಮಾಡಲು ಮೇಲಧಿಕಾರಿಗಳು ಆಕ್ಷೇಪಿಸುವದಿಲ್ಲ. ನಾವು ಈ ಕೆಲಸ ನಿಮಗೆ ವಹಿಸಿಕೊಡುವವರು. ಬೇರೆಯವರ ಹೆಸರಿನಿಂದ ಫೌಂಡೇಶನ್ ಬೀಜ ಕೊಡಲಿಕ್ಕೆ ಸಾಧ್ಯವಾಗದು."

ನನ್ನ ಅನುಭವದ ಬಗ್ಗೆ, ಪ್ರಗತಿಶೀಲ ರೈತನೆಂಬ ಹೆಸರು ಪಡೆದ ನನ್ನ ಬಗ್ಗೆ ಇಷ್ಟೊಂದು ವಿಶ್ವಾಸದಿಂದ ಕೃಷಿ ಅಧಿಕಾರಿಗಳು ಮಾತನಾಡುವಾಗ ನಾನು ಅವರನ್ನು ನಿರಾಶೆಗೊಳಿಸಿದರೆ ಹೇಗೆ? ಅವರು ಹೇಳುವದೆಲ್ಲ ನನ್ನ ಕಲ್ಯಾಣಕ್ಕಾಗಿ. ಹೀಗಿರುವಾಗ ಭಾಗ್ಯಲಕ್ಷ್ಮಿಯು ಬಾಗಿಲಿಗೆ ಬರುವ ಸೂಚನೆಯನ್ನು ಅವರು, ಬಾಯಿ ಬಿಚ್ಚಿ ಕೊಡುತ್ತಿರುವಾಗ 'ಒಲ್ಲೆ' ಅನ್ನುವದು ಹೆಡ್ಡತನ ಎಂದು ನನ್ನ ಸ್ಥಳದಲ್ಲಿ ನೀವೇ ಇದ್ದರೂ ನಿಮಗೆ ಖಂಡಿತ ಅನಿಸುತ್ತಿತ್ತು.

ನನ್ನ ಅಣ್ಣನನ್ನು ವಿಚಾರಿಸಿ ಬೀಜಕ್ಕಾಗಿ ಅರ್ಜಿ ಸಾದರ ಪಡಿಸುವದಾಗಿ ಹೇಳಿ ಮನೆಗೆ ಬಂದೆ.

ಬೀಜೋತ್ಪಾದನೆಯಲ್ಲಿ ನನ್ನ ಯಶೋದುಂದುಭಿ ಮೊಳಗುವದನ್ನು ಕೇಳಿ ಅರಿತ ನನ್ನ ಅಣ್ಣನಿಗೂ ಸಂತೋಷವಾಯಿತು.

"ನನ್ನ ಹೊಲವನ್ನು ಸರಿಪಾಲಿನಿಂದ ಇದೊಂದು ಬೆಳೆಗಾಗಿ ನಿನಗೆ ಕೊಡುವೆ. ಬೀಜ, ಗೊಬ್ಬರ, ಆಳು ಕಾಳು ಎಲ್ಲಾ ಖರ್ಚು ನೀನೇ ಮಾಡಬೇಕು. ಬೀಜ ಮಾರಿ ಬಂದ ಹಣದಲ್ಲಿ ನೀನು ಮಾಡಿದ ವೆಚ್ಚದ ಹಣ ಪಡೆದು ಉಳಿದದ್ದರಲ್ಲಿ ಅರ್ಧಪಾಲು ಕೊಟ್ಟರೆ ಸಾಕು" ಎಂದು ಹೇಳಿದ.

ಸಮಸ್ಯೆ ಪರಿಹಾರದ ಸಂತೋಷದಲ್ಲಿ ಮಾರನೇ ದಿನವೇ ಕೃಷಿ ಇಲಾಖೆಯ ಅಧಿಕಾರಿಯನ್ನು ಕಂಡು ಇಪ್ಪತ್ತು ಎಕರೆ ಫೌಂಡೇಶನ್ ಬೀಜ ಕೊಡಲು ಅತವಶ್ಯವಿದ್ದ ಅರ್ಜಿ ಫಾರ್ಮಿನಲ್ಲಿ ಎಲ್ಲ ಮಾಹಿತಿ ತುಂಬಿ ಅದನ್ನು ಸಾದರ ಪಡಿಸಿದೆ. ಬೀಜದ ಬೆಲೆ ಮುಂಗಡವಾಗಿ ಅರ್ಜಿಯೊಂದಿಗೆ ಹಾಜರ ಪಡಿಸಬೇಕು ಎಂದು ಅವರು ಹೇಳಿದಾಗ ೧೪೦೦ ರೂಪಾಯಿಯ ಚೆಕ್ಕನ್ನೂ ಅದಕ್ಕೆ ಲಗತ್ತಿಸಿ ಕೊಟ್ಟೆ.

ಮೇ ತಿಂಗಳ ಮೊದಲನೇ ವಾರದಲ್ಲಿ ದಿಲ್ಲಿಯಿಂದ ಬರಬೇಕಾಗಿದ್ದ ಫೌಂಡೇಶನ್ ಬೀಜ ಬರಲೇ ಇಲ್ಲ. ಜೂನ್ ತಿಂಗಳು ಕಳೆಯಿತು. ಕೇವಲ ಗಂಡು ಬೀಜಗಳ ಪಾರ್ಸಲ್ ಬಂತು. ಹೆಣ್ಣು ಬೀಜವನ್ನು ಗಂಡು ಬೀಜದ ಜೊತೆಗೆ ಬಿತ್ತಬೇಕು. ಹೆಣ್ಣು ಬೀಜ ಬಂದಿಲ್ಲ. ಬೇಗಕಳಿಸಿರಿ. ಬಿತ್ತಿಗೆಗೆ ಹರಕತ್ ಆಗಿದೆ, ಎಂದು ತಂತೀ ಕಳಿಸಿದ್ದಾಯಿತು.

ಅಷ್ಟರಲ್ಲಿ ಈ ವ್ಯವಹಾರ ಮಾಡಿದ ಅಧಿಕಾರಿಗೆ ವಿದೇಶ ಪ್ರಯಾಣದ ಅವಕಾಶ ಒದಗಿ ಬಂತು. ಅವರು ಅಮೇರಿಕಕ್ಕೆ ಮೂರು ತಿಂಗಳ ಶೈಕ್ಷಣಿಕ ಪ್ರವಾಸಕ್ಕಾಗಿ ಹೊರಟು ಹೋದರು. ಅವರ ಸ್ಥಳಕ್ಕೆ ಬಂದ ಅವರ ಉತ್ತರಾಧಿಕಾರಿ ಹೊಸಬ, ಹಿಂದಿನ ವ್ಯವಹಾರದ ಮಾಹಿತಿ ಇಲ್ಲದವ.

"ತಂತೀ ಕಳಿಸಿದ್ದಾರಲ್ಲ, ಅಲ್ಲಿಂದ ಬೀಜ ಬಂದ ಕೂಡಲೇ ನಿಮಗೆ ತಿಳಿಸುವೆ."

ಭೆಟ್ಟಿಯಾದಾಗೊಮ್ಮೆ ಅವರು ಹೇಳುವ ಸಮಾಧಾನದ ಮಾತು ಇದು.

ಅಗಸ್ಟ ತಿಂಗಳು ಕಾಲಿರಿಸುವವರೆಗೂ ಇದೇ ಹಾಡು.

ದಿಲ್ಲಿಗೆ ನಾವೇ ನಮ್ಮ ವೆಚ್ಚದಿಂದ ತಂತೀ ಕಳಿಸಿದೆವು.

ಹೆಣ್ಣು-ಗಂಡು ಬೀಜ ಪುಣೆಯ ಎನ್. ಎಫ್. ಸಿ. ಆಫೀಸಿಗೆ ಮೇ ತಿಂಗಳಲ್ಲಿಯೇ ಒಂದೇ ಟ್ರಕ್ಕಿನಲ್ಲಿ ಹೇರಿ ಕಳಿಸಿದ್ದೇವೆ. ಈ ರೀತಿ ಮೇ ತಿಂಗಳಲ್ಲಿ ನಮ್ಮ ಆಫೀಸ್ ಪತ್ರ ನಂಬರಿನಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದ್ದರೂ ಪುನಃ ಪುನಃ ತಂತಿ ಕಳಿಸುವದು ಆಶ್ಚರ್ಯಕರ. ಪುಣೆ ಆಫೀಸಿನೊಂದಿಗೆ ಪತ್ರವ್ಯವಹಾರ ಮಾಡಿರಿ ಎಂಬ ಆಶಯದ ಪತ್ರ ಬಂದಿತು.

ಪುಣೆ ಆಫೀಸಿಗೆ ಪತ್ರ ಬರೆದದ್ದಾಯಿತು. ಅವರು ಕೂಡಲೇ, 'ನಮ್ಮಲ್ಲಿಂದ ಹೆಣ್ಣು ಬೀಜ ಗಂಡು ಬೀಜಗಳ ಚೀಲಗಳನ್ನು ಮೇ ತಿಂಗಳಲ್ಲಿಯೇ ಟ್ರಕ್ ನಂ...ನಲ್ಲಿ ಹೇರಿ ಕಳಿಸಿದ್ದು ಮುಟ್ಟಿದ ಬಗ್ಗೆ ಪಾವತಿ ಕೂಡ ಬಂದಿದೆ. ಈಗ ಹೆಣ್ಣು ಬೀಜದ ಚೀಲಗಳು ಬಂದಿಲ್ಲವೆಂದು ಬರೆದದ್ದನ್ನು ಓದಿ ಆಶ್ಚರ್ಯವಾಗುವದು. ನಮ್ಮಲ್ಲಿ ನಿಮಗೆ ಕಳಿಸತಕ್ಕ ಬೀಜದ ಚೀಲಗಳೇ ಉಳಿದಿಲ್ಲ' ಎಂದೂ ತಿಳಿಸಿದರು.



ಬರಬೇಕಾದ ೭೫ ಚೀಲ ಹೆಣ್ಣು ಬೀಜ, ೨೫ ಚೀಲ ಗಂಡು ಬೀಜ ಹೀಗೆ ಒಟ್ಟು ೧೦೦ ಚೀಲಗಳನ್ನು ಟ್ರಕ್ಕಿನಿಂದ ಕಳಿಸುವಾಗ ೧೦೦ ಚೀಲ ಗಂಡು ಬೀಜವನ್ನೇ ಕಳಿಸಲಾಗಿದೆ ಎಂಬ ವಿಚಾರ ಪುಣೆ ಆಫೀಸಿನವರಿಗೆ ಹೊಳೆಯಲಿಲ್ಲ.

ಇಲ್ಲಿಂದ ಈ ಬಗ್ಗೆ ಖುಲಾಸೆ ಮಾಡಿದಾಗ ಅವರು ಕಣ್ಣು ತೆರೆದರು. ತಮ್ಮಲ್ಲಿ ಉಳಿದಿರುವ ಚೀಲಗಳನ್ನು ಪರೀಕ್ಷಿಸಿ ನೋಡಿದರು. ನಂತರ ಒಂದು ತಂತಿ ಕಳಿಸಿದರು:

'ನಿಮ್ಮಲ್ಲಿ ಹೆಚ್ಚಿಗೆ ಬಂದಿರುವ ೭೫ ಚೀಲ ಹೆಣ್ಣುಬೀಜಗಳನ್ನು ಕೂಡಲೇ ಕಳಿಸಿಕೊಡಿ.'

ಇದರಿಂದ ಮತ್ತಿಷ್ಟು ಗೊಂದಲಕ್ಕಿಟ್ಟುಕೊಂಡಿತು. ಅಷ್ಟರಲ್ಲಿ ಅಮೇರಿಕಕ್ಕೆ ಹೋಗಿದ್ದ ಮೊದಲಿನ ಆಫೀಸರರು ಮರಳಿ ಬಂದರು. ಅವರು ಗಂಡುಬೀಜ ೭೫ ಚೀಲ ಒಂದು

ಟ್ರಕ್ಕಿನಲ್ಲಿ ಪೇರಿ ಪುಣೆಗೆ ತಮ್ಮ ಆಫೀಸಿನ ಓರ್ವ ಕಾರಕೂನನನ್ನು ಕಳಿಸಿ, ಈ ಚೀಲಗಳನ್ನು ಕೊಟ್ಟು, ಅಷ್ಟೇ ಹೆಣ್ಣು ಬೀಜವಿದ್ದ ಚೀಲಗಳನ್ನು ಅದೇ ಟ್ರಕ್ಕಿನಲ್ಲಿ ತರಲು ಆದೇಶ ನೀಡಿ ಸವಿಸ್ತರ ಪತ್ರವನ್ನು ಬರೆದು ಕಳಿಸಿಕೊಟ್ಟರು. ಆ ಕಾರಕೂನನು ೭೫ ಚೀಲ ಹೆಣ್ಣು ಬೀಜಗಳೊಂದಿಗೆ ಮಾರನೇ ದಿನವೇ ಮರಳಿ ಬಂದನು.

ತಮ್ಮಲ್ಲಿ ೭೫ ಚೀಲ ಗಂಡು ಬೀಜ ಕಡಿಮೆ ಬಿದ್ದಿರುವಾಗ ೭೫ ಚೀಲ ಹೆಣ್ಣು ಬೀಜ ಕಡಿಮೆ ಬಿದ್ದಿರುವಂತೆ ಯಾಕೆ ತಂತಿ ಕಳಿಸಿದ್ದರು ? ಈ ಪ್ರಶ್ನೆ ನನ್ನ ತಲೆ ತಿನ್ನುತ್ತಿತ್ತು. ತಮ್ಮ ಆಫೀಸಿನದೇನೂ ತಪ್ಪು ಇಲ್ಲ ಎಂದು ಕಾಗದ ಪತ್ರದಲ್ಲಿ ತೋರಿಸುವ ಹಟದಿಂದ ಹಾಗೆ ತಂತಿ ಕಳಿಸಿದ್ದರೆಂದು ಒಂದಿನಿಂದ ತಿಳಿಯಿತು. ಇದರ ಪರಿಣಾಮ ಯಾವ ಆಫೀಸಿನವರಿಂದಲೂ ಏನೂ ತಪ್ಪು ಆಗಲಿಲ್ಲವೆಂದು ಕಾಗದ ಪತ್ರಗಳಿಂದ ಸಿದ್ಧವಾದದ್ದು; ನಾವು ಬೀಜೋತ್ಪಾದನೆಯ ತತಿ ಕಳೆದುಕೊಂಡು ಮೋಟಾರ್ ಟ್ರಕ್ಕಿನ ಬಾಡಿಗೆ ಹಣವನ್ನು ತೆತ್ತು ಹೆಣ್ಣು ಬೀಜ ಪಡೆದು ಸಪ್ಟಂಬರ್ ಮೊದಲನೇ ವಾರದಲ್ಲಿ ಬೀಜ ಬಿತ್ತುವ ಕೆಲಸ ಮುಗಿಸಿ ಕೃತಾರ್ಥರಾದದ್ದು.

ಸಪ್ಟಂಬರ್ ತಿಂಗಳು 'ಶೂಟ್ ಫ್ಲೈ' ಎಂಬ ನೊಣಗಳ ಪ್ರಾಬಲ್ಯದ ಕಾಲ. ಬಿತ್ತಿದ ಬೀಜ ನಾಟಿ ಸಸಿಯಾಗಿ ಎರಡು ಎಲೆ ಬಿಡುತ್ತಲೇ ಶೂಟ್ ಫ್ಲೈಗಳ ಉಪದ್ರವಕ್ಕೀಡಾಗಿ ಸಸಿಗಳು ಒಣಗಿದವು. ಬಿ. ಎಚ್. ಸಿ. ಪುಡಿ ಹೊಡೆದದ್ದೆ ಹೊಡೆದದ್ದು, ಹೊಸ ಕುಡಿ ಬಿಟ್ಟು ಸಸಿ ಚಿಗುರಿತೆಂದು ಸಮಾಧಾನಪಡುವಷ್ಟರಲ್ಲಿ ಪುನಃ ಶೂಟ್ ಫ್ಲೈಗಳ ಹಾವಳಿ.

ಅಷ್ಟರಲ್ಲಿ ಸಪ್ಟಂಬರ್ ಕೊನೆಯ ವಾರದಲ್ಲಿ ಉತ್ತರಿ ಮಳೆ ಸರವುಗಟ್ಟಿ ಹೊಡೆದದ್ದರಿಂದಲೋ ಏನೋ ಶೂಟ್ ಫ್ಲೈ ಕಾಟ ತಗ್ಗಿತು. ಬೆಳೆ ಆಳಾಗಿ ನಿಂತಿತು. ನಮಗೆ ಬೀಜೋತ್ಪಾದನ ಕೈಕೊಂಡ ಪ್ರಗತಿಶೀಲ ರೈತರಿಗೆ ಒಂದು ಕುತ್ತಿನಿಂದ ಪಾರಾದ ಸಮಾಧಾನವಾಯಿತು.

ಹೈಬ್ರಿಡ್ ಬೀಜೋತ್ಪಾದನೆಗೆ ಕೃಷಿ ಅಧಿಕಾರಿಗಳು ಹೇಳಿದಷ್ಟು ರಸಾಯನ ಗೊಬ್ಬರ ಹಾಕಲಾಗಿತ್ತು. ಗೊಬ್ಬರದ ಕಾವು ವಾರಕ್ಕೊಮ್ಮೆ ಬೆಳೆಗೆ ನೀರುಣಿಸಲು ತಪ್ಪಿದರೆ ಬೆಳೆಯನ್ನು ಒಣಗಿಸಿಬಿಡುವಷ್ಟು ಪ್ರಖರವೆಂಬ ಅನುಭವ ಹಸ್ತಾ ಮಳೆ ಬೀಳದ್ದರಿಂದ ನಮಗೆ ಬಂದಿತು.

ನಾಟಿದ ಸಸಿಯನ್ನು ಬಿ.ಎಚ್.ಸಿ. ಹೊಡೆದು ಉಳಿಸಿಕೊಳ್ಳುವ ಮಹಾ ಸಾಹಸ ಮಾಡಿದ ನನಗೆ ನೀಟಾಗಿ ನಿಂತ ಸಸಿಗಳಿಗೆ ನೀರನ್ನು ಒದಗಿಸುವ ಕೆಲಸ ಮೈಮೇಲೆ ಬಂತು. ಹಳ್ಳದಲ್ಲಿ ಸಾಕಷ್ಟು ನೀರೇನೋ ಹರಿಯುತ್ತಿತ್ತು. ಅದು ನಮ್ಮ ಬೀಜೋತ್ಪಾದನೆಯ ಕ್ಷೇತ್ರದಿಂದ ೨೦೦೦ ಫೂಟುಗಳಷ್ಟು ಅಂತರದ ಮೇಲೆ ಹರಿಯುತ್ತಿತ್ತು. ಹಳ್ಳವು ಹರಿಯುವ ಕೊರಕಲು ನಮ್ಮ ಭೂಮಿಯ ಪಾತಳಿಗಿಂತ ೨೦ ಫೂಟುಗಳಷ್ಟು ಆಳದಲ್ಲಿತ್ತು. ಹಳ್ಳದ ನೀರನ್ನು ೨೦ ಫೂಟು ಎತ್ತುವದಲ್ಲದೆ ಅದನ್ನು ೨೦೦೦ ಫೂಟು ಅಂತರದವರೆಗೆ ಕ್ರಮೇಣ ಎತ್ತರವಾಗುತ್ತ ಸಾಗಿದ ನೆಲದ ಮೇಲೆ ಹೇಗೆ ಸಾಗಿಸಬೇಕು ಎಂಬ ಇಂಜನೀಯರಿಂಗ್ ಸಮಸ್ಯೆ ತಲೆ ತಿನ್ನಹತ್ತಿತು.

ಹಳ್ಳದಿಂದ ೨೦೦೦ ಫೂಟು ಮಣ್ಣಿನ ಆರಣಿ (ಒಡ್ಡು) ಹಾಕಬೇಕು. ಬಿ. ಡಿ. ಓ. ಆಫೀಸಿನಿಂದ ೧೦–ಎಚ್. ಪಿ. ಇಂಜಿನ್ನು ಬಾಡಿಗೆಗೆ ತಂದು ಅದರಿಂದ ಹಳ್ಳದ ನೀರು ಪಂಪ್ ಮಾಡಿ, ಆರಣಿಯ ಮೇಲೆ ಬೀಳುವಂತೆ ಮಾಡಬೇಕು. ಇದು ನೀರಾವರಿ ತಜ್ಞರು ಕೊಟ್ಟ ಸಲಹೆ. ಮಾರನೇ ದಿನವೇ ಮಣ್ಣಿನ ಒಡ್ಡು ಹಾಕಿಸುವ ಕೆಲಸಕ್ಕೆ ಆಳು ಹಚ್ಚಿ ಬಿ.ಡಿ.ಓ. ಆಫೀಸಿನಿಂದ ೧೦–ಎಚ್.ಪಿ. ಇಂಜಿನ್ನು ಬಾಡಿಗೆಯಿಂದ ತಂದು ಹಳ್ಳದ ಮೇಲೆ ಕೂಡಿಸಿದ್ದಾಯಿತು. ಮೊದಲನೇ ದಿನ ಇಂಜಿನ್ನು ಚೆನ್ನಾಗಿ ನಡೆಯಿತು. ಆರಣಿಯ ಮೇಲೆ ನೀರು ಹಾಯುವಾಗ ಅದು ಒಡೆದು ನೀರು ಮುಂದೆ ಸಾಗದೆ

ಇಳಿಜಾರಾದ ನೆಲದ ಮೇಲೆ ಬಿದ್ದು ಹಳ್ಳದತ್ತ ಹರಿದು ಹೋಗಲಾರಂಭಿಸಿತು. ಅರಣಿಯು ಒಡೆದಲ್ಲೆಲ್ಲ ಮಣ್ಣು ಹಾಕಿಸಿ ಭದ್ರಪಡಿಸುವದು, ಕೆಲ ಅಂತರದವರೆಗೆ ನೀರು ಸಾಗಿ ಅಲ್ಲಿ ಅರಣಿ ಒಡೆಯುವದು ನಡೆದೇ ಇತ್ತು.

ಅಂತೂ ಅವ್ಯಾಹತವಾಗಿ ಮೂರು ದಿವಸ ಇಂಜೀನು ಪಂಪ್ ಮಾಡಿದ ನೀರು ಕುಡಿದು ಅರಣಿಯು ಭದ್ರವಾಯಿತೆಯೇನೋ ಸರಿ. ಆದರೆ ನಾಲ್ಕನೇ ದಿನ ಪಂಪ್ ಮಾಡಿದ ನೀರು ಹೊಲದಲ್ಲಿ ಮಡಿಗಳಲ್ಲಿ ಬಂದು ಬೀಳುವಾಗ ಮನೆಯಲ್ಲಿಯ ನಳದಿಂದ ಬರುವ ನೀರಿನ ಪ್ರಮಾಣದಲ್ಲಿ ಬರುವದು ಕಂಡಿತು. ಈ ಪ್ರಮಾಣದಿಂದ ಬರುವ ನೀರು ೧೨ ಎಕರೆ ಕ್ಷೇತ್ರ ಉಣಿಸಲು ಕನಿಷ್ಟ ೩೦ ದಿನಗಳು ಬೇಕು ಎಂದು ಲೆಕ್ಕಮಾಡಿದಾಗ ನನ್ನ ಎದೆ ಒಡೆಯಿತು.

ಎಂಥ ಸಮಸ್ಯೆಯೇ ಬರಲಿ ಸಲಹೆ ಕೊಡಲು ತಜ್ಞರು ಇದ್ದೇ ಇರುವರು. ಅರಣಿಯ ಮೇಲೆ ನೀರು ಸಾಗುವಾಗ ಅದರ ಬಹು ಭಾಗ ಅದರಲ್ಲಿ ಇಂಗಿಹೋಗುವದು. ಅದನ್ನು ತಪ್ಪಿಸಿದರೆ ಪಂಪ್ ಮಾಡಿದ ನೀರೆಲ್ಲ ಮುಂದೆ ಸಾಗಿ ಬಂದು ಹೊಲದಲ್ಲಿ ಬೆಳೆಗೆ ನೀರುಣಿಸಲು ಉಪಯೋಗಬೀಳುವದು. ೨೦೦೦ ಫೂಟು ಉದ್ದವಾದ ಕ್ಯಾನ್‌ವಾಸ್ ಪಾಯಿಪ್ ತಂದು ಅರಣಿಯ ಮೇಲೆ ಇಟ್ಟು ಅದರ ಒಳಗೆ ಪಂಪ್ ಮಾಡಿದ ನೀರು ಹರಿಯುವಂತೆ ಮಾಡುವದೊಂದೇ ಈ ಸಮಸ್ಯೆಗೆ ಪರಿಹಾರೋಪಾಯ ಎಂಬ ಸಲಹೆ ಬಂತು.

ಕೊಲ್ಹಾಪುರದಲ್ಲಿ ಮಾತ್ರ ಅದು ಸಿಗಬಹುದೆಂದು ಹೇಳಿದ್ದು ಕೇಳಿ ಅಲ್ಲಿಗೆ ಅಂದೇ ಹೋಗಿ ೧೦೦೦ ರೂಪಾಯಿ ಕೊಟ್ಟು ೨೦೦೦ ಫೂಟು ಉದ್ದದ ಕ್ಯಾನ್‌ವಾಸ್ ಪಾಯಿಪ್ ಕೊಂಡು ತಂದಿದ್ದಾಯಿತು. ಪಂಪು ಮಾಡಿದ ನೀರು ಆ ಪಾಯಿಪ್ ಗುಂಟ ಓಡಿದಾಗ ಹಾವಿನಂತೆ ಅದು ಉಬ್ಬುವದನ್ನು ನೋಡಿ ಇಷ್ಟುದ್ದ ಹಾವು ನೀರು ಸಾಗಿಸಲು ಸಮ. ನೆರವಿಗೆ ಬಂದ ಮೇಲೆ ನೀರುಣಿಸುವದು ಸಾಧ್ಯ ಎಂದು ಹಿಗ್ಗಿದೆ. ಆದರೆ ಅದು ಅಲ್ಪಾವಧಿಯ ಸಂತಸವಾಗಿತ್ತು.

ಪಂಪು ಮಾಡಿದ ನೀರಿನ ಒತ್ತಡ ಹೆಚ್ಚಿದಂತೆ ಕ್ಯಾನ್‌ವ್ಯಾಸ್ ಪಾಯಿಪು ಉಬ್ಬುತ್ತ ಹೊಲಿಗೆಗಳ ಮೇಲೆ ಒತ್ತಡ ಹೆಚ್ಚಿ ಅವು ಬಿಚ್ಚತೊಡಗಿದವು. ಹೊಲಿಗೆ ಬಿಚ್ಚಿದೆಡೆಯಲ್ಲಿ ನೀರು ಕಾರಂಜಿಯಂತೆ ಆಕಾಶಕ್ಕೆ ಪುಟಿಯತೊಡಗಿತು. ಅದನ್ನು ತಡೆದು ನಿಲ್ಲಿಸುವುದೇ ಒಂದು ಸಮಸ್ಯೆಯಾಯಿತು. ಇಂಜೀನು ನೀರನ್ನು ಒಂದೇ ಸಮನೆ ಪಂಪು ಮಾಡುತ್ತಲೇ ಇತ್ತು. ಪಾಯಿಪಿನಿಂದ ನೀರು ಮುಂದೆ ಮುಂದೆ ಸಾಗುತ್ತಲೇ ಇತ್ತು. ನಾಲ್ಕಾರು ಆಳುಗಳು ಅಲ್ಲಲ್ಲಿ ಕಾರಂಜಿಯಂತೆ ಪಾಯಿಪಿನಿಂದ ಪುಟಿಯುವ ನೀರನ್ನು ತಡೆದು ನಿಲ್ಲಿಸಲು ಕೈಗೆ ಸಿಕ್ಕ ತೊಪ್ಪಲು, ಬಟ್ಟೆ, ಚಿಂದಿ ಏನೆಲ್ಲವನ್ನೂ ಉಪಯೋಗಿಸುವದರಲ್ಲಿ ಅವಿಶ್ರಾಂತವಾಗಿ ದುಡಿಯುತ್ತಲೇ ಇದ್ದರು. ನೀರು ಚಿಮ್ಮಿದಲ್ಲಿ ಅರಣಿಯು ನೆನೆದು ಒಡೆಯುತ್ತಲೇ ಇತ್ತು. ಹೀಗಾಗಿ ಇಡೀ ದಿನ ನೀರು ಪಂಪ್ ಮಾಡಿದರೂ ನಾಲ್ಕು ಗುಂಠೆಗಿಂತ ಹೆಚ್ಚು ನೆಲ ನೀರುಣ್ಣಲಿಲ್ಲ.

ಅತ್ತ ಬೆಳೆ ನೀರಿಲ್ಲದೆ ಒಣಗಹತ್ತಿತ್ತು. ಅದನ್ನು ನೋಡಿ ನಮ್ಮ ಆಶಾಗೋಪುರ ಉರುಳಿತು. ಬೆಳೆ ಉಳಿಸಿಕೊಳ್ಳುವುದು ಅಸಾಧ್ಯವೆಂಬ ವಿವೇಕೋದಯವಾಯಿತು. ಹಳ್ಳದ ನೀರು ಹೊಳೆಗೆ ಹೋಗುವುದೇ ವಾಸಿ. ಹೊಲಕ್ಕೆ ಉಣ್ಣಿಸುವದು ಹುಚ್ಚು ಸಾಹಸ ಎಂದು ಅನಿಸಿತು.

ನಿರಾಶನಾಗಿ ಇಂಜಿನ್ ಬಂದ್ ಮಾಡಿಸಿ ಅದನ್ನು ಚಕ್ಕಡಿಯಲ್ಲಿ ಹೇರಿಸಿ ಬಿ.ಡಿ.ಓ. ಆಫೀಸಿಗೆ ಕಳಿಸಬೇಕು, ದಿನ ನಿತ್ಯ ಏರುವ ೧೧ ರೂಪಾಯಿ ಬಾಡಿಗೆಯ ಭಾರ ತಪ್ಪಿದರೆ ಸಾಕು, ಎಂದು ಅದನ್ನು ಕಳಿಸುವ ಏರ್ಪಾಡು ಮಾಡಿದೆ.

ದೇವರು ದೊಡ್ಡವ. ಅಂದು ರಾತ್ರಿ ಮೋಡ ಏರಿ ಬಂತು. ಧೋಧೋ ಮಳೆ ಬೆಳತನಕ ಸುರಿಯಿತು. ಬೆಳೆ ಹಸಿರು ಮುರಿಯತೊಡಗಿತು. ಬೆಳೆ ಕೈಬಿಡಲಿಲ್ಲ ಎಂಬ ಸಂತೋಷ ಮನದಲ್ಲಿ ಮೂಡಿತು.

ಹಸ್ತಾ ಮಳೆಯು ದೊಡ್ಡ ಪ್ರಮಾಣದಲ್ಲಿ ಬಿದ್ದ ಫಲವಾಗಿ ನಮ್ಮೂರ ನೀರಾವರಿ ಕೆರೆಗೆ ಸಾಕಷ್ಟು ನೀರು ಬಂದು ಕೋಡಿ ನೀರು ಹರಿಯ ಹತ್ತಿದ ಸುದ್ದಿ ಬಂತು. ನೀರಾವರಿ ಕೆರೆಯ ಕಾಲು-ವೆಯಿಂದ ನೀರು ಬಿಡುವಂತಾಯಿತು. ಆ ನೀರನ್ನು ನಮ್ಮ ಹೊಲಕ್ಕೆ ತಂದರೆ ಈ ಬೆಳೆಗೆ ನೀರುಣ್ಣಿಸುವ ಪ್ರಶ್ನೆಯೇ ಬಿಡುವದು ಎಂಬ ವಿಚಾರ ತಲೆ ತಿನ್ನ ತೊಡಗಿತು.

ಕೆರೆಯಿಂದ ಬರುವ ಮುಖ್ಯ ಕಾಲುವೆ ನಮ್ಮ ಹೊಲದ ಉತ್ತರಕ್ಕೆ ಸುಮಾರು ೨ ಸಾವಿರ ಫೂಟು ಅಂತರದ ಮೇಲಿದ್ದು ಅಲ್ಲಿಂದ ನಮ್ಮ ಬೀಜೋತ್ಪಾದನೆಯ ಕ್ಷೇತ್ರಕ್ಕೆ ನೀರು ತರಲು ಉಪಕಾಲುವೆಯೇ ಇಲ್ಲ. ಕೆರೆಯ ನೀರನ್ನು ಬಳಸಬಹುದಾದ ಕ್ಷೇತ್ರವೆಂದು ನಕಾಶದಲ್ಲಿ ಈ ಸರ್ವೇ ನಂಬರು ಕಾಣಿಸಲಾಗಿದ್ದರೂ ಯಾರೂ ಎಂದೂ ನೀರು ಉಪಯೋಗಿಸುವ ಗೋಜಿಗೇ ಹೋಗಿರಲಿಲ್ಲ. ಅದರಿಂದ ಉಪ ಕಾಲುವೆ ಇರಲಿಲ್ಲ. ಉಪಕಾಲುವೆಯನ್ನು ಮುಖ್ಯ ಕಾಲುವೆಯಿಂದ ತೆಗೆಸುವದು ಸರಕಾರದ ಕೆಲಸ ಹೌದೋ ಅಲ್ಲವೋ, ಅಂತೂ ಈ ಪ್ರಶ್ನೆಯು ಇತ್ಯರ್ಥವಾಗಲು ಸಂವತ್ಸರಗಳೇ ಉರುಳಬೇಕು. ಸುಮಾರು ಒಂದು ಸಾವಿರ ರೂಪಾಯಿ ವೆಚ್ಚ ಮಾಡಿದರೆ ೨೦೦೦ ಫೂಟು ಉಪಕಾಲುವೆ ತೆಗೆಸಬಹುದು ಎಂದು ಈ ಕಾಲುವೆಯ ಅಗತ್ಯ ವಿದ್ದ ನೆರೆ ಹೊರೆಯ ಭೂಮಿಯ ರೈತರು ಹೇಳಿ ದರು. "ಈಗ ನೀವೇ ಖರ್ಚು ಮಾಡಿ ಕಾಲುವೆ ತೆಗೆಸಿರಿ. ಸುಗ್ಗಿ ಆದ ಮೇಲೆ ನಮ್ಮ ಪಾಲಿಗೆ ಬಂದಷ್ಟು ಹಣ ಕೊಡುವೆವು" ಎಂದು ಹೇಳಿ ದರು. ಸಾವಿರ ರೂಪಾಯಿ ವೆಚ್ಚಮಾಡಿ ಉಪ ಕಾಲುವೆಯನ್ನು ಸಿದ್ಧಪಡಿಸುವ ಕೆಲಸಕ್ಕಾರಂಭ ಮಾಡಿಸಿ ಒಂದು ವಾರದಲ್ಲಿ ಅದನ್ನು ಪೂರ್ತಿ ಮಾಡಿದ ಕೀರ್ತಿಗೆ ಪಾತ್ರನಾದೆ.

ಕಾಲುವೆಯ ನೀರು ಮೂರು ಮೈಲು ಅಂತ ರದ ಮೇಲಿದ್ದ ಕೆರೆಯಿಂದ ಹರಿದು ಬರಬೇಕು. ಕಾಲುವೆಯಲಿ ಹರಿದು ಬರುವ ನೀರನು ಮುದ ಹಲ್ಲಿ ಯಾರಾದರೂ ತಮ್ಮ ಹೊಲದತ್ತ ಹೊರ ಳಿಸಿಕೊಂಡರೆ ನಾವು ಬಾಯಿ ಬಿಡುತ್ತ ಕೂಡ ಬೇಕು. ಈ ಅನುಭವ ನನಗೆ ಜನ್ಮದಲ್ಲಿಯೇ ಹೊಸದು. ಕಾಲುವೆಯಲ್ಲಿ ನೀರು ಅಬಾಧಿತ ವಾಗಿ ಬರುವಂತೆ ನೋಡಿಕೊಳ್ಳಲು ಕಾಲುವೆಗೆ ಕಾವಲು ಪಡೆ ನೇಮಿಸಬೇಕು. ನೀರು ಸಾಗಿ ಬಂದಿದೆ ಎಂದು ನಿಶ್ಚಿಂತರಾಗಿ ಕೆಲ ಹೊತ್ತು ನೀರು ಉಣ್ಣಿಸುವಷ್ಟರಲ್ಲಿ ಬರುವ ನೀರು ಗುಪ್ತಗಾಮಿನಿಯಾಗಿಬಿಡುವ ಅನುಭವ ಪ್ರತಿ ತಾಸಿಗೊಮ್ಮೆ ಇದ್ದದ್ದೆ. ಮತ್ತೆ ಕಾಲುವೆಗುಂಟ ಮೂರು ಮೈಲು ನಡೆದು ಹೋಗಿ ದಾರಿಗಳ್ಳರ ಪತ್ತೆ ಹಚ್ಚಿ, "ಇಂದು ನಮ್ಮ ಪಾಳಿ, ನೀನೇಕೆ ನೀರು ಒಡೆದುಕೊಂಡಿರುವೆ," ಎಂದು ಜಗಳ ಹೂಡಿ ಅವನು ಒಡೆದುಕೊಂಡ ಕಾಲುವೆಯನ್ನು ಬಂದು ಮಾಡಿಸಿ ನೀರು ಬಿಡಿಸಿಕೊಂಡು ಬರಬೇಕು.

ಇಂಥ ಅನಂತ ಕಷ್ಟಗಳನ್ನು ಎದುರಿಸಿ ವಾರ-ಕ್ಕೊಮ್ಮೆ ನೀರು ಉಣ್ಣಿಸುವಲ್ಲಿ ತಕ್ಕಮಟ್ಟಿಗೆ ಯಶ ಸಂಪಾದಿಸಿದ್ದಾಯಿತು. ಬೆಳೆಯೂ ನಿರೀಕ್ಷಿ-ಸಿದಂತೆ ರಭಸದಿಂದ ಎದ್ದು ನಿಂತಿತು. ಉತ್ತರಿ ಮಳೆಗೆ ಅಜೂಬಾಜೂ ಹೊಲಗಳಲ್ಲಿ ರೈತರು ಜೋಳ ಬಿತ್ತಿದ್ದು ಆ ಬೆಳೆಯೂ ಹಾಡಿಕೆಯಂತೆ ಬೆಳೆದಿತ್ತು. ಅವುಗಳಮಧ್ಯದಲ್ಲಿ ಗಿಡ್ಡ ಜಾತಿಯ ಇದಾವ ಜೋಳ ಎಂದು ಎಲ್ಲರ ಲಕ್ಷ್ಯವನ್ನೂ ಸೆಳೆಯುವಂತೆ ಒಳ್ಳೇ ಅಗಲವಾದ ಎಲೆ, ದಪ್ಪ ದಂಟು, ಕರ್ರಗಿನ ಬಣ್ಣದಿಂದ ಕಣ್ಣು ಕೆರಳಿಸುವ ಕಳೆಯಿಂದ ನಮ್ಮ ಹೈಬ್ರಿಡ್ ಗಂಡು-ಹೆಣ್ಣಿನ ಸಾಲುಗಳು ಕಂಗೊಳಿಸುತ್ತಿದ್ದವು.

ಎನ್.ಎಫ್.ಸಿ. ಇನ್ಸ್‌ಪೆಕ್ಟರರು ಆಗಮಿಸಿದರು. ಅದು ಅವರ ಮೊದಲನೇ ಇನ್ಸ್‌ಪೆಕ್ಶನ್.

"ಭಾರೀ ಬೆಳೆ. ಅಜೂಬಾಜೂ ಜೋಳ ಇದೆ. ಅವು ಹೊಡೆ ತೆಗೆಯುವ ಮೊದಲೆ ಇದು ಕಾಳು ಮೂಡಿದರೆ ತೊಂದರೆ ಇಲ್ಲ. ಇಲ್ಲವಾದರೆ ಐಸೋಲೇಶನ್ ಇಲ್ಲ ಅಂತಾ ಸರ್ಟಿಫಿಕೇಟ್ ನಿರಾಕರಿಸುವ ಪ್ರಸಂಗ ಬರುವದು.

ಹೊಡೆ ತೆಗೆಯಲು ಅದು ಸಹಾಯಮಾಡುವದು" ಎಂದು ಶರಾ ಬರೆದು ಹೋದರು.

ಕೃಷಿ ಇಲಾಖೆಯ ಸಾಹೇಬ ಜನರು ಬೆಳೆ ನೋಡಲು ವಾರದಲ್ಲಿ ಎರಡು ಸಲ ಬರುವದೂ ಅವರ ಸ್ವಾಗತ ಸತ್ಕಾರ ಮಾಡುವದು, "ಒಂದು ಲಕ್ಷ ರೂಪಾಯಿ ಚೆಕ್ಕು ನಿಮ್ಮ ಕಿಸೆಯಲ್ಲಿ ಬಿತ್ತು" ಎಂದು ಅವರಾಡುವ ಮಾತು ಕೇಳಿ ಸಂತಸ ಪಡುತ್ತ ಎರಡು ವಾರ ಕಳೆದೆ.

ಜನವರಿ ತಿಂಗಳು ಬಂತು. ಒಂದೊಂದೇ ತೆನೆ ಗಂಡು ಸಾಲಿನಲ್ಲಿ ಕಾಣಿಸತೊಡಗಿದವು. ಹೆಣ್ಣು ಸಾಲುಗಳಲ್ಲಿ ತೆನೆಯೇ ಇಲ್ಲ.

ತಜ್ಞರ ಸಲಹೆಗೆ ಧಾವಿಸಿದೆ. "ಯೂರಿಯಾ ಸ್ಪ್ರೇ ಕೇವಲ ಹೆಣ್ಣು ಸಾಲಿಗೆ ಹೊಡೆಸಿರಿ," ಎಂದು ಸಲಹೆ ಕೊಟ್ಟರು,

ಸಂಕ್ರಾಂತಿ ಬಂತು. ಎಳ್ಳಿನ ಹಬ್ಬದ ಸಂಭ್ರಮ ಗಂಡು-ಹೆಣ್ಣು ಸಾಲುಗಳು ಒಂದು ಫೂಟಿಗಿಂತ ಉದ್ದವಾದ ತೆನೆ ತೆಗೆದು ನಿಂತದ್ದು ಕಂಡು ನನಗೆ ಹೆಚ್ಚಿನ ಸಂಭ್ರಮ.

ಮರುದಿನವೇ ಎನ್.ಎಫ್.ಸಿ ಇನ್ಸ್‌ಪೆಕ್ಟರು ಬಂದರು. ಅಜೂಬಾಜೂ ಹೊಲಗಳಲ್ಲಿ ತೆನೆ ತೆಗೆದಿವೆ. ಆದರೂ ಭಯವಿಲ್ಲ. ಅವು ಹೂವು ಕಟ್ಟಿಲ್ಲ ಎಂದು ಉದ್ಗಾರ ತೆಗೆದರು. ನನಗೆ ಸಮಾಧಾನವಾಯಿತು.

ಇನ್ಸ್‌ಪೆಕ್ಶನ್ ರಿಪೋರ್ಟ್ ಬರೆದು ಮರಳಿ ಹೋಗುವಾಗ ನಾನು ತೆಗೆಸಿದ ಕಾಲುವೆ ಒಡ್ಡಿನ ಮೇಲೆ ನಿಂತು ಬೆಳೆ ನೋಡಿದರು. ಕಣ್ಣಿಗೆ ಹಬ್ಬಮಾಡುವಂಥ ಬೆಳೆ. ಪೂರ್ವ ದಿಕ್ಕಿಗಿದ್ದ ಎರೆ ಹೊಲದಲ್ಲಿ ಹೋದ ವರ್ಷ ದನ ಕಟ್ಟಿದ ಜಾಗೆಯಲ್ಲಿ ಒಂದು ಗುಂಪು ಬಹಳ ಎತ್ತರವಾಗಿ ಬೆಳೆದಿತ್ತು. ಅಂತೆಯೆ ಅದರ ತೆನೆ ಹೂವು ಕಟ್ಟಿ ಕಾಳು ಹಿಡಿದಿತ್ತು. ಅದು ದೃಷ್ಟಿಗೆ ಬೀಳುತ್ತಲೇ ಅತ್ತ ಹೋಗಿ ಒಂದು ತೆನೆ ತಕ್ಕೊಂಡು ಬಂದು, "ಆ ಗುಂಪು ಇಲ್ಲಿಂದ ೬೦೦ ಫೂಟು ಅಂತರದಲ್ಲಿದೆ. ಐಸೋಲೇಶನ್ ಸರಿಯಾಗಿ ಇಲ್ಲವೆಂದು ಅದರಿಂದ ಹೇಳಬೇಕಾಗುವದು. ಹೇಗೆ ಮಾಡುವಿರಿ?" ಎಂದು ಕೇಳಿದರು.

"ಇನ್ನೊಂದು ವಾರದಲ್ಲಿ ಸುತ್ತ ಮುತ್ತಲಿನ ಹೊಲಗಳಲ್ಲಿಯ ಜೋಳದ ಪೀಕು ಹೂ ಕಟ್ಟುವದು. ನಾನು ನಿರುಪಾಯ. ಈಗಿದ್ದ ಬೆಳೆ ಕೊಯ್ಯಿಸಿಬಿಟ್ಟರೆ ಅದು ಚಿಗಿತು ತೆನೆ ಹಾಕಲು ಒಂದು ತಿಂಗಳಿಗೂ ಹೆಚ್ಚು ಅವಧಿ ಬೇಕು. ಆಗ ನಿಮ್ಮ ಐಸೋಲೇಶನ್ ನಿಯಮಕ್ಕೆ ಏನೂ ಬಾಧೆ ಬಾರದು. ಹಾಗೆ ಮಾಡಿದರೆ ನಿಮ್ಮ ಆಕ್ಷೇಪವಿಲ್ಲವಷ್ಟೇ?" ಎಂದು ಕೇಳಿದೆ.

"ನೀವು ನಿಜವಾಗಿಯೂ ಪ್ರಗತಿಶೀಲ ಬೇಸಾಯಗಾರರು. ಬೇರೆ ಜಾತಿಯ ಜೋಳದ ಪರಾಗ ಸ್ಪರ್ಶದಿಂದ ಹೈಬ್ರಿಡ್ ಬೀಜದ ಶುದ್ಧತೆಗೆ ಧಕ್ಕೆ ಬರುವದೆಂಬುದನ್ನು ಚೆನ್ನಾಗಿ ಬಲ್ಲವರು. ನೀವು ಹೇಳಿದಂತೆ ಮಾಡಿ. ಒಳ್ಳೇ ವಿಚಾರ," ಎಂದು ಹೇಳಿ ತಮ್ಮ ಇನ್ಸ್‌ಪೆಕ್ಶನ್ ರಿಪೋರ್ಟಿನಲ್ಲಿ ಈ ಮಾತನ್ನು ಬರೆದುಕೊಟ್ಟರು.

---



"...ಕೊನೇ ಕ್ಲಾಸನ್ಲಿ... ನಳ್ಳೀಲಿ ನೀರು ಬರ್ತದೆ ಯಂತಪ್ಪೊ..."

ಕೈಗೆ ಬಂದ ಬೆಳೆ ಕೊಯಿಸಿ ಅದರ ಕಳೆ ಬೆಳೆಸುವ ವಿಚಾರ ನಮ್ಮ ಅಣ್ಣನಿಗೆ ರುಚಿಸ ಲಿಲ್ಲ. ಅಂದು ನಾವು ಸಾಯಂಕಾಲ ಊರಿಗೆ ಬಂದ ನಂತರ ಈ ವಿಚಾರವನ್ನು ನನ್ನಂತೆ ಪ್ರಗತಿ ಶೀಲ ಬೇಸಾಯುಗಾರರ ಜಾತಿಗೆ ಸೇರಿದ ನನ್ನ ಸ್ನೇಹಿತರ ಮುಂದೆ ಹೇಳಿದೆ.

ಅವರು ನನಗೆ ಸಿಟ್ಟು ಮಾಡಿ "ಈಗ ಹೂವು ಕಟ್ಟಿದ ಗುಂಪಿನಿಂದ ಐಸೋಲೇಶನ್ ನಿಯಮದ ಉಲ್ಲಂಘನೆ, ಅದನ್ನು ತೆಗೆಸಿಬಿಟ್ಟರೆ ಈಗಿದ್ದ ಬೆಳೆಗೇ ಸರ್ಟಿಫಿಕೇಟ್ ಸಿಗುವದು. ಈಗ ಎನ್.ಎಫ್.ಸಿ. ಇನ್ಸ್‌ಪೆಕ್ಟರರ ಕಡೆಗೆ ನಡೆ. ಅವರೊಂದಿಗೆ ಮಾತಾಡಿ ಈ ಪ್ರಶ್ನೆಯನ್ನು ಬಿಡಿಸುವಾ," ಎಂದು ಹೇಳಿದರು.

ನಾವೆಲ್ಲರೂ ಕೂಡಿ ರಾತ್ರಿ ಇನ್ಸ್‌ಪೆಕ್ಟರರನ್ನು ಕಂಡದ್ದಾಯಿತು. "ನಾಲ್ಕು ದಿನಗಳಲ್ಲಿ ಆ ನೆರೆ ಹೊಲದಲ್ಲಿ ಕಾಳು ಮೂಡಿದ ಗುಂಪನ್ನು ತೆಗೆಸಿ ಹಾಕಿದರೆ ಸರ್ಟಿಫಿಕೇಟ್ ಕೊಡಲು ಅಡ್ಡಿ ಇಲ್ಲ. ಆ ಗುಂಪು ಕಿತ್ತಿ ಹಾಕಿ ನನ್ನನ್ನು ನಾಲ್ಕನೇ ದಿನ ಕರಕೊಂಡು ಹೋಗಿ ತೋರಿಸಿದರೆ ಅಂದು ಐಸೋಲೇಶನ್ ತೃಪ್ತಿಕರ ಅಂತ ಬರೆದು ಕೊಡುವೆ" ಎಂದರು.

ಮರುದಿನ ಆ ಹೊಲದ ಮಾಲಿಕನನ್ನು ಕಂಡು, "ನಿನ್ನ ಹೊಲದಲ್ಲಿ ಒಂದು ಗುಂಠೆಯಷ್ಟು ನೆಲದಲ್ಲಿ ತೆನೆ ತೆನೆದಿದೆ, ಹಾಳು ಮೂಡಿದೆ. ಅದನ್ನು ತೆಗೆಸುವದಾದರೆ ನಮ್ಮ ಬೀಜದ ಬೆಳೆಗೆ ಸರ್ಟಿಫಿಕೇಟ್ ಸಿಗುವದು. ಇಲ್ಲವಾದರೆ ನಮಗೆ ಭಾರೀ ಹಾನಿಯಾಗುವದು," ಎಂದು ತಿಳಿಸಿ ಹೇಳಿದೆವು.

"ನಿಮಗೆ ಲುಕ್ಸಾನ ನನ್ನಿಂದ ಎಂದೂ ಆಗ ಗೊಡೂದಿಲ್ಲ. ನನ್ನ ಹೊಲದಾಗಿನ ಬೆಳೀನ ನೀವು ಖರೀದಿ ಮಾಡ್ರಿ. ನಿಮ್ಮ ಕೈ ಮುಟ್ಟ ಬೇಕಾದಲ್ಲೀದು ಬೇಕಾದಷ್ಟು ಕಿತ್ತಿ ಹಾಕಿರಿ. ಎಳಿ ಕೂಸಿನ್ಹಾಂಗ ಇದ್ದ ಬೆಳಿ ನಾನು ನನ್ನ ಕೈಮುಟ್ಟಿ ಕಿತ್ತೂದಿಲ್ಲ."

"ನೀನು ಹೇಳಿಧಾಂಗೇ ಆಗಲಿ. ನಿನ್ನದು ನಾಲ್ಕು ಎಕರೆ ಜೋಳವಿದೆ; ಅದಕ್ಕೇನು ಕೊಡಬೇಕು ಹೇಳು."

"ನೀವೇನೂ ಕೈಲೆ ಕೊಡಬ್ಯಾಡ್ರಿ. ಅದೊಂದು ಐದು ಚೀಲ ಕಾಳ ಆದೀತು. ನೀವು ಬೆಳೆಸಿದ ಬೀಜಾ ಐದು ಚೀಲ ಕೊಡ್ರಿ."

"ಅಲ್ಲೋ ಮಾಹಾರಾಯಾ, ಐದು ಚೀಲ ಬೀಜ ಅಂದರೆ ಐದು ಸಾವಿರ ರೂಪಾಯಿ ಕಿಮ್ಮತ್ತು. ನಿನಗೆ ಐದು ಯಾಕೆ ಹತ್ತು ಚೀಲ ಜೋಳಾ ಕೊಟ್ಟರೂ ಏಳು ನೂರು ರೂಪಾಯಿ ಆಗತದೆ."

"ನಿಮಗ ಈ ಹೋದಾಗಿನ ಜೋಳಾ ಕಿತ್ತಿ ಹಾಕಬೇಕಾಗಿದ್ದರೆ ಐದು ಸಾವಿರ ರೂಪಾಯಿ ಕೊಡಬೇಕು. ನಾ ಹೇಳಿದ್ದು ಭಾಳ ಅನಿಸಿದರೆ ನನ್ನ ಜೋಳದ ಬೆಳಿ ನನ್ನಲ್ಲಿ ಇದ್ಧಾಂಗ ಇರ ತೈತಿ. ನಾನೇನು ನಿಮಗೆ ಬೆಳಿ ಕೊಳ್ರೀ ಅಂತ ಕೇಳಲಾಕ ಬರೂದಿಲ್ಲ," ಎಂದು ಒಗರಿನಿಂದಲೇ ಮಾತನಾಡಿದನು.

ಅವರಿವರ ಮಧ್ಯಸ್ಥಿಕೆಯಿಂದ ರೋಖ ೨೫೦೦ ರೂಪಾಯಿ ಕೊಡಬೇಕು; ಅವರು ಆ ಗುಂಪನ್ನು ಕಿತ್ತಿ ಹಾಕಲು ಪರವಾನಿಗೆ ಕೊಡ ಬೇಕು ಎಂದು ಗೊತ್ತಾಯಿತು. ೨೫೦೦ ರೂಪಾಯಿ ಕೊಟ್ಟು ಬೆಳೆ ಕಿತ್ತಿಸಿ ಇನ್ಸ್‌ಪೆಕ್ಟರರನ್ನು ಸ್ಪೇಶಲ್ ಕಾರು ಮಾಡಿ ಹೊರಕ್ಕೆ ಕರೆದೊಯ್ದು ತೋರಿಸಿದಾಯಿತು.

ಈ ಸಲ ಅಜೂಬಾಜೂದ ಇನ್ನಿತರ ಹೊಲಗಳ ಪೀಕು ನೋಡಿ "ಅಂದು ಬರೇ ಹೊಡೆ ತೆಗೆದ ಈ ಪೀಕು ಈಗ ಹೂವು ಕಟ್ಟಿದೆ. ಇದಕ್ಕೇ–ನನ್ನುವಿರಿ"? ಎಂದು ಇನ್ಸ್‌ಪೆಕ್ಟರ್ ಕೇಳಿದನು.

"ಅವು ಹೂವು ಕಟ್ಟಿದರೂ ನಮ್ಮ ಪೀಕು ಈಗಾಗಲೇ ಕಾಳು ಹಿಡಿದಿದೆ. ಅದರ ಪರಾಗ ಸ್ಪರ್ಶ ಈ ಬೆಳೆಗೆ ಆಗುವ ಸಂಭವ ತಪ್ಪಿದೆ," ಎಂದು ಹೇಳಿದೆ.

"ಹೌದು. ಆದರೆ ಈ ಸಾಲಿನಲ್ಲಿ ಈಗ ನೂರಕ್ಕೆ ೨೦ರಷ್ಟು ತೆನೆಗಳು ಕಾಳು ಹಿಡಿದಿವೆ. ಇನ್ನೂ ಹೊಡೆ ತೆಗೆಯುವ ದಂಟುಗಳಿವೆ. ಇದೀಗ ಹೊಡೆ ತೆಗೆದಂಥ ತೆನೆಗಳೂ ನೂರಕ್ಕೆ ೪೦ರಷ್ಟಿದೆ

ಈಗ ಕಾಳು ಆಗಿರುವ ತೆನೆಗಳಿಗೆ ಪರಾಗ ಸ್ಪರ್ಶದ ಭಯವಿಲ್ಲ. ಉಳಿದವುಗಳಿಗೆ?"

"ಪರಿಸ್ಥಿತಿ ಹೀಗಿರುವುದು ನಿಜ. ನೀವೇ ಮಾರ್ಗ ಹೇಳಿರಿ."

"ಇನ್ನು ಹತ್ತು ದಿವಸದ ಮೇಲೆ ಇನ್ನೊಮ್ಮೆ ಬೆಳೆ ತೋರಿಸಿರಿ. ನೆರೆಹೊರೆಯ ಹೊಲಗಳಲ್ಲಿ ಹೂವು ಕಚ್ಚಿದ ತೆನೆಗಳಿಗೆ ಕಾಗದದ ಆಚ್ಛಾದನ ಹಾಕಿಸಿರಿ. ಅಂದರೆ ಅವುಗಳ ಪರಾಗ ಹಾರಿ ಬಂದು ಇವುಗಳಿಗೆ ಸ್ಪರ್ಶವಾಗಿ ಬೀಜ ಕೆಡುವ ಸಂಭವ ತಪ್ಪುವದು" ಎಂದು ಹೇಳಿದನು.

ಹತ್ತು ದಿವಸದ ಮೇಲೆ ಅವನನ್ನು ಪುನಃ ಹೊಲಕ್ಕೆ ಕರೆದುಕೊಂಡು ಹೋದಾಗ ಹತ್ತಿಪ್ಪತ್ತು ಸಾವಿರ ಕಾಗದದ ಕವ್ಹರು ಕೊಂಡು ೬೦೦ ಫೂಟಿನ ಅಂತರದವರೆಗೆ ಇದ್ದ ನೆರೆ ಹೊರೆಯ ಹೊಲಗಳಲ್ಲಿಯ ಜೋಳದ ತೆನೆಗಳಲ್ಲಿ ಹೂವು ಕಚ್ಚಿದ ತೆನೆಗಳಿಗೆ ಹಾಕಿ ಅವನಿಗೆ ಅದನ್ನು ತೋರಿಸಿದೆವು.

"ಇದೆಲ್ಲಾ ಸರಿ. ಈಗ ಕಾಳು ಮೂಡಿದ ತೆನೆಗಳಿಂದ ಶುದ್ಧ ಬೀಜ ಆಗಬಹುದು. ಈಗ ಇಲ್ಲಿ ಹೆಣ್ಣು ಸಾಲಿನಲ್ಲಿ ಹೂವು ಕಟ್ಟಿದ ತೆನೆಗಳನ್ನೆಲ್ಲಾ ತೆಗೆಸಿಹಾಕಿದರೆ ಐಸೋಲೇಶನ್ ಸಮರ್ಪಕವಿದ್ದ ಬಗ್ಗೆ ಸರ್ಟಿಫಿಕೇಟ್ ಕೊಡ ಬಹುದು" ಎಂದು ಹೇಳಿದನು.

ಹಾಗೇ ಆಗಲಿ ಅನ್ನದೆ ವಿಧಿ ಇರಲಿಲ್ಲ. ನಿಂತ ಬೆಳೆಯಲ್ಲಿ ನೀಟಾಗಿ ಕಾಳು ಮೂಡಿದ ದಂಟುಗಳನ್ನು ಉಳಿಸಿ ಉಳಿದ ಎಲ್ಲಾ ತೆನೆಗಳನ್ನು ಕೊಯಿಸಿ ತೆಗೆಸಿ ಸರ್ಟಿಫಿಕೇಟ್ ಕೊಟ್ಟನು.

ಜನೆವರಿ ತಿಂಗಳಲ್ಲಿ ಅಕಾಲ ವೃಷ್ಟಿಯಾಗಿ ಮರ್ಬಿನ ಮಂಜು ಬಿದ್ದದ್ದರಿಂದ ಗಂಡು ತೆನೆ ಗಳಲ್ಲಿಯ ಪರಾಗದ ಶಕ್ತಿ ನಷ್ಟವಾಗಿತ್ತು. ಹೆಣ್ಣು ಸಾಲಿನಲ್ಲಿ ಅಸಂಖ್ಯಾತ ತೆನೆಗಳು ಕಾಳು ಮೂಡದೆ ಇರಲು ಇದು ಮುಖ್ಯ ಕಾರಣವಾಗಿತ್ತೆಂಬುದು ನಮಗೆ ಆಗ ತಿಳಿಯಲಿಲ್ಲ. ಕಾಳು ಮೂಡದ ತೆನೆಗಳನ್ನೆಲ್ಲ ತೆಗೆದು ಹಾಕಲು ಅವನು ಆಳಿಗೆ ಹೇಳಿ ಮುಂದೆ ನಿಂತು ಕಾಳು ಮೂಡದ ಎಲ್ಲಾ ತೆನೆಗಳನ್ನು ಕೊಯಿಸಿದಾಗ ಇಡೀ ಹೊಲದಲ್ಲಿ ಅಲ್ಲೊಂದು ಇಲ್ಲೊಂದು ತೆನೆ ಉಳಿದದ್ದು ಕಂಡಿತು. ಅದಕ್ಕೆ ಸರ್ಟಿಫಿಕೇಟ್ ಸಿಕ್ಕರೂ ಮುಂದೆ ಅದನ್ನು ಕೊಯ್ದು ರಾಶಿ ಮಾಡಿದಾಗ ಎರಡು ಕ್ವಿಂಟಲ್ ಮಾತ್ರ ಬೀಜ ಹೊರಟಿತು.

ಇದಕ್ಕೆಲ್ಲ ನಾನು ಮಾಡಿದ ಖರ್ಚು ೧೫ ಸಾವಿರ ರೂಪಾಯಿಗಳು! ಲಕ್ಷಾಧೀಶನಾಗುವ ಕನಸು ೧೫ ಸಾವಿರ ರೂಪಾಯಿ ಸಾಲಗಾರನನ್ನಾಗಿಸಿತು.

ಪ್ರಗತಿಶೀಲ ಬೇಸಾಯಗಾರನೆಂಬ ಪದವಿಗೆ ಇಷ್ಟು ಹಣ ತೆತ್ತರೆ ಅದೇನು ಬಹಳವಲ್ಲ ಎಂದು ನೀವು ಸಮಾಧಾನಹೇಳುವಿರೆಂಬು ದನ್ನು ನಾನು ಬಲ್ಲೆ. ಅವರಿವರು ನನ್ನ ಈ ಪ್ರಯೋಗದ ಫಲಶ್ರುತಿ ಕೇಳಿ, "ಯಾಕ ಬೇಕಾ ಗಿತ್ತಪ್ಪಾ, ಆ ಹಾಳು ಹೈಬ್ರಿಡ್ ಬೀಜೋ ತ್ಪಾದನೆ" ಎಂದು ಕನಿಕರಪಟ್ಟು ನನಗೆ ಸಾಂತ್ವನ ಪರವಾಗಿ ಹೇಳಿದಾಗ ನನಗೆ ಅವರ ಬಗ್ಗೆ ಏನು ಅನಿಸುವದು ಬಲ್ಲಿರಾ?

ಒಂದು ಬಿ.ಎ. ಪದವಿ ಪಡೆಯಲು ೧೫ ವರ್ಷ ಆಯುಷ್ಯವನ್ನು ಕನಿಷ್ಠ ೧೦ ಸಾವಿರ ರೂಪಾ ಯಿಗಳನ್ನೂ ಕಳೆಯಬೇಕಾಗುವದು. "ನಾನು ನಿಮ್ಮ ನಮ್ಮ ಸೇವಕನಾಗಬಯಸುವ" ಎಂದು ಅಂಕಿತ ಹಾಕಿ ಕಂಡಕಂಡವರಿಗೆ ಅರ್ಜಿ ಹಾಕುತ್ತ ಕೂಡುವ ಸುಶಿಕ್ಷಿತ ನಿರುದ್ಯೋಗಿಗಳ ಮಹಾ ಸಮುದಾಯದಲ್ಲಿ ಸೇರುವದಕ್ಕೆ ದಾರಿ ತೋರುವ ಆ ಪದವಿಗೇ ಇಷ್ಟು ಬೆಲೆ ತೆತ್ತ ಬೇಕಾದಾಗ ಪ್ರಗತಿಶೀಲ ಬೇಸಾಯಗಾರನೆಂಬ ಪದವಿ ಪಡೆ ಯಲು ಇದೇನು ಮಹಾ ವೆಚ್ಚ? ✿

**ಸೂಚನೆ:** ಕಳೆದ ಮಾರ್ಚ್ 'ಕಸ್ತೂರಿ'ಯಲ್ಲಿ ಬಂದ ಶ್ರೀ ಪು. ಲ ದೇಶಪಾಂಡೆಯವರ ಮೂಲ ಮರಾಠಿ 'ಗಪ್ಪಗಳು' ಲೇಖನದ ಹಕ್ಕುಗಳು ಅವರ ಧರ್ಮಪತ್ನಿ ಶ್ರೀಮತಿ ಸುನೀತಾ ದೇಶಪಾಂಡೆಯವರಿಗೆ ಸೇರಿವೆ.

# ಅಸ್ಪಷ್ಟ

ಮೂಲ :
**ಬಾಲಕೃಷ್ಣ ಮಂಗ್ಹಾಡ್**

ಅನುವಾದ :
**ಕರುಣಾಕರ ಕೋವರ್‌ಕೊಲ್ಲಿ**

ಆತ ಊರ ಹಾದಿ ಹಿಡಿದಾಗ ಅವನೊಡನೆ ನೆರಳೂ ಹಿಂಬಾಲಿಸಿತು. ಮೋಡ ಕವಿದ ಆಗಸದಿಂದ ದೊಡ್ಡ ದೊಡ್ಡ ಹನಿಗಳು ಉದುರತೊಡಗಿದವು. ಮೊದಲು ಬೀಳುವ ಮಳೆಯಾದುದರಿಂದ ಹೊಸಮಣ್ಣಿನ ವಾಸನೆ ಬರುತ್ತಿತ್ತು. ಮಳೆ ಹನಿ ಅಧಿಕವಾದಂತೆ ಆತ ಅತೃಪ್ತಿಯಿಂದ ರಭಸವಾಗಿ ಕಾಲೆಳೆಯತೊಡಗಿದ. ಕಿಸೆಯಲ್ಲಿದ್ದ ಕರ್ಚೀಫನ್ನು ತೆಗೆದು ತಲೆಗೆ ಹಾಕಬೇಕೆಂದೆನಿಸಿದರೂ ಮರು ಕ್ಷಣದಲ್ಲೆ ನಿರಾಸೆಯಿಂದ ಬೇಡವೆಂದೆನಿಸಿತ್ತು. ಒಡಲು ಒದ್ದೆಯಾದಾಗ ಮನಸ್ಸಿಗೆ ನೆಮ್ಮದಿಯುಂಟಾಯಿತು. ಅಂತಹ ಮಹಾ ನಗರದಿಂದ ನಿರ್ಗಮಿಸುವಾಗ ಅದೆಷ್ಟು ಸಂತೋಷದಿಂದ ಕಾಲೆಳೆದಿದ್ದನೋ ಅಷ್ಟೇ ತನ್ನ ಹುಟ್ಟು ಊರಾದ ಗ್ರಾಮಕ್ಕೆ ಅಡಿ ಇಡುವಾಗ ಹೃದಯ ತುಂಬತೊಡಗಿತು.

ಮಳೆ ನಿರಂತರವಾಗಿ ಬೀಳತೊಡಗಿತು. ದಿಗಂತದ ಗದ್ದೆಯ ಹಸರು ಪೈರುಗಳೆಲ್ಲಾ ಮಳೆಯಲ್ಲಿ ತೋಯ್ದು ತಲೆದೂಗುತ್ತಿದ್ದವು. ಅವನಿಗೆ ಮಳೆ ಎಂದರೆ ಬಾಲ್ಯದಿಂದಲೇ ಬಹಳ ಸಂತೋಷ. ಎಷ್ಟೋ ಸಾರಿ ಎಂತಹ ಜಡಿಮಳೆಯಲ್ಲೂ ಮನೆಯ ಅಂಗಳದಲ್ಲಿ ನಿಂತು ಕುಣಿದಾಡುತ್ತಿದ್ದ. ಯಾರೂ ಕಾಣಲಿಲ್ಲವೆಂದು ಅರಿವಾದಾಗ ಅಕ್ಕ ಬಂದು ಅವನಿಗೆ ತಿಳಿಯದೆ ಗದರಿಸಿ ಕೈ ಹಿಡಿದು ಜಗುಲಿಗೆ ಎಳೆದೊಯ್ದು, "ಏ, ಬಾರೋ ಒಳಗೆ, ತಲೆ ಒದ್ದೆಯಾಗಿ ನಿಂಗೆ ಜ್ವರ ಬರೋದಿಲ್ವೇನೋ. ತಲೆ ಒರಸ್ಕೊ" ಎಂದು ಹೇಳಿದಾಗ ಅವನು,

"ಜ್ವರ ಬರಲಿ" ಎನ್ನುತ್ತಿದ್ದ.

"ಜ್ವರ ಬಂದರೆ ಸತ್ತೋಗ್ತಿಯೊ"

"ಸತ್ತು ಹೋಗಲಿ" ಎಂದು ಮೊಂಡುತನದ ಉತ್ತರ ಕೊಟ್ಟಾಗ ಅಕ್ಕನ ಕಂಠ ಬಿಗಿಯುತ್ತಿತ್ತು.

"ಹಾಗೂ ಹಾಗೆಲ್ಲಾ ಹೇಳ್ಬಾರದು, ಚಿನ್ನುತಮ್ಮ. ಹಾಗೆ ಹೇಳಿದ್ರೆ ಪಾಪ ಬರ್ತದೆ. ನೀನು ಹೋದ್ರೆ ನಾನು ಯಾರನ್ನು ತಮ್ಮಾಂತ ಕರೀಲಿ? ನಿನ್ನ ಬಿಟ್ರೆ ನಂಗೆ ತಮ್ಮ ಅಂತ ಮತ್ಯಾರಿದ್ದಾರೆ?"

ಅವನ ಹಳೆಯ ನೆನಪುಗಳು ಮಳೆಯಲ್ಲಿ ತೋಯ್ದು ಕರಗಿ ಹೋದವು. ಆತ ಅಕ್ಕನನ್ನು ಕಂಡು ಎಷ್ಟೋ ವರ್ಷಗಳಾಗಿದ್ದವು. ಈಗ ಆಕೆ

ತನ್ನನ್ನು ನೋಡುವಾಗಲಾದರೂ ಪರಿಚಯ ಸಿಗುತ್ತದೆಯೋ. ಖಂಡಿತವಾಗಿಯೂ ಸಿಗಲಾರದು. ಹೊಸ ಮಾದರಿಯ ಗಡ್ಡ ಮೀಸೆ ತುಂಬಿದ ಮುಖದ, ತೆಳುವಾದ ಒಣಗಿದ ಶರೀರವಲ್ಲವೆ ಇದು. ಅಕ್ಕನಿಗೆ ಅವನ ಗುರುತು ಸಿಕ್ಕಲಾರದು. ಬಹುಶಃ ಗುರುತು ಗೊತ್ತಾದರೆ ಮತ್ತೆ ಅವಳು ವಿಷಾದಿಸ ಬಹುದು.

'ಅಕ್ಕ, ನಮ್ಮ ಆಶೆಗಳೆಲ್ಲಾ ಜೀವನದಲ್ಲಿ ಪಕ್ವ ವಾದರೆ ಜಗತ್ತಿನಲ್ಲಿ ಬಾಳಲು ಭವಿಷ್ಯದೊಡನೆ ಇಷ್ಟೆಲ್ಲಾ ಹೆಣಗಾಡಬೇಕೆ?' ಎಂದು ಅವನ ಮನಸ್ಸು ಸ್ವಯಂ ಪ್ರಶ್ನಿಸಿತು.

ತೋಯ್ದು ನಿಸರ್ಗದಲ್ಲಿ ಅಡಿ ಇಡುತ್ತಾ ಸಾಗುತ್ತಿದ್ದ ಅವನ ಬೆನ್ನ ಹಿಂದೆ ಕತ್ತಲು ಕಪ್ಪು ಮುಸುಕು ಹೊದ್ದು ಬೆನ್ನಟ್ಟುತ್ತಿತ್ತು. ಮಳೆಯೊಡನೆ ಗಾಳಿಯು ವಿಷ ಸರ್ಪದಂತೆ ರಭಸವಾಗಿ ಊದ ತೊಡಗಿತು.

ಹಳೆಯ ದೇವಾಲಯದ ಮೇಲ್ಭಾಗದಲ್ಲಿದ್ದ ಅಕ್ಕನ ಮನೆಯ ಕಡೆಗೆ ಧಾವಿಸಿ ಅಡಿ ಇಟ್ಟ. ಬಿದಿರಿನ ಮುಳ್ಳು ಕಡ್ಡಿಗಳಿಂದ ನಿರ್ಮಿಸಿದ ಬೇಲಿ, ಅದಕ್ಕೆ ಕಿರಿದಾದ ಒಂದು ಗೇಟು. ಮುಂದೆ ಅಡಿ ಇಟ್ಟಾಗ ಸಿಕ್ಕುವ ಅಂಗಳ. ಕಪ್ಪು ಅಂಗಳ, ಬೇಸಗೆ ಯಲ್ಲಿ ಸಗಣಿ ಮಾಸಿ ತಿಕ್ಕಿ ಉಜ್ಜಿದ ನುಣುಪೆಲ್ಲಾ ಮಳೆ ಯಲ್ಲಿ ಕರಗಿ ತೊಪ್ಪು ಹಿಡಿದವನ ಬೆನ್ನಿನಂತಿತ್ತು.

ಹಜಾರದಲ್ಲಿ ನಿಂತು ಮಳೆಯನ್ನು ಈಕ್ಷಿಸುತ್ತಿದ್ದ ಮಕ್ಕಳು ಅವನನ್ನು ಕಂಡು ಮನೆಯೊಳಗೆ ಓಡಿ ದರು. ಕ್ಷಣದಲ್ಲಿ ಅಕ್ಕ ಬಾಗಿಲಲ್ಲಿ ಪ್ರತ್ಯಕ್ಷಳಾದಳು. ಕಿರಿದಾದ ಸೀಮೆ ಎಣ್ಣೆ ದೀಪದ ಮಂದ ಪ್ರಕಾಶ ದಲ್ಲಿ ಆಕೆಯ ಮುಖದ ಮೇಲೆ ಒಂದೆರಡು ಕ್ಷೀಣ ರೇಖೆಗಳು ಗೋಚರಿಸಿದವು. ಎಷ್ಟೋ ವರ್ಷಗಳ ಹಿಂದೆ ಚೆಲುವೆಯಾಗಿದ್ದ ಆ ಅಕ್ಕನಲ್ಲವೆ ಆತನ ಮುಂದೆ ಕೃಶವಾದ ಶರೀರವನ್ನು ಹೊತ್ತು ನಿಂತಿ ರುವುದು ? ಕ್ಷಣಗಳು ದಿನಗಳಾಗಿ ವರ್ಷಗಳು ಅದೆಷ್ಟು ಬೇಗನೆ ಆಕೆಯ ಸೌಂದರ್ಯವನ್ನು ಕಸಿದು ಕೊಂಡಿವೆ. ಅವನ ಕೈ ಹಿಡಿದು ಹುರುಪಿನಿಂದ ಅದೆಷ್ಟು ಆವೇಶದಿಂದ ಅಕ್ಕ ದಿನಂಪ್ರತಿ ಶಾಲೆಗೆ ಕರೆದೊಯ್ಯುತ್ತಿದ್ದಳು.

ಅಕ್ಕನ ಕಣ್ಗಳ ಪರಿಶೋಧನೆ ಅವನ ಮೇಲೆ ತೀಕ್ಷ್ಣವಾದಂತೆ ಆತನ ನಸು ನಗುತ್ತಾ ಅಂಗಳದ ಮೆಟ್ಟಿಲುಗಳ ಮೇಲೇರಿದ.

"ನನ್ನ ಪರಿಚಯವಾಗಲಿಲ್ಲವೇ ?" ಎಂದು ಕೇಳಿದ ತಟ್ಟನೆ ಆಕೆಯ ಕಣ್ಣುಗಳಲ್ಲಿ ಹೊಸ ರಶ್ಮಿಯೊಂದು ಮಿಂಚಿದಂತಾಯಿತು. ಆಕೆಯ ಕಣ್ಣುಗಳು ಅವನನ್ನು ಮತ್ತೊಮ್ಮೆ ಪರೀಕ್ಷಿ ಸಿದವು. ಕ್ಷಣದಲ್ಲಿ ಅವಳ ಅಂತರಂಗದಲ್ಲಿ ಹರ್ಷ ಹೂಬಿಟ್ಟಿತು. ಉಲಿದಳು. "ಅಲ್ಲ ಕಣೋ, ನಿನ್ನ ನೆರಳು ನೋಡಿದೊಡನೆ ನಂಗೆ ಗೊತ್ತಾ ಗೋದಿಲ್ವೇನೋ. ಇವತ್ತು ಬೆಳಗ್ಗೆ ಮುಂಭಾ ಗದ ಕೊಂಬೆ ಮೇಲೆ ಕಾಗೆ ಕೂಗಿದಾಗ್ಲೇ ನೆನೆದೆ ನೀನು ಖಂಡಿತಾ ಬರ್‍ತಿಯಾಂತ. ವರ್ಷಗಳೆಷ್ಟು ಮುಳುಗಿದವು. ಆದರೂ ನಿನ್ನನ್ನ ಈ ಅಕ್ಕ ಮರೆತಿಲ್ಲ ಕಣೋ. ದಿನಾ ಬೆಳಕಾದೊಡ್ನೆ ನೆನೆಯುತ್ತಾ ಇರ್‍ತೇನೆ, ಇವತ್ತು ಬರ್‍ತಿಯಾ ನಾಳೆ ಬರ್‍ತಿಯಾ ಅಂತ."

ತಾನೆಂದಾದರೂ ಆಕೆಗೆ ಒಂದು ಕಾಗದ ಬರೆಯಬೇಕೆಂದು ನೆನೆಸಿದ್ದನೇ ? ತಾನೊಬ್ಬ ಮನುಷ್ಯನೇ? ಅಕ್ಕ ಬದುಕಿರುವಳೇ ಎಂದು ಒಮ್ಮೆಯಾದರೂ ಯೋಚಿಸಿದ್ದೇನೆಯೆ?

ಅಕ್ಕ ಆವೇಶದಿಂದ ಉದ್ಗಾರ ತೆಗೆದಳು, "ಅಲ್ಲ ಕಣೋ, ಇಷ್ಟೊತ್ತು ನೀನು ಮಳೆ ಯಲ್ಲಿ ನಡೆದು ಹೀಗೆ ಒದ್ದೆ ಆಗಿದ್ದಿಯಾ. ಇನ್ನಾ ದ್ರೂ ನಿನ್ನ ಹಳೇ ದುರಾಭ್ಯಾಸನ್ನ ಬಿಡ್ಲಿ ಲ್ವೇನೋ. ಒಳಗೆ ಬಂದು ತಲೆ ಉಜ್ಜಿಕೊಳ್ಳೋ" ಎಂದು ಆಕೆ ಒಳಗಿನಿಂದ ಕೈ ವಸ್ತ್ರವೊಂದನ್ನೆತ್ತಿ ಆತನ ಮುಂದೆ ನೀಡಿದಳು. ಎಣ್ಣೆಯ ಗಬ್ಬು ವಾಸನೆ ಬರುತ್ತಿತ್ತು.

"ಬೇಡ. ಬೇಡ. ಎಲ್ಲಾ ನನ್ನ ಪೆಟ್ಟಿಗೆಯ ಲ್ಲಿದೆ" ಎಂದ.

"ನಿನ್ನ ಪೆಟ್ಟಿಗೆ ಒದ್ದೆಯಾಗಿದೆಯಲ್ಲೋ."

"ಪರವಾ ಇಲ್ಲ."

ಆತ ತೋಯ್ದ ಉಡುಪನ್ನೆಲ್ಲಾ ಕಳಚಿ ಅಕ್ಕನಿಗೆ

ನೀಡಿದ. ಆಕೆ ಅದೆಲ್ಲವನ್ನು ಒಳಗಿನ ತಂತಿಯ ಮೇಲೆ ಒಣಗಲು ಹಾಕಿದಳು. ಆತ ತಲೆ ಒರೆಸಿ ಉಡುಪು ಬದಲಾಯಿಸಿ ಕತ್ತಲು ತುಂಬಿದ ಕೊಠಡಿಯ ಮೂಲೆಯಲ್ಲಿದ್ದ ಕುರ್ಚಿಯೊಂದರಲ್ಲಿ ಆಸೀನನಾದ. ಅಷ್ಟರಲ್ಲಿ ಆಕೆ ಬಿಸಿ ಕಾಫಿಯೊಡನೆ ತಮ್ಮನೆಡೆಗೆ ಬಂದಳು.

"ನೀನು ಮಳೇಲಿ ಒದ್ದೆಯಾಗಿ ಅದೆಷ್ಟು ಸಾರಿ ಪೆಟ್ಟು ತಿಂದಿದ್ಯಾ ಅಮ್ಮನ ಹತ್ರ ಅಂತ ನಿನಗೆ ನೆನಪಿದೆಯೇನೊ" ಅಕ್ಕನ ಮಾತಿನಲ್ಲಿ ಭೂತಕಾಲದ ಉತ್ಸಾಹ ಮೂಡಿತ್ತು.

ಆತ ಕಾಫಿಯನ್ನು ಮೆದುವಾಗಿ ಹೀರಿದ. ನಂತರ ಅಕ್ಕ ಉಲಿದಳು.

"ನಿನ್ಹಾಗೆ ಅದನ್ನು ನಾನು ಅಷ್ಟು ಸುಲಭವಾಗಿ ಮರೆಯಲು ಸಾಧ್ಯವೇನೋ?"

"ನಾನು ಮರೆತಿಲ್ಲ," ಎಂದಿಷ್ಟೇ ಹೇಳಿದ.

"ಮತ್ತೆ ಯಾಕೆ ನೀನು ಇಷ್ಟು ವರ್ಷಗಳಾದರೂ ನನ್ನನ್ನು ಒಮ್ಮೆ ಬಂದು ನೋಡಲಿಲ್ಲ? ಅಲ್ಲ ಕಣೋ, ಒಂದು ಕಾಗದವನ್ನಾದರೂ..." ಆಕೆಯ ಮಾತು ಅಪೂರ್ಣಗೊಂಡಿತು. ಆತನೂ ಮೂಕನಾಗಿಯೇ ಕುಳಿತಿದ್ದ. ಅವನ ದೃಷ್ಟಿ ಕಿಟಿಕಿಯ ಹೊರಗಿನ ಕಪ್ಪು ಜಗತ್ತಿನಲ್ಲಿ ಲೀನವಾಗಿತ್ತು. ಆತ ಮತ್ತೆ ಅವಳ ಮುಖವನ್ನು ನೋಡಲಿಲ್ಲ. ಮೌನವನ್ನು ಮುರಿದು ಅವಳೇ ಮಾತನಾಡಲು ತೊಡಗಿದಳು.

"ನೀನು ಇಲ್ಲಿ ಬೆಳಕಿನಲ್ಲಿ ಕೂರಬಾರದಾಗಿತ್ತಾ, ಯಾಕೆ ಕತ್ತಲಿನಲ್ಲಿ ಕುಳಿತುಕೊಂಡಿದ್ಯಾ?"

"ಬೇಡ. ಇಲ್ಲೇ ಸಾಕು."

ಅಕ್ಕ ಅವನ ಕಾಲಿನ ಬಳಿಯಲ್ಲೇ ನೆಲದ ಮೇಲೆ ಕುಳಿತುಕೊಂಡಳು. ಅವಳ ಮಕ್ಕಳು ಯಾವುದನ್ನೂ ಅರಿಯದೆ ದಿಗ್ಭ್ರಾಂತರಾಗಿ ಕಣ್ಣು ಬಿಡುತ್ತಾ ಅರಪರೀಶ್ವರನ್ನೂ ನೋಡುತ್ತಿದ್ದರು. ಅಕ್ಕನ ವಿಶಾಲವಾದ ಕಣ್ಣುಗಳು ಅವನ ಗಡ್ಡ ತುಂಬಿದ ಮುಖದ ಮೇಲೆ ನಾಟಿದ್ದವು. ಬಹುಶಃ ಆತ ನಸುನಗುತ್ತಿದ್ದರೂ

ನಾಲ್ಕು ಜನ ಮಕ್ಕಳಿದ್ದಾರೆಂದು ಅವು ಅವನನ್ನು ಬಳಸಿಕೊಂಡಿದುದರಿಂದ ಅವನಿಗೆ ಸ್ಪಷ್ಟವಾಯಿತು. ಹಿರಿಯರಿಬ್ಬರೂ ಹುಡುಗರಾಗಿದ್ದರು ಕಿರಿಯವಳಿಗೆ ಬಹುಶಃ ಮೂರು ವರ್ಷ ದಾಟಿರಬೇಕು. ಇನ್ನೊಬ್ಬಳು ಇನ್ನೂ ಹಸುಳೆ. ಅಕ್ಕನಂತೆ ಅವಳ ಮಕ್ಕಳೂ ಕೊಳಕಾದ ಮಾಸಿದ ಉಡುಪುಗಳನ್ನೇ ಧರಿಸಿದ್ದರು. ಆಕೆಯ ಪರಿಚಯ ಅಷ್ಟು ಬೇಗನೆ ಯಾರಿಗೂ ಸಿಗುವಂತಿರಲಿಲ್ಲ. ತಮಾಷೆಗಾಗಿ ಅಕ್ಕನ ಬಳಿ ಕೇಳಬೇಕೆಂದಿದ್ದ, 'ಅಕ್ಕ ನೀನು ಹೇಳುತ್ತಿರಲಿಲ್ಲವೇ ಮನೆ ತುಂಬಾ ಮಕ್ಕಳಿರುವುದು ಸೌಭಾಗ್ಯವೆಂದು. ಮತ್ತೇಕೆ ನಾಲ್ಕು ಮಕ್ಕಳಿಗೆ ನಿಲ್ಲಿಸಿದೆ?' ಎಂದು. ಈ ಮಕ್ಕಳಿಗೆ ಚಾಕಲೇಟು ಸಹ ತರಬೇಕೆಂದು ಅನಿಸಲಿಲ್ಲ.

ಮಕ್ಕಳ ಕುತೂಹಲವನ್ನು ಕಂಡ ಅಕ್ಕ ಹೇಳಿದಳು.

"ಮಕ್ಕಳೇ. ನಾನು ಹೇಳ್ತಿರ್ಲಿಲ್ಲವೆ ನಿಮಗೊಂದು ಮಾವ ಇದ್ದಾರೆಂತ; ಅವರೇ ಇವರು," ಅಷ್ಟರಲ್ಲಿ ಹಿರಿಯ ಹುಡುಗ ಅವನನ್ನು ನೋಡಿ ಮುಗುಳ್ನಗಲು ಮುಖ ಅರಳಿಸಿದ. ಮತ್ತೆ ಅಕ್ಕನೆ ಪ್ರಾರಂಭಿಸಿದಳು.

"ನಿನಗೆ ಗೊತ್ತಿಲ್ವೇನೋ. ಇವನಿಗೆ ಎರಡು ವರ್ಷ ತುಂಬುವಾಗ ನೀನು ಮನೆ ಬಿಟ್ಟಿದ್ದು. ಈಗ ಇವನಿಗೆ ಹತ್ತು ವರ್ಷ ನಾಲ್ಕು ತಿಂಗಳಾಯ್ತು" ಆಕೆ ಕೈ ಬೆರಳೆಣಿಸಿ ಉಲಿದಳು. "ಎಷ್ಟು ಬೇಗ ವರ್ಷಗಳು ಉರುಳಿದವು! ನೀನು ಎಲ್ಲವನ್ನೂ ತೊರೆದು ಹೋದಾಗ ನಾನೆಷ್ಟು ಕಣ್ಣೀರಿಟ್ಟೆ ಗೊತ್ತಾ. ನಿನ್ನ ಭಾವನಿಗೆ ನನ್ನನ್ನು ಸಮಾಧಾನ ಪಡಿಸಲು ಅಸಾಧ್ಯವಾಗಿತ್ತು. ಈ ಮಕ್ಕಳ ನಗುಮುಖದಿಂದಾಗಿ ನನ್ನ ದುಃಖವನ್ನು ಅಡಗಿಸ ಬೇಕಾಯ್ತು. ನೀನಿಲ್ಲದಾಗ ಅವೆಷ್ಟು ಜಾತ್ರೆಗಳು ಸಮಾರಂಭಗಳು ನಮ್ಮ ಊರಿನಲ್ಲಿ ಕಳೆದು ಹೋಗಿವೆ ಗೊತ್ತಾ? ವಿಧವಿಧದ ಸಂಭವಗಳು ನಡೆದರೂ ನನಗೆ ಯಾವುದೂ

ನಮಗೆ ಖಂಡಿತವಾಗಿಯೂ ಗೊತ್ತಿತ್ತು. ನೀನು ಎಂದಾದರೂ ಒಂದು ದಿನ ಬಂದೇ ಬರ್ತೀಯಾಂತ, ಒಂದು ಮಳೆಗಾಲದಲ್ಲಿ..." ಅಪೂರ್ಣಗೊಂಡ ಮಾತಿನೊಡನೆ ಅಕ್ಕನ ಕಂಠ ಬಿಗಿದು ಬಂದಿತು.

"ಭಾವ ಎಲ್ಲಿ ಹೋದರು ?" ಆತ ಕೇಳಿದ.

"ಅಂಗಡಿಯಿಂದ ಇನ್ನೂ ಬರಲಿಲ್ಲ. ಈಗ ಹಗಲೂ ರಾತ್ರಿ ಅಂಗಡಿಯಲ್ಲಿಯೇ. ನೀನು ಬಂದಿರುವುದು ಅವರಿಗೆ ಗೊತ್ತಿಲ್ಲ. ಇಲ್ಲದಿದ್ದರೆ ಓಡಿ ಬರುತ್ತಿದ್ದರು."

"ಈಗ ವ್ಯಾಪಾರ ಹೇಗಿದೆ?"

"ಪರವಾ ಇಲ್ಲ."

"ಮಳೆಯು ದಾಯಾದಿನ ಕಾಯಿಲೆ. ಎಲ್ಲ ಹಾಗೆ ಅಲ್ವಾ?"

"ಹ್ಞೂ" ಎಂದನಷ್ಟೆ.

ಮಳೆ ಈಗ ಸುಮಾರಾಗಿ ನಿಂತಿತ್ತು. ಕತ್ತಲು ಹೊರಗೆಲ್ಲಾ ಘೋರಾಕಾರದಲ್ಲಿ ಪಸರಿಸಿತು. ಆಗಾಗ ಭೀಕರವಾದ ಗಾಳಿ ಗರ್ಜಿಸುತ್ತಿತ್ತು. ಕಿಡಕಿಯ ಸಂದಿನಿಂದ ತೂರಿ ಬರುತ್ತಿದ್ದ ತಂಪು ಗಾಳಿ ಮೈಗೆ ಸೋಂಕಿದಾಗ ಹಾಯೆನಿಸುತ್ತಿತ್ತು. ಅಕ್ಕ ತನ್ನ ಅಂತರಂಗದ ವೇದನೆಯನ್ನು ಕೆದಕಿದಳು.

"ಅಪ್ಪ ತೀರಿ ಹೋದದ್ದು ಗೊತ್ತಾಯ್ತಾ?"

"ಹ್ಞೂ" ಎಂದಷ್ಟೇ ತಲೆ ಆಡಿಸಿದ.

"ತಿಳಿದೂ ಬರಬೇಕೆಂದು ಅನಿಸಲಿಲ್ಲವೇ ?"

"ಸುಮಾರು ತಿಂಗಳು ಕಳೆದ ಬಳಿಕ ನನಗೆ ಗೊತ್ತಾಗಿದ್ದು."

"ಆಗ ನೀನೆಲ್ಲಿದ್ದೆ?"

ಆತ ಮರು ನುಡಿಯಲಿಲ್ಲ.

ಹೊರನಾಡಿನ ವಿಶಾಲವಾದ ಒಂದು ಪಟ್ಟಣದಲ್ಲಿದ್ದ. ನಗರದಿಂದ ಪಟ್ಟಣಕ್ಕಿರುವ ಪ್ರಯಾಣ ಹಾಗಿತ್ತು. ಆಗ ಯಾರೋ ಪರಿಚಿತ ಸಿಕಿ ತಂದೆಯ ಮರಣವಾರ್ತೆಯನ್ನು ತಿಳಿಸಿದ್ದ. ಆಗ ಯಾವ ತರಹ ದುಃಖವೂ ಆಗಲಿಲ್ಲ. ಒಂದು ಕ್ಷಣ ತಂದೆಯನ್ನು ಸ್ಮರಿಸಿ ನಿಂತಿದ್ದ.




"ಲಾಟರೀ ಯಾವಾಗ ಪ್ರಾರಂಭವಾಯ್ತು ಅಂತ ವಿವಾದವೆದ್ದಿದೆ. ಅದನ್ನ ನಿರ್ಧರಿಸ್ಲಿಕ್ಕೆ ಮತ್ತೊಂದು ಲಾಟರೀ ಡ್ರಾ ಮಾಡ್ತಿದಾರೆ..."

ಅಷ್ಟೆ. ಮತ್ತೆ ಎಂದಿನಂತೆ ಯಾತ್ರೆಯಾಗಿತ್ತು. ಅವನು ಆಗ ಮರಳಿ ಬರುವ ಸ್ಥಿತಿಯಲ್ಲಿರಲಿಲ್ಲ. ಅವನ ಆಕಾಂಕ್ಷೆಯೇ ಅನ್ಯವಾಗಿತ್ತು. ಇಲ್ಲವಾದರೆ ಅವನು ಬಿ.ಎ. ಫೈನಲ್‌ನಲ್ಲಿ ಓದುತ್ತಿದ್ದಾಗ ಈ ರೀತಿ ಮನೆ ಬಿಟ್ಟು ಹೋಗಬೇಕಾಗಿತ್ತೇ? ತಟ್ಟನೆ ಅಮ್ಮ ಕಣ್ಣು ಮುಚ್ಚಿದಳು. ಕಾಲಿನಲ್ಲಿ ಕುರುವಾಗಿ ಒಂದು ವಾರ ಜ್ವರದಿಂದ ನರಳುತ್ತಿದ್ದ. ಹೃದಯದಲ್ಲಿ ಯಾವುದೋ ವೇದನೆ ಕೊರೆಯುತ್ತಿತ್ತು. ಅಷ್ಟರಲ್ಲಿ ಅಕ್ಕನ ವಿವಾಹವಾಯಿತು. ಅವಳೂ ಗಂಡನ ಮನೆ ಸೇರಿದಳು. ಹಳ್ಳಿಯಲ್ಲಿದ್ದ ವಿಶಾಲವಾದ ಮನೆಯಲ್ಲಿ ಮತ್ತೆ ತಾನು ತಂದೆ ಇಬ್ಬರೇ ಉಳಿದವರು. ಅಪ್ಪ-ಮಗನಲ್ಲಿ ಸದಾ ಮೌನ ತುಂಬಿರುತ್ತಿತ್ತು. ದಿನದಿಂದ ದಿನಕ್ಕೆ ಅವರಿಬ್ಬರ ವೈಯಕ್ತಿಕ ಭಾವನೆಗಳು ಅಸಹ್ಯಕರವಾಗಿ ಮಾರ್ಪಟ್ಟಾಗ ಇನ್ನು ಮುಂದೆ ಆ ಮನೆಯಲ್ಲಿ ನಿಲ್ಲುವುದು ಸರಿಯಲ್ಲವೆಂದೆನಿಸಿತು. ವಿದ್ಯೆಗೆ ಶರಣು ಹೊಡೆದು ಮನೆಯಿಂದ ಕಾಲು ಕಿತ್ತ.

ಇಬ್ಬರಲ್ಲಿನ ಮೌನವನ್ನು ಮುರಿದು ಅಕ್ಕ ಕೇಳಿದಳು.

"ಈಗ ಎಲ್ಲಿಯೋ ನಿನ್ನ ವಾಸ?"

"ಇಂಥದೇ ಸ್ಥಳಾಂತ ಇಲ್ಲ."

"ಕೆಲಸವ್ರೋ?"

"ಎಲ್ಲಿಗೆ ಹೋದರೂ ನನಗೆ ಒಂದೊಂದು ಕೆಲಸ ದೊರೆಯುತ್ತೆ."

"ನೀನು ಹೇಗಾದ್ರೂ ಜೀವಿಸ್ತೀಯಾಂತ ನಂಗೆ ಗೊತ್ತು" ನಿಟ್ಟುಸಿರು ಬಿಟ್ಟಳು. "ಹಾಗೆ ಎಲ್ಲಾದರೂ ಏನಾದರೂ ಕೆಲ್ಸ ಮಾಡಿ ಜೀವಿಸಿದರೆ ಸಾಕೇನೋ. ನಿನ್ನ ಮೇಲೆ ನಾನು ಯಾವ್ಯಾವ ಕನಸು ಕಟ್ಟಿದ್ದೆ ಗೊತ್ತಾ" ಆಗಲೂ ಅವ ಮರು ನುಡಿಯಲಿಲ್ಲ. ಒಂದು ಕ್ಷಣ ಮೌನದ ನಂತರ ಆಕೆ ಪುನಃ ಕೇಳಿದಳು, "ನೀನು ಮತ್ತೆ ಹೋಗ್ತೀಯಾ?" ಅವ ಮೌನಿಯಾದ. ಅವನ ಮೌನವನ್ನು ಸಮ್ಮತಿಸಿದ ಅಕ್ಕ, "ಇನ್ನೆಲ್ಲೂ ಹೋಗ್ಬೇಡಪ್ಪ. ನಮ್ಮ ಮನೆ ನೋಡ್ಲಿಕ್ಕೆ ಯಾರೂ ಇಲ್ಲ. ನೀನು ಇಲ್ಲೇ ನಿಂತರೆ ಸಾಕು. ದೇವರು ನಿನಗೆ ಒಳ್ಳೆ ಮಾರ್ಗ ತೋರಿಸ್ತಾನೆ." ಎಂದಳು.

ಹೊರಗೆ ಗಾಳಿ ರಭಸವಾಗಿ ಬೀಸಿದಾಗ ಮಳೆಯ ಹನಿ ಹಜಾರದ ಮೇಲೆ ಎರಚಿತು. ಒಳಗೆ ನುಗ್ಗಿದ ಗಾಳಿಗೆ ಸೀಮೆ ಎಣ್ಣೆ ದೀಪ ಒಮ್ಮೆ ನಂದಿ ಹೋಗುವಂತೆ ತುಸು ಕ್ಷೀಣವಾಗಿ ಮತ್ತೆ ಪ್ರಜ್ವಲಿಸತೊಡಗಿತು. ಅಕ್ಕ ಮತ್ತೆ ಸಡಿಲಗೊಂಡ ಹೂವಿನ ಮಾಲೆಯನ್ನು ಹೆಣೆಯ ತೊಡಗಿದಳು.

"ಪ್ರಸನ್ನ ನಿಂಗೆ ಗೊತ್ತಿಲ್ವಾ? ಅವನ್ನ ಒಬ್ಬ ದೊಡ್ಡ ಉದ್ಯೋಗಸ್ಥ ಬಂದು ಮದುವೆ ಮಾಡಿದ. ಕಾರು ಬಂಗ್ಲೆ ಇರುವಾತ. ಆಕೆ ನಿಜವಾಗಿಯೂ ಭಾಗ್ಯಶಾಲಿ ಎಂದುಕೊಂಡಿದ್ದೆ. ವಿವಾಹವಾದ ಒಂದು ವಾರದಲ್ಲೇ ಅವ ಕಾರು ಅಪಘಾತದಲ್ಲಿ ಸತ್ತು ಹೋದ. ಈಗ ಅವಳು ಹುಚ್ಚಿಯಾಗಿ ಸುತ್ತುತ್ತಿದ್ದಾಳೆ. ನಮ್ಮ ಸೋದರ ಮಾವ ಕಳೆದ ವರ್ಷ ಕ್ಯಾನ್ಸರ್‌ನಿಂದ ಸತ್ತು ಹೋದರು. ನಮ್ಮ ಸುಲೋಚನ ಇಲ್ಲೇ ಇದ್ದಾಳೆ. ಅವಳು ಯಾವಾಗ್ಲೂ ನಿನ್ನ ವಿಷಯ ಕೇಳ್ತಾ ಇರ್ತಾಳೆ."

ತಟ್ಟನೆ ಅವ ಕೇಳಿದ, "ಅವಳ ವಿವಾಹ ಆಗ್ಲಿಲ್ವಾ?"

"ಅವಳು ನಿನ್ನ ಮರೀತಾಳೇನೋ. ಅವಳಿಗೆ ಸಹ ಒಂದೆರಡು ಜನ ಕೇಳಿಕೊಂಡು ಬಂದಿದ್ದರು ಬೇಡಾಂದಳು."

ಸಹಜವಾಗಿಯೇ ಅಚ್ಚರಿಯ ಸಂಗತಿ! ತಾನಿಷ್ಟು ದಿವಸಗಳಿಂದ ಅದೇಕೆ ಸುಲೋಚನಾಳನ್ನು ಸಂಪೂರ್ಣ ಮರೆತಿದ್ದೆ. ಉದ್ದವಾದ ಮೂಗು, ತೊಂಡೆ ಹಣ್ಣಿನ ವರ್ಣ ತುಂಬಿದ ತುಟಿಗಳಿರುವ ಪುಟ್ಟದಾದ ಮುಖದ ಸುಂದರಿ ಸುಲೋಚನಳನ್ನು ತಾನೆಷ್ಟೋ ಬಾರಿ ಕಾಡಿಸುತ್ತಿದ್ದೆ. ಅಕ್ಕ ತಮ್ಮಿಬ್ಬರನ್ನು ಶಾಲೆಗೆ ಕರೆದುಕೊಂಡು ಹೋಗುತ್ತಿದ್ದಳು. ಅಕ್ಕನ ಎರಡು ತೋಳು

ಗಳಲ್ಲಿ ತಾವಿಬ್ಬರೂ ಎಷ್ಟೋ ಬಾರಿ ಜೋತಾಡಿ, ಬೊಬ್ಬೆ, ಚೇಷ್ಟೆ ಮಾಡಿ ಬಾರಿ ಅವಳ ಮುಖ ಪರಚಿದ್ದ. ಆಗ ಅಕ್ಕ ತಮ್ಮಬ್ಬರ ಮಧ್ಯೆ ಅಡ್ಡ ನಿಲ್ಲುತ್ತಿದ್ದಳು. 'ನೀನು ಸುಮ್ಮನಿರು. ಅವಳನ್ನು ಚಿಕ್ಕ ಹುಡುಗಿ ಅಲ್ವೇನೋ. ಅವಳು ಅಳ್ತಾ ಇದ್ದಾಳೆ ನೋಡು.' 'ಮತ್ತೆ ಅವಳಿಗೆ ಯಾಕೆ ಅಷ್ಟು ಗರ್ವ' ಎಂದು ತಾನು ಹೇಳುತ್ತಿದ್ದೆ. 'ನನ್ನ ಮುದ್ದು ಕೂಸಲ್ಲವ ಸುಮ್ನೆ ಇರು ರಾಜು. ಬೇಡ. ಬೇಡ' ಅವಳ ಕಣ್ಣುಗಳಿಂದ ಧಾರಾಕಾರವಾಗಿ ಹನಿ ಉದುರಿದಾಗ ಮಾತ್ರ ತಾನು ಸುಮ್ಮನಾಗುತ್ತಿದ್ದೆ.

ಇಬ್ಬರೂ ಬೆಳೆದಂತೆಯೆ ಇಬ್ಬರ ಜಗಳವೂ ಅಡಗಿ ಹೋಗಿತ್ತು. ಯಾವುದನ್ನೂ ಅಷ್ಟು ಸುಲಭವಾಗಿ ಬಿಟ್ಟು ಕೊಡುವ ಮನಸ್ಸಾಗಿರಲಿಲ್ಲ, ಅವಳದು. ಸಕಲವೂ ಅಳುವಿನಿಂದಲೇ ಮುಕ್ತಾಯವಾಗುತ್ತಿತ್ತು.

ಅಮ್ಮ ಹೇಳುತ್ತಿದ್ದರು, 'ಇವರಿಬ್ಬರನ್ನು ಮದ್ವೆ ಮಾಡಿಸಿದರೂ ಇವರ ಜಗಳ ನಿಲ್ಲೋದಿಲ್ಲ. ಇಬ್ಬರೂ ಹೊಡೆದಾಡಿ ಸಾಯಬೇಕಾಗ್ತದೆ. ಮನೇಲ್ಲಿ ಒಂದು ಪೋಲೀಸನ್ನೇ ಬಿಡ್ಬೇಕಾಗುತ್ತೆ' ಇದನ್ನು ಕೇಳುವಾಗ ಅಕ್ಕ ಬಾಯಿಗೆ ಕೈಯಿಟ್ಟು ಕುಲು ಕುಲು ನಗುತ್ತಿದ್ದಳು. ಸುಲೋಚನ ಅವನ ಭಾವಿ ಪತ್ನಿಯೆಂದು ಹಗಲುಗನಸು ಕಂಡ ಒಂದು ರಮ್ಯ ದಿನವಾಗಿತ್ತು ಅಂದು.

ಭೀಕರವಾದ ನಿಶೆಯನ್ನು ಸೀಳಿಕೊಂಡು ಬರುತ್ತಿರುವ ಟಾರ್ಚ್ ಲೈಟಿನ ಪ್ರಕಾಶದೊಡನೆ ಭಾವ ಮೆಟ್ಟಲೇರಿ ಒಳಬಂದರು. ಕೊಳಕಾದ ತೊಟ್ಟಿ ಉಡುಪಿನಂತೆ ಕೈಯಲ್ಲಿದ್ದ ಕೈ ಚೀಲವೂ ಇತ್ತು. ಅದರ ತುಂಬಾ ಸಾಮಾನುಗಳಿದ್ದವು. ಅಕ್ಕ ಅದನ್ನು ಇಸಿದುಕೊಳ್ಳುತ್ತಾ ಮುನ್ನುಗ್ಗಿ ಬಂದ ಹರ್ಷದಿಂದ. "ತಮ್ಮ ಬಂದಿದ್ದಾನೆ." ಎಂದು ಹೇಳಿದಳು. ಭಾವ ಜೇಬಿನೆಡೆಗೆ ಒಂದು ಒಣ ಮಂದಹಾಸ ಬೀರಿದರು. ಒಂದೆರಡು ಕ್ಷಣ ಭಾವನ ಕಣ್ಣುಗಳು ಆತನ ಒಡಲಲ್ಲಿ ನಾಟಿದವು.

"ರಾಘು, ಇದೇನೊ ವೇಷ? ನಿನಗೇನಾಗಿತ್ತು? ನೀನೆಲ್ಲಿದ್ದೆ ಇಷ್ಟು ವರ್ಷ?" ಅವರ ಕಂಠ ತುಸು ಗಡುಸಾಗಿತ್ತು. ಆಗ ಆತ ನಸುನಗುತ್ತಿದ್ದ. ಮತ್ತೆ ಅವರು, "ಏನಾದರೂ ಆಗಲಿ, ಇವನು ಬಂದನಲ್ಲ." ಎಂದು ತಮ್ಮಷ್ಟಕ್ಕೆ ತಾವು ಹೇಳಿಕೊಂಡು ಗಹಗಹಿಸಿ ನಕ್ಕರು. ಮತ್ತೆ ಏನೇನೋ ಕೇಳಿದರು. ಆದರೆ ಯಾವುದಕ್ಕೂ ಆತನಿಂದ ಯಾವ ಉತ್ತರವೂ ಬರಲಿಲ್ಲ. ಆದರೆ ಮಾತನಾಡಲು ಪ್ರಾರಂಭಿಸಿದರು.

"ಸೇಲ್ಸ್ ಟ್ಯಾಕ್ಸ್ ಆಫೀಸರ್ ಮತ್ತು ಸಾಲಗಾರರ ತೊಂದರೆ, ಮುಖ್ಯವಾಗಿ ಗ್ರಾಮದ ದಾರಿದ್ರ್ಯ: ಇವೆಲ್ಲಾ ನಮ್ಮ ಇಲ್ಲಿಯ ಸಮಾಚಾರ," ಲೋಕಾಭಿರಾಮವಾದ ಒಂದೆರಡು ಮಾತನಾಡಿದರು. ವಿಶಾಲಲೋಕದ ಇತರ ವಿಷಯಗಳೆಲ್ಲಾ ಅವರ ಪಾಲಿಗೆ ಶೂನ್ಯವಾಗಿದ್ದವು. ಬಹುಶಃ ತನ್ನ ಹಳ್ಳಿಗಿಂತ ಹಿರಿಯ ಲೋಕವೇ ಇನ್ನೊಂದಿಲ್ಲ ಎಂಬುದಾಗಿರಬೇಕು ಅವರ ಮಾತಿನ ಭಾವ! ಈಗ ಆ ಭಾವನ ಹೊಟ್ಟೆ ತುಂಬಾ ಮುಂದೆ ಬಂದು ಆತನೊಬ್ಬ ವ್ಯಾಪಾರಿಯೆಂದು ಸಾರಿ ಹೇಳುತ್ತಿತ್ತು. ತಲೆಯಲ್ಲಿನ ಕೂದಲೆಲ್ಲಾ ಉದುರಿ ಚೆಂದಿನಂತಿತ್ತು ಬುರುಡೆ.

ಭಾವ ಅಕ್ಕನನ್ನು ವಿವಾಹವಾದ ಹೊಸದರಲ್ಲಿ ಅವರಿಗೆ ತನ್ನ ಮೇಲೆ ತುಸು ದ್ವೇಷವಿತ್ತೆಂಬುದನ್ನು ನೆನೆಸಿಕೊಂಡ. ಅವರಿಬ್ಬರು ವಿವಾಹವಾದ ಮೊದಲಿನಲ್ಲಿ ಆತ ಅವರ ಮನೆಯ ಹೊಸಲು ಮೆಟ್ಟುತ್ತಿರಲಿಲ್ಲ. ಭಾವನೊಡನೆ ಬಾಯಿಬಿಟ್ಟು ಮಾತನಾಡುವ ಸಂದರ್ಭ ಸಹ ದೊರಕುತ್ತಿರಲಿಲ್ಲ.

ಅಷ್ಟರಲ್ಲಿ ಮೌನವನ್ನು ಮುರಿಯುತ್ತಾ ಭಾವನ ಧ್ವನಿ ಬಂತು, "ರಾಘುವಿಗೆ ಒಂದು ವ್ಯಾಪಾರ ಮಾಡಿಕೊಂಡು ಇಲ್ಲೇ ನಿಂತರಾಯ್ತು."

"ಹೌದು, ನಾನು ಸಹ ಅದೇ ಹೇಳ್ತಿರೋದು. ಮತ್ತೆ ನಮ್ಮ ಸುಲೋಚನ ಸಹ ಇದ್ದಾಳಲ್ಲ." ಎಂದು ಅಕ್ಕನೂ ದನಿಗೂಡಿಸಿದಳು.

"ಹೌದು ಹೌದು ಅದ್ನ ಎಷ್ಟು ದಿನಾಂಕ ಹೀಗೆ ಕಾಯೋದು?" ಎಂದು ಭಾವ ಹೇಳಿದರು.

ಹುಲ್ಲು ಚಾಪೆಯ ಮೇಲೆ ಊಟಕ್ಕೆ ಕುಳಿತಾಗ ಮನಸ್ಸು ತುಸು ಹಗುರವಾದಂತಾಯಿತು. ಪುಳಿಯೋಗರೆ, ಮಾವಿನ ಹಣ್ಣಿನ ರಸ ಬಹಳ ರುಚಿಯಾಗಿದ್ದವು. ಇದನ್ನು ತಿಂದು ಅದೆಷ್ಟು ವರ್ಷಗಳಾಗಿದ್ದವು! ಅಕ್ಕ ಎಲೆಯಲ್ಲಿ ಬಡಿಸುತ್ತಿರುವಾಗ ಹಳೆಯ ನೆನಪಿನ ಕಣಗಳು ಚಿತ್ತಭಿತ್ತಿಯಲ್ಲಿ ಮೂಡತೊಡಗಿದವು. ಆಗ ತಾನು ಬಹಳ ಕಿರಿಯನಾದಂತೆ ಅನಿಸಿತು ಅವನಿಗೆ. ಪಕ್ಕದಲ್ಲಿ ಕುಳಿತಿದ್ದ ಅಕ್ಕ ಮೃದುವಾಗಿ ನುಡಿದಳು. "ನಮ್ಮ ಊಟ ನಿನಗೆ ಹಿಡಿಸಿತೋ ಏನೋ. ನಿನಗಾಗಿ ಪ್ರತ್ಯೇಕವಾಗಿ ನಾನು ಏನನ್ನೂ ಮಾಡ್ಲಿಲ್ಲ," ಅಷ್ಟರಲ್ಲಿ ಸಮೀಪದಲ್ಲಿದ್ದ ಭಾವ ನಸುನಗುತ್ತಾ ಹೇಳಿದರು; "ಇವತ್ತಿನದು ಹೇಗೂ ಆಯ್ತಲ್ಲ, ಇನ್ನು ನಾಳೆಯಿಂದ್ಲ ಸರಿಯಾಗಿ ಗಮನಿಸಿಕೊ, ಆಯ್ತು."

ಊಟವಾದ ಬಳಿಕ ದಕ್ಷಿಣ ಭಾಗದಲ್ಲಿರುವ ಕೊಠಡಿಯಲ್ಲಿ ಚಾಪೆ ಹಾಸಿಕೊಟ್ಟಳು. ಅದೇ ಕೋಣೆಯಲ್ಲಿ ಆತ ಒಮ್ಮೆ ಮಲಗಿದ್ದ. ಆಗ ಕೋಣೆ ಇಷ್ಟು ಓರಣವಾಗಿರಲಿಲ್ಲ. ಈಗ ಒಂದು ಕಿಟಕಿಯನ್ನು ಸಹ ಇಡಿಸಿದ್ದರು. ಮೊದಲು ಹಗಲಿನಲ್ಲಿ ಕೂಡ ಆ ಕೋಣೆಯಲ್ಲಿ ಕತ್ತಲು ತುಂಬಿತ್ತು. ಅದೂ ಅಲ್ಲದೆ ಭತ್ತದ ಹೊಸ ವಾಸನೆ ತುಂಬಿಕೊಂಡಿತ್ತು. ಈಗ ಹೊರಗೆ ಧಾರಾಳವಾಗಿ ಮಳೆ ಬೀಳುವುದರಿಂದಲೋ ಏನೋ ಕೋಣೆಯಲ್ಲಿ ಮಣ್ಣಿನ ವಾಸನೆ ತುಂಬಿತ್ತು.

ಕೋಣೆಯ ಸೀಮೆ ಎಣ್ಣೆ ದೀಪವನ್ನು ಊದಿ ಕೆಡಿಸಬೇಕಾಗಿರಲಿಲ್ಲ. ಕಿಟಕಿಯ ಸಂದಿನಿಂದ ತೂರಿ ಬಂದ ಗಾಳಿಗೆ ಅದು ನಂದಿ ಹೋಯಿತು. ಗರ್ಜಿಸಿ ಬೀಸುತ್ತಿದ್ದ ಗಾಳಿಯೊಡನೆ ಮಳೆಯೂ ಒಂದಾಯಿತು. ನಿಧಾನವಾಗಿ ಬೀಳುತ್ತಿದ್ದ ಮಳೆ ಕ್ಷಣದಲ್ಲಿ ಅವ್ಯಾಹತವಾಗಿ ಉದುರಿತು.

ಎಳೆಯ ಪ್ರಾಯದಲ್ಲಿ ಮಳೆಗಾಲದ ಒಂದು ದಿನ ರಾತ್ರಿ ನಡೆದ ಘಟನೆಯನ್ನು ನೆನೆಯುತ್ತಾ ಹೊರಗೆ ಬೀಳುತ್ತಿದ್ದ ಮಳೆಯೊಂದಿಗೆ ಹೃದಯ

ಬೆಳಿಗ್ಗೆ ಎದ್ದು ಕಣ್ಣುಜ್ಜಿ ನೋಡಿದಾಗ ಸುಲೋಚನಾಳ ಅರಳಿದ ಪ್ರಕಾಶಮಾನವಾದ ಮುಖ ಬಾಗಿಲಿನ ಚೌಕಟ್ಟಿನೊಳಗಿತ್ತು. ಆಕೆಯ ಕಣ್ಣಿನ ಅದ್ಭುತ ಆಶ್ಚರ್ಯದ ದೃಷ್ಟಿ ಅವನನ್ನು ಈಕ್ಷಿಸುತ್ತಿತ್ತು. ಆಗ ತಾನೆ ಎರೆದು ಸಡಿಲವಾಗಿ ಬಿಗಿದ ಹೆರಳು, ಹಣೆಯಲ್ಲಿನ ಗಂಧದ ತಿಲಕವಿಟ್ಟ ಮುಖಾರವಿಂದವು ಅವಳ ಸಹಜ ಸೌಂದರ್ಯವನ್ನು ಬಿಂಬಿಸುತ್ತಿತ್ತು. ಅಕ್ಕ ಬಹುಶಃ ಯಾರನ್ನಾದರೂ ಕಳುಹಿಸಿ ಅವಳನ್ನು ಬರಲು ಹೇಳಿರಬೇಕು.

ಆತ ಆಕೆಯನ್ನೊಮ್ಮೆ ನೋಡಿ ಮಂದಹಾಸ ಬೀರಿದ. ಆಕೆ ಮೃದುವಾಗಿ, "ಚಾ ತರಲಾ ?" ಎಂದು ಕೇಳಿದಳು.

ಆತನ ಉತ್ತರವನ್ನು ನಿರೀಕ್ಷಿಸದೆ ಆಕೆ ಚಹಾ ತರಲು ಅಡುಗೆ ಮನೆಗೆ ಹರ್ಷದಿಂದ ಓಡಿದಳು.

ಸುಲೋಚನ ಚಹಾ ತಂದು ಟೀಪಾಯಿಯ ಮೇಲೆ ಇರಿಸಿದೊಡನೆ ಆತ ಎದ್ದು ಕುಳಿತ. "ಬಂದಾಗ ತುಂಬಾ ಕತ್ತಲಾಗಿತ್ತಲ್ವ ?" ಮೃದುವಾದ ಧ್ವನಿಯೊಂದು ಹೊರಟಿತು ಅವಳ ಕಂಠದಿಂದ. ಹೌದೆಂದು ತಲೆ ಆಡಿಸಿದನಷ್ಟೆ ಆತ.

"ನಿನ್ನೆ ನಾನು ದೇವಾಲಯದಲ್ಲಿ ಕೈ ಮುಗಿದು ಬರುವಾಗ ನಹ ನಿಮ್ಮನ್ನು ನೆಗೆದುಕೊಂಡಿದ್ದೆ,"



ಸಂದರ್ಭ ಅನುಕೂಲವಾಗುವ
ಹಾಗಿದ್ದರೆ ನಾವೆಲ್ಲ ಬಲಹೀನರೆ

# ಬಲಹೀನ

'ಪ್ರಭು'

ವರ್ಷದ ರಜೆ ಮಂಜೂರಾಗಿದೆ. ತಂದೆ ತಾಯಿಗಳನ್ನು ನೋಡಲು, ಹಳೆಯ ಗೆಳೆಯರೊಡನೆ ಬೆರೆಯಲು ಊರಿಗೆ ಹೊರಡುವ ತವಕ. ಮುಂಜಾನೆಯ ಮೊದಲ ರೈಲಿನಲ್ಲೇ ಹೊರಡಲು ನಿರ್ಧರಿಸುತ್ತೇನೆ. ನಸುಕಿನಲ್ಲಿಯೇ ಎದ್ದು ಆಟೊ ಹಿಡಿಯುತ್ತೇನೆ. ಇತರರಂತೆ ರಿಕ್ಷಾ ಹತ್ತುವ ಮೊದಲೇ ಹೆಚ್ಚು ಹಣಕ್ಕಾಗಿ ವರಾತ ಹಾಕುವುದಿಲ್ಲ, ರಿಕ್ಷಾದವ. ಮನಸ್ಸಿಗೆ ಹರ್ಷವಾಗುತ್ತದೆ. ಎಷ್ಟು ಒಳ್ಳೆಯವನಿವನು ಎನಿಸುತ್ತದೆ. ರಿಕ್ಷಾದಿಂದ ಇಳಿಯುವಾಗಲೂ ಇವನು ಹೆಚ್ಚು ಹಣ ಬೇಡದಿದ್ದಲ್ಲಿ ನಾನಾಗಿ ಇವನಿಗೆ ಒಂದು ರೂಪಾಯಿ ಹೆಚ್ಚು ಕೊಡಬೇಕು ಎಂದುಕೊಳ್ಳುತ್ತೇನೆ.

ರೈಲು ನಿಲ್ದಾಣ ಹತ್ತಿರ ಬರುತ್ತದೆ. ಊರಿಗೆ ಹೊರಡುವ ರೈಲು ಆಗಲೇ ಬಂದು ನಿಂತಿರುವುದು ಕಾಣುತ್ತದೆ. ರಿಕ್ಷಾ ನಿಂತೊಡನೆ ಮೀಟರು ನೋಡುತ್ತೇನೆ. ಎರಡು ರೂಪಾಯಿ ತೋರಿಸುತ್ತದೆ. ಐದರ ನೋಟನ್ನು ತೆಗೆದು ರಿಕ್ಷಾದವನಿಗೆ ಕೊಡುತ್ತೇನೆ. ರಿಕ್ಷಾದವನು ಮಾತಿಲ್ಲದೆ ಮೂರು ರೂಪಾಯಿಯನ್ನು ಹಿಂತಿರುಗಿಸುತ್ತಾನೆ. ನಾನೂ ಮಾತಿಲ್ಲದೆ. ನಿಂತಿರುವ ರೈಲಿನೆಡೆಗೆ ಧಾವಿಸುತ್ತೇನೆ.

ಏಕೆ ಹೀಗಾಯಿತು?

ನನ್ನನ್ನು ನಾನೇ ಪ್ರಶ್ನಿಸಿಕೊಳ್ಳುತ್ತೇನೆ. ನನ್ನ ನಿರ್ಧಾರವೇಕೆ ಗಾಳಿಗೆ ತೂರಿಹೋಯಿತು? ರಿಕ್ಷಾದದವನು ಹೆಚ್ಚು ಹಣ ಬೇಡದಿದ್ದರೂ ನಾನೇಕೆ ಒಂದು ರೂಪಾಯಿ ಹೆಚ್ಚು ಕೊಡಲಿಲ್ಲ? ಜಗಳಗಂಟ ರಿಕ್ಷಾದವರು ನನ್ನಿಂದಲೇ ಒಂದಕ್ಕೆರಡು ಹಣ ಪಡೆದುದು ಇಲ್ಲವೆ? ಆಗ ಅವರ ಬಾಯಿಗೆ ಹೆದರಿ ಹಣ ತೆತ್ತವನಿಗೆ ಈಗ ತಾನಾಗಿ ಕೊಡುವುದು ಏಕೆ ಸಾಧ್ಯವಾಗಲಿಲ್ಲ? ರಿಕ್ಷಾದವನ ಒಳ್ಳೆಯತನಕ್ಕೆ ನನ್ನ ಮೆಚ್ಚುಗೆಯ ಕುರುಹಾಗಿ ಬಕ್ಷೀಸ್ ಒಂದು ರೂಪಾಯಿಯನ್ನು ಕೊಡುವುದೂ ನನ್ನಿಂದಾಗಲಿಲ್ಲವಲ್ಲ ಎಂದು ಹಳಹಳಿಸುತ್ತೇನೆ.

*

ನಾನು. ರಾಜ ಬಸ್ಸಿನಲ್ಲಿ ಹೋಗುತ್ತಿದ್ದೇವೆ. ಜನರಿಗೆ ಟಿಕೇಟು ಕೊಡು ಕೊಡುತ್ತಾ, ಕಂಡಕ್ಟರ್ ಹತ್ತಿರ ಬರುತ್ತಿದ್ದಾನೆ. ಟಿಕೇಟನ್ನು ನಾನೇ ತೆಗೆದುಕೊಳ್ಳಬೇಕು ಎಂದುಕೊಳ್ಳುತ್ತೇನೆ. ನನ್ನ ಕೈ ಜೇಬಿಗಿಳಿದು ಹಣವನ್ನು ಎಳೆಯುತ್ತದೆ. ಕಂಡಕ್ಟರನನ್ನು ಕಂಡೊಡನೆಯೆ ರಾಜ ಹಣ ತೆಗೆದು ಕೊಟ್ಟು ಇಬ್ಬರ ಟಿಕೇಟನ್ನೂ ಪಡೆಯುತ್ತಾನೆ. ಹಣದೊಂದಿಗೆ ಹೊರ ಬಂದಿದ್ದ ನನ್ನ ಕೈ ಮತ್ತೆ ಒಳಗಿಳಿಯುತ್ತದೆ.

ಮತ್ತೇಕೆ ಹೀಗಾಯಿತು? ನಾನೇಕೆ ರಾಜನನ್ನು ತಡೆಯಲಿಲ್ಲ? ಅವನಿಗಿಂತ ಮುಂಚೆಯೆ ಹಣದ ಮೇಲೆ ಕೈ ಇಟ್ಟಿದ್ದೂ ನಾನೇಕೆ ಮುಂದಾಗಲಿಲ್ಲ. ನಾನು ಜಿಪುಣನೆ? ಖಂಡಿತ ಅಲ್ಲ. ರಾಜ ಸುಮ್ಮನಿದ್ದಿದ್ದರೆ ನಾನೇ ಹಣಕೊಡುತ್ತಿದ್ದೆ.

ಸಂಶಯವಿಲ್ಲ. ಆದರೂ ... ಆದರೂ... ನನ್ನಲ್ಲೇನೊ ಕೊರತೆಯಿರಬೇಕು ಎನಿಸುತ್ತದೆ.

*

ನನಗೆ ವರ್ಗವಾಗಿದೆ. ಮೂರು ವರ್ಷದಿಂದ ಪ್ರಾಮಾಣಿಕವಾಗಿ ಪತ್ರ ತಂದು ಕೊಡುತ್ತಿರುವ ಅಂಚೆಯವನಿಗೆ ಒಂದು ಹದಿನೈದು ರೂಪಾಯಿಯನ್ನಾದರೂ ಕೊಡಬೇಕೆಂದುಕೊಳ್ಳುತ್ತೇನೆ.

ಊರಿಗೆ ಹೊರಡಲು ಒಂದು ವಾರವಿರುವಾಗ ಅಂಚೆಯವನ ಭೇಟಿಯಾಗುತ್ತದೆ. ಅವನಿಗೆ ಉಡುಗೊರೆಯಾಗಿ ಹಣ ಕೊಡಬೇಕೆಂದುಕೊಂಡಿದ್ದು ನೆನಪಾಗುತ್ತದೆ. ಕಿಸೆಯಲ್ಲಿ ಇಪ್ಪತ್ತೈದು ರೂಪಾಯಿಗಳಿವೆ. ಐದರ ನೋಟೊಂದನ್ನು ತೆಗೆದು ಅಂಚೆಯವನ ಕೈಗಿಡುತ್ತೇನೆ. ಅವನ ಮುಖ ಅರಳುತ್ತದೆ. ಸಂತೋಷದಿಂದ ಶುಭ ಕೋರಿ ಅವನು ಹೊರಟು ಹೋಗುತ್ತಾನೆ.

ಅವನ ಹಿಂದೆಯೆ ನನ್ನ ಮನಶ್ಶಾಂತಿಯೂ ಹಾರಿಹೋಗುತ್ತದೆ. ನನ್ನ ಅನಿಶ್ಚಿತತೆಗೆ, ನೆನೆಸಿಕೊಂಡಂತೆ ಹಣವನ್ನೀಯಲು ಹಿಂದೆಗೆಯುವ ನನ್ನ ಮಾನಸಿಕ ಅಸಾಮರ್ಥ್ಯಕ್ಕೆ ನನಗೆ ಕೆಡುಕೆನಿಸುತ್ತದೆ.

ನನ್ನ ವರ್ತನೆಗೆ ಕಾರಣ ಹುಡುಕುತ್ತೇನೆ. ನನ್ನ ಬಳಿಯಿದ್ದುದೇ ಇಪ್ಪತ್ತೈದು ರೂಪಾಯಿ. ಅದರಿಂದಲೇ ಐದು ರೂಪಾಯಿ ತೆಗೆದು ಕೊಡಲಿಲ್ಲವೆ? ಊರಿಗೆ ಹೋಗಲು ನನಗೆ ಹಣ ಬೇಡವೆ ಎಂದುಕೊಳ್ಳುತ್ತೇನೆ. ಇದೊಂದು ಟೊಳ್ಳು ಕಾರಣವೆನಿಸುತ್ತದೆ. ಊರಿಗೆ ಹೋಗಲು ಈ ಇಪ್ಪತ್ತು ತಾನೆ ಸಾಕೆ? ಹೇಗೂ ಸಾಲ ಮಾಡುತ್ತಿದ್ದೆ. ಇನ್ನೊಂದು ಹತ್ತು ರೂಪಾಯಿ ಹೆಚ್ಚು ಸಾಲ ಮಾಡಿದ್ದರಾಗುತ್ತಿತ್ತು ಎನಿಸಿ ನನ್ನ ಬಗೆಗೇ ಜುಗುಪ್ಸೆಯುಂಟಾಗುತ್ತದೆ?

*

ನನ್ನ ಈ ಸ್ವಭಾವ ನನಗೆ ಬಗೆಹರಿಯದ ಸಮಸ್ಯೆಯಾಗಿದೆ? ಅನೇಕ ಬಾರಿ ಯೋಚಿಸಿ, ಯೋಚಿಸಿ ಹಣ್ಣಾಗಿದ್ದೇನೆ.

---




"ಎಲ್ಲಾ ಹೆಂಡಂದಿರ ಹಾಗೆ ನಾನೂ ನಿಮ್ಮ ಜತೆಗೆ ಸ್ವಲ್ಪ ಹೊತ್ತು ಏಕಾಂತವಾಗಿರಬೇಕು ಅಂದ್ರೆ — ಆ ಅದೃಷ್ಟ ಎಲ್ಲಿದೆ ನನಗೆ ?"

ನನ್ನಲ್ಲಿಲ್ಲದ ಅರ್ಹತೆಯನ್ನು ರಾಜನಲ್ಲಿ ಕಂಡು ಈರ್ಷ್ಯೆಪಟ್ಟಿದ್ದೇನೆ. ಆತ ಸ್ವಭಾವತಃ ಧಾರಾಳಿಯೆಂಬುದು ಅವನ ಎಲ್ಲ ಕಾರ್ಯಗಳಲ್ಲೂ ಪ್ರಕಟವಾಗುತ್ತದೆ. ಗೆಳೆಯರೊಡನೆ ಹೋಟೆಲಿಗೆ ಹೋದಾಗ, ಚಲನಚಿತ್ರ ನೋಡಲು ಹೋದಾಗ ಹಣ ಕೊಡಲು ಅವನೇ ಮುಂದು. ಇತರರು 'ಬೇಡ, ನಾನು ಕೊಡುತ್ತೇನೆ' ಎಂದರೆ ಮಾತ್ರ ಅವನು 'ಆಗಲಿ' ಎಂದು ಸುಮ್ಮನಾಗುತ್ತಾನೆ. ಅವನಂತೆ ನನಗೇಕೆ ವರ್ತಿಸಲಾಗುವುದಿಲ್ಲ ಎನಿಸುತ್ತದೆ.

ನನ್ನ. ರಾಜನ ಇಬ್ಬರ ಸ್ವಭಾವನ್ನೂ ವಿಶ್ಲೇಷಿಸಲೆತ್ನಿಸಿದ್ದೇನೆ. ರಾಜ ಒಂಟಿ ಜೀವಿ. ಅವನ ತಂದೆ ತಾಯಿಗಳು ಬೇರೆ ಊರಿನಲ್ಲಿದ್ದಾರಾದರೂ ಅವರಿಗೆ ಹಣ ಕಳಿಸುವ ಅಗತ್ಯವಿಲ್ಲ. ಅವನ ತಂದೆ ಇನ್ನೂ ನಿವೃತ್ತರಾಗಿಲ್ಲ. ಆದರೂ ರಾಜನ ನಿಗರ್ವವಾದ ವರ್ತನೆಗೆ, ಸ್ವಭಾವಜನ್ಯ ಧಾರಾಳ ಪ್ರವೃತ್ತಿಗೆ, ದುಂದುಗಾರಿಕೆಗೆ ಬಲಿಯಾಗದ ಅವನ ಸಂಯಮಶೀಲತೆಗೆ ಯಾರಾದರೂ ತಲೆಬಾಗಲೇಬೇಕು.

ನಾನು ಮೊದಲಿನಿಂದಲೂ ತಾಪತ್ರಯದಲ್ಲೇ ಬೆಳೆದವ. ಓದು ಮುಗಿಸಿ ಕೆಲಸಕ್ಕೆ ಸೇರುತ್ತಿದ್ದಂತೆಯೆ ಮನೆಯ ಜವಾಬ್ದಾರಿಯೂ ನನ್ನ ಮೇಲೇ ಬಿದ್ದಿತು. ತಿಂಗಳು ತಿಂಗಳೂ ಬರುವ ಸಂಬಳವನ್ನುಳಿದು ಬೇರೆ ವರಮಾನವಿಲ್ಲ. ತಾರೀಖು ಇಪ್ಪತ್ತಾಗುವ ಹೊತ್ತಿಗೆ ಜೇಬು ಖಾಲಿಯಾಗಿ ಉಳಿದ ದಿನಗಳಲ್ಲಿ ಅಲ್ಲಲ್ಲಿ ಕೈಸಾಲ, ಅಂದ ಮೇಲೆ ಖರ್ಚು ಮಾಡುವ ಸಮಯ ಬಂದಾಗ ಕೈ ಹಿಂದಾಗುವುದು ಅಸಹಜವೇನಲ್ಲ ಎನಿಸುತ್ತದೆ.

ಆದರೂ! ನನ್ನ ಮನಸ್ಸನ್ನು ಸಂಶಯದ ಕೀಟ ಕೊರೆಯುತ್ತಲೇ ಇದೆ.

ಬರುವ ವರುಷ ನನಗೆ ಪ್ರೊಮೋಶನ್ ದೊರೆಯುವ ಸಾಧ್ಯತೆಯಿದೆ. ಆಗ ನನ್ನ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳುವುದರಲ್ಲಿ ಸಂಶಯವಿಲ್ಲ. ಇಷ್ಟು ದಿನ ಖರ್ಚು ಮಾಡಲು ಹಿಂದೆಗೆಯುತ್ತಿದ್ದ ನನ್ನ ಕೈ ಆಗ ಮುಂದುವರೆದೀತೆ? "ಅಭ್ಯಾಸಗಳು ಸುಲಭದಲ್ಲಿ ಸಾಯುವುದಿಲ್ಲ" ಎಂದು ಆಂಗ್ಲರು ಹೇಳುವ ಗಾದೆಯ ಮಾತು ನೆನಪಾಗುತ್ತದೆ.

ನಾನೂ ಅಭ್ಯಾಸದ ದಾಸನಾಗಿಯೆ ಉಳಿಯುತ್ತೇನೆಯೆ?

**ಇಟಲಿಯ ಅಂಚೆ ವ್ಯವಸ್ಥೆ ಅದೆಷ್ಟು ಹದಗೆಟ್ಟಿದೆಯೆಂದರೆ ರೋಮಿನಿಂದ ಬರೆದ ಒಂದು ಪತ್ರ ಮಿಲಾನ್ ತಲುಪಲು ಹತ್ತಾರು ವಾರಗಳೇ ಬೇಕಾಗುತ್ತವೆ. ಈ ಅವ್ಯವಸ್ಥೆಯನ್ನು ಸರಿಪಡಿಸಲು ಕೆಲ ಲಾಭಾಸಕ್ತರು ಅಂಚೆಯಾಳುಗಳಾಗಿ ಅಲ್ಲಿ ಕೆಲಸ ಮಾಡುತ್ತಿದ್ದಾರೆ. ಇಟಲಿಯಲ್ಲಿ ಮಧ್ಯಯುಗದಲ್ಲಿದ್ದಂತೆ ಒಂದು ಸ್ವತಂತ್ರ ಅಂಚೆ ವ್ಯವಸ್ಥೆಯನ್ನೇ ಅವರು ಆರಂಭಿಸಿದ್ದಾರೆ.**

**ರೈಲು ಬಸ್ಸುಗಳಲ್ಲಿ ಪುಕ್ಕಟೆ ಪ್ರವಾಸ ಮಾಡುತ್ತ ಸಂಚರಿಸುವ ಇಂಥ ಅಂಚೆಯ ಆಳುಗಳು ಪತ್ರಗಳನ್ನು ಶೀಘ್ರವಾಗಿ ಸರಿಯಾದ ವಿಳಾಸಕ್ಕೆ ತಲುಪಿಸುತ್ತಾರೆ. ಇವರ ಕೆಲಸ ಅಲ್ಲೀಗ ಶ್ಲಾಘನೀಯವೆನಿಸಿದೆ. ಅವರೆಲ್ಲ ನಿವೃತ್ತ ರೇಲ್ವೆ ನೌಕರರು.**

**ಆದರೆ ಇದರಿಂದ ಉದ್ಭವಿಸಿದ ತೊಂದರೆಗಳು ಎರಡು. ಇಂಥ ಅನೇಕ ಆಸಕ್ತರು ಮುಂಬಂದು ಸ್ಪರ್ಧೆ ಏರ್ಪಟ್ಟಿದ್ದು ಒಂದು ತೊಂದರೆಯಾದರೆ ಇಟಲಿಯ ಅಂಚೆ ಇಲಾಖೆ ೧೦೦೦ ಮಿಲಿಯನ್ ಲೈರ್ ವಾರ್ಷಿಕ ನಷ್ಟ ಅನುಭವಿಸುತ್ತಿರುವುದು ಮತ್ತೊಂದು ತೊಂದರೆ.**

ಬರುವಂತಹದೂ ಇರುತ್ತದೆ. ಇದರಲ್ಲಿ ರಕ್ತ-ವಾಹಿನಿಗಳು lymphatics ಹಾಗೂ ಕೂದಲಿನ ಬೇರುಗಳು ಸ್ಪರ್ಶೇಂದ್ರಿಯದ ನರದ ತುದಿಗಳೂ ಸಣ್ಣ ಸ್ನಾಯುಗಳೂ ಇರುತ್ತವೆ.

ಚರ್ಮವು ಎಲ್ಲೆಡೆ ಒಂದೇ ಸಮನಾಗಿ ಇರುವದಿಲ್ಲ. ಅಂಗೈ-ಅಂಗಾಲುಗಳಲ್ಲಿ ಗಟ್ಟಿಯಾಗಿರುತ್ತದೆ. ಪೃಷ್ಠ ಭಾರ ಬೀಳುವಲ್ಲಿ ಉರುಟಾಗಿದ್ದು ದಪ್ಪವಾಗಿರುತ್ತದೆ. ಮೂರು ತಿಂಗಳ ಗರ್ಭಸ್ಥ ಶಿಶುವಿನಲ್ಲೂ ರೋಮ ಉಗುರುಗಳು ಕಾಣಿಸುತ್ತವೆ. ಮಗು ಹುಟ್ಟಿದಾಗ ಚರ್ಮವು ಮೆತ್ತಗಾಗಿರುತ್ತದೆ. ದೊಡ್ಡವರಾದಂತೆ ಅಂಗೈ ಅಂಗಾಲು ದಪ್ಪಗಾಗುತ್ತದೆ. ಪ್ರಾಯ ಬಂದಂತೆ ಎದೆ. ಬಗಲು ಹಾಗೂ ಜನನಾಂಗಗಳ ಹತ್ತಿರವೂ ಕೂದಲು ಬೆಳೆಯುತ್ತದೆ. ಹೆಣ್ಣು ಮಕ್ಕಳಲ್ಲಿ ಎದೆಯ ಮೇಲೆ ಕೂದಲು ಇರುವದಿಲ್ಲ. ಚರ್ಮವು ಹುಬ್ಬುಗಳ ಹತ್ತಿರ ಹೆಚ್ಚು ಕೂದಲಿನಿಂದ ಕೂಡಿ ಒರಟಾಗಿರುತ್ತದೆ. ರೆಪ್ಪೆಗಳ ಹತ್ತಿರ ತೆಳ್ಳಗಿರುತ್ತದೆ. ತುಟಿ ಅಂಗೈ. ಅಂಗಾಲುಗಳ ಮೇಲೆ ಕೂದಲುಗಳು ಇರುವದಿಲ್ಲ. ಕೆಲ ಪ್ರಾಣಿಗಳ ಎದೆ. ಹೊಟ್ಟೆಯ ಮೇಲೆ ಕೂದಲು ಪಸರಿಸಲ್ಪಟ್ಟಿರುತ್ತವೆ. ನೆಲಕ್ಕೆ ಹೊಟ್ಟೆ ಹಚ್ಚಿ ಸರಿಯುವ ಪ್ರಾಣಿಗಳಲ್ಲಿ ಕೂದಲು ಇರುವದಿಲ್ಲ: ಬಸಿರಿ ಇರುವಾಗ ಹೊಟ್ಟೆಯು ದೊಡ್ಡದಾಗುವದರಿಂದ ಚರ್ಮವು ತನ್ನ ಸ್ಥಿತಿಸ್ಥಾಪಕತ್ವವನ್ನು ಕಳೆದುಕೊಳ್ಳುತ್ತದೆ. ಅಂತೆಯೇ ಹೆರಿಗೆಯಾದ ಮೇಲೆ ಹೊಟ್ಟೆಯು ಜೋಳಿಬಿಳಿಯಾಗುತ್ತದೆ.




ಚರ್ಮ

೧ ಸ್ಟ್ರೇಟಂ ಕಾರ್ನಿಯಂ
೨ ಸ್ಟ್ರೇಟಂ ಗ್ರಾನ್ಯುಲೇಸಂ
೩ ಪ್ರಿಕಲ್ ಸೆಲ್
೪ ಮೆಲಾನ್ ಸೈಟ್
೫ ಸ್ವೆಟ್ ಗ್ಲಾಂಡ್
೬ ಸ್ಟ್ರೇಟಂ ಜರ್ಮಿನೇಶನ್

## ಚರ್ಮದ ಕೆಲಸಗಳು

ಚರ್ಮವು ದೇಹವನ್ನು ರಾಸಾಯನಿಕ ಹಾಗೂ ಭೌತಿಕ ಆಘಾತಗಳಿಂದ ರಕ್ಷಿಸುವದಲ್ಲದೇ ಸೂಕ್ಷ್ಮಾಣುಗಳು ಸೇರದಂತೆ ದೇಹಕ್ಕೆ ಕವಚವಾಗುತ್ತದೆ. ಉಗುರುಗಳು (ಪಂಜ) ಕೆಲ ಪ್ರಾಣಿಗಳ ಆಯುಧಗಳಂತೆ ಕೆಲಸ ಮಾಡಿ ಸ್ವಯಂ ರಕ್ಷಣೆಗೆ ಸಹಾಯ ಮಾಡುತ್ತವೆ. ಚರ್ಮದಿಂದ ನಮಗೆ

ತಯಾರಾಗುವುದು ಚರ್ಮದಲ್ಲಿಯೇ. ತೇವ ಮತ್ತು ಹಸಿಯಿರುವಲ್ಲಿ (ಕಪ್ಪೆಗಳಲ್ಲಿ) ಚರ್ಮ ಉಸಿರಾಟಕ್ಕೂ ಸಹಕರಿಸುತ್ತದೆ. ಸೂರ್ಯನ ultraviolet ಕಿರಣಗಳಿಂದ ಕೂಡ ರಕ್ಷಿಸುತ್ತದೆ. ರಕ್ತದ ಒತ್ತಡವನ್ನು ನಿಯಂತ್ರಿಸುವಲ್ಲಿಯೂ ದೇಹದ ಉಷ್ಣತೆಯನ್ನು ಕಾಪಾಡುವಲ್ಲಿಯೂ ದೇಹಕ್ಕೆ ಬೇಕಾಗುವ ನೀರಿನ ಪ್ರಮಾಣದ ಸಮತೋಲ ಕಾಯ್ದುಕೊಳ್ಳುವಲ್ಲಿಯೂ ಚರ್ಮದ ಪಾತ್ರ ಮುಖ್ಯ. ಅಲ್ಲದೆ ಸ್ನಿಗ್ಧ, ನೀರು. ಲವಣ ಹಾಗೂ ಸಕ್ಕರೆಗಳನ್ನು ಚರ್ಮ ಸಂಗ್ರಹಿಸುತ್ತದೆ. ಹೊರಗಿನ ಹವೆಯು ತಂಪಾಗಿರುವಾಗ ಚರ್ಮದಲ್ಲಿಯ ರಕ್ತನಾಳ

ಯನ್ನು ಹೊರಗೆ ಹೋಗಗೊಡುವದಿಲ್ಲ. ಇದಕ್ಕೆ ಕೂದಲು ಹಾಗು ಚರ್ಮದ ಅಡಿಯಲ್ಲಿರುವ ಬೊಜ್ಜುಗಳು ಉಷ್ಣತೆಯ ಅವಾಹಕಗಳಾದ್ದರಿಂದ ಸಹಾಯ ಮಾಡುತ್ತವೆ. ಆದರೆ ಬೇಸಿಗೆಯಲ್ಲಿ ರಕ್ತನಾಳಗಳು ಹಿಗ್ಗಿ ಹೆಚ್ಚು ಬೆವರು ಬಂದು ದೇಹವು ತಂಪಾಗುತ್ತದೆ.

ವಯಸ್ಸಾದಂತೆ ಚರ್ಮ ಸುಕ್ಕುಗಟ್ಟುತ್ತದೆ. ಇದಕ್ಕೆ ಕೆಲವುಮಟ್ಟಿಗೆ ರಸದೂತಗಳೂ ಕಾರಣವಾಗುತ್ತವೆ. ಚರ್ಮವು ನಯವಾಗಿದ್ದು ಬಹಳ ಹೊಳಪಾಗಿರಬೇಕೆಂದು ಎಲ್ಲರ ಅಪೇಕ್ಷೆ. ಏಕೆಂದರೆ ಅದು ಕಾಮಪ್ರಚೋದಕವೂ ಹೌದು. ಅಂತೆಯೇ ಅನಾದಿಕಾಲದಿಂದಲೂ ಚರ್ಮವನ್ನು ಚೆನ್ನಾಗಿಡಲು ಬೇರೆ ಬೇರೆ ಸಾಧನಗಳು ಬಂದಿವೆ. ರಾಣಿ ಕ್ಲಿಯೋಪಾತ್ರಾ ಕತ್ತೆಯ ಹಾಲನ್ನು ಲೇಪಿಸಿಕೊಂಡು ಸ್ನಾನಮಾಡುತ್ತಿದ್ದಳಂತೆ. ನಮ್ಮಲ್ಲಿ ಸುಗಂಧ ದ್ರವ್ಯ ಪೂಸಿಕೊಂಡು ಸ್ನಾನಮಾಡುತ್ತಿದ್ದರಂತೆ ನಮ್ಮ ರಾಜ ಮಹಾರಾಜರು. ಜಪಾನೀಯರ ಪ್ರಕಾರ ಸೌಂದರ್ಯವು ನಿಸರ್ಗ ಸಹಜವಾಗಿರಬೇಕು. ಅದಕ್ಕಾಗಿ ಸೌಂದರ್ಯ ಪ್ರಸಾಧನಗಳು ಅನಗತ್ಯ.



"ಹಲೋ ಹಲೋ ವರದಿಗಾರರೇ...ನಮ್ಮವರು ನಮ್ಮ ಸರ್ಕಾರವನ್ನು ಭದ್ರವೂ...ಸ್ಥಿರವೂ ಮಾಡಿದ್ದಾರೆ...ಕೂಡಲೇ ಬನ್ನಿ..."

ಚರ್ಮದಲ್ಲಿ **Apocrine** ಹಾಗೂ **Ecrine** ಎಂಬ ಗ್ರಂಥಿಗಳಿರುತ್ತವೆ. **Apocrine** ಗ್ರಂಥಿಯು ಮೂಲದಲ್ಲಿ ಅಂದರೆ ವಿಕಾಸವಾಗುವಾಗ ವಾಸನೆ ಗ್ರಂಥಿಯಾಗಿತ್ತು. ಈಗಲೂ ಅದು ಕೆಳವರ್ಗದ ಪ್ರಾಣಿಗಳಲ್ಲಿ ವಿಶಿಷ್ಟ ವಾಸನೆಯಿಂದ ಕಾಮಪ್ರಚೋದನೆ ಮಾಡುತ್ತದೆ. ಆದರೆ ಈಗ ಮನುಷ್ಯರಲ್ಲಿ ವಾಸನಾರಹಿತ ದ್ರವವನ್ನು ಬಿಡುತ್ತದೆ. ಆದರೆ ಈ ರಸವು ಚರ್ಮದ ಮೇಲಿರುವ ಬ್ಯಾಕ್ಟೀರಿಯಾಗಳಿಂದ ದುರ್ವಾಸನೆಯಾಗಿ ಮಾರ್ಪಡುತ್ತದೆ. ಈ ಗ್ರಂಥಿಯು ಬಗಲುಗಳಲ್ಲಿ ಹೆಚ್ಚಾಗಿರುತ್ತದೆ.

**Ecrine** ಗ್ರಂಥಿಯು ಬೆವರನ್ನು ಸುರಿಸಿ ದೇಹವನ್ನು ತಂಪಾಗಿಡಲು ಸಹಾಯ ಮಾಡುತ್ತದೆ. ಘರ್ಷಣೆಯ ಜಾಗಗಳಾದ ತೊಡೆ ಅಂಗೈ ಅಂಗಾಲು ಬಗಲು ಮುಂತಾದವುಗಳನ್ನು ಅದು ಹಸಿಯಾಗಿಡುತ್ತದೆ.

ಅಲ್ಲದೆ ಇನ್ನೊಂದು ಸಮೂನೆಯ ಗ್ರಂಥಿ ಇದೆ. ಈ ಗ್ರಂಥಿಯು **Sebum**ನ್ನು ಸುರಿಸುತ್ತದೆ. ಇದರಲ್ಲಿ **Cholesteral, Fattyacids, Triglyceride**ಗಳು ಇರುತ್ತವೆ. ಈ ಗ್ರಂಥಿಗಳು ಗಲ್ಲ ಮೂಗು ತುಟಿ ರೆಪ್ಪೆಗಳ ಹತ್ತಿರ ಹೆಚ್ಚಾಗಿರುತ್ತವೆ. ಇವುಗಳೇ ಮೊಡವೆಗಳಿಗೆ ಕಾರಣ. ಇವುಗಳಿಂದ ಏನು ಪ್ರಯೋಜನ ಎಂದು ಸರಿಯಾಗಿ ಅರ್ಥವಾಗದಿದ್ದರೂ ಸಂಜುಪಣೆಗೆ ಇರಬಹುದೆಂದಿದೆ.

ಮೊಲೆ ಹಾಲೂ ರೂಪಾಂತರಿಸಲ್ಪಟ್ಟ Apocrine ಗ್ರಂಥಿಯು ಕಿವಿಯಲ್ಲಿ ಮೇಣದಂತಿರುವ ಕೂಗಿನ ಕೂಡ ಅದೇ ಗ್ರಂಥಿಯ ರೂಪಾಂತರ ಕಿವಿಯಲ್ಲಿ ಕ್ರಿಮಿಕೀಟಗಳು ಸೇರಿದಂತೆ ತಡೆಯುತ್ತದೆ.

ಕೂದಲು ಮನುಷ್ಯರಲ್ಲಿ ಹೆಚ್ಚು ಕಡಿಮೆ ಸೌಂದರ್ಯದ ಸಾಧನವಾಗಿದೆ ಎನ್ನಲು ಅಡ್ಡಿ

ಯಿಲ್ಲ. ಹೆಂಗಸರಂತೂ ಅದನ್ನು ಎತ್ತಿ ವಿವಿಧ ಆಕಾರಗಳಲ್ಲಿ ಕಟ್ಟಿ ಸೌಂದರ್ಯವನ್ನು ಹೆಚ್ಚಿಸುತ್ತಾರೆ. ಉದ್ದಕೂದಲನ್ನು ಕಂಡು ಕರಗುವ ಹೆಣ್ಣುಮಕ್ಕಳಿಗೇನೂ ಕೊರತೆಯಿಲ್ಲ. ವಯಸ್ಸಾದಂತೆ ಕೂದಲು ಉದುರುತ್ತವೆ. ಚಿಂತೆ ಅಶಕ್ತತೆಯಿಂದಲೂ ಉದುರುತ್ತವೆ. ಕೆಲವು ತರಹದ ಗುಳಿಗೆಗಳ ಸೇವನೆಯಿಂದಲೂ ಕೂದಲು ಬೆಳೆಯುತ್ತವೆ. ನೆಲದ ಮೇಲೆ ನಡೆದಾಡುವ ಪ್ರಾಣಿಗಳಲ್ಲಿ (ಕೇಶವರ್ಗದ) ಕೂದಲುಗಳು ದಟ್ಟವಾಗಿ ಬೆಳೆದು ದೇಹದ ಉಷ್ಣತೆಯನ್ನು ಕಾಪಾಡುತ್ತವೆಯಾದರೆ, ಜಲಚರಗಳಲ್ಲಿ ಚರ್ಮವೇ ದಪ್ಪವಾಗಿದ್ದು ದೇಹದ ಉಷ್ಣತೆಯನ್ನು ಕಾಯುತ್ತದೆ. ಮನುಷ್ಯರಲ್ಲಿ ಮೂಗು ಕಿವಿಗಳಲ್ಲಿ ಕೂದಲು ಹವೆಯನ್ನೂ ಸೋಸಿಬಿಡುವುದಲ್ಲದೇ ಕ್ರಿಮಿಕೀಟಗಳು ಒಳಸೇರದಂತೆ ನೋಡಿಕೊಂಡರೆ, ಹುಬ್ಬು ರೆಪ್ಪೆಗಳ ಮೇಲಿನ ಕೂದಲುಗಳು ಧೂಳ ಒಳಸೇರದಂತೆ ತಡೆಯುತ್ತವೆ. ನಿಶಾಚರ ಪ್ರಾಣಿಗಳಲ್ಲಿ ಮೀಸೆಗಳು ಚೆನ್ನಾಗಿ ಬೆಳೆದಿರುತ್ತವೆ. ಇವು ಮೀಸೆಗಳನ್ನು ಹಿಂದು-ಮುಂದು ಮಾಡಿ ಸುತ್ತಲಿನ ವಾತಾವರಣದ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದಲ್ಲದೇ ಕೆಲವು ಸಲ ಬೇರೆ ಪ್ರಾಣಿಗೆ ಮೀಸೆಯಿಂದಲೇ ಸಂದೇಶ ಕೊಡುತ್ತವೆಯೆಂದು ಪ್ರಾಣಿಶಾಸ್ತ್ರಜ್ಞರ ಅಭಿಪ್ರಾಯ. ತಲೆಯ ಕೂದಲುಗಳು ತಲೆಯನ್ನು ರಕ್ಷಿಸುತ್ತವೆ. ಪ್ರಾಣಿಗಳಲ್ಲಿ ಕೂದಲು ಒಂದು ಋತುವಿನಲ್ಲಿ ಉದುರಿ ಮತ್ತೆ ಪೂರ್ತಿ ಬರುತ್ತವೆ. ಈ ತರಹ ಮನುಷ್ಯನಲ್ಲಿ ಆಗುವುದಿಲ್ಲ. ಕೂದಲಿನಲ್ಲಿ ಕಣದ ಪ್ರಮಾಣ ಹೆಚ್ಚಿಗಿದ್ದರೆ ಬಣ್ಣ ಕಪ್ಪಾಗಿಯೂ ಕಡಿಮೆಯಿದ್ದರೆ ತಿಳಿಯಾಗಿಯೂ ಕಾಣುತ್ತವೆ. ತಲೆಯ ಕೂದಲು ಪೂರ್ತಿ ಉದುರಿ ಬೋಳುತಲೆ ಆಗಬಹುದು. ಆದರೆ ಇದು ಹೆಂಗಸರಲ್ಲಿ ಕಡಿಮೆ ಇದಕ್ಕೆ ಕಾರಣ ಗಂಡಸಿನ ಧಾತು ಎನ್ನುತ್ತಾರೆ. ಹೆಂಗಸರಲ್ಲಿ ಕೇಶಾಲಂಕಾರ ಜನ್ಮಸಿದ್ಧವಾದ ಹಕ್ಕಾದರೆ ಗಂಡಸರಲ್ಲಿ ಮೀಸೆ ಗಡ್ಡಗಳು ಪೌರುಷದ ಸಂಕೇತಗಳು.

ನೀಳ್ಗೂದಲು ಎಂಥವರನ್ನೂ ಆಕರ್ಷಿಸುತ್ತದೆ. ಅಂತೆಯೇ 'ಸುಕೇಶಿನಿ'ಯಂಥ ಕತೆಗಳೂ ಹುಟ್ಟಿವೆ. ✡



**ನ್ಯೂ ಗಿನಿಯ ಒಂದು ಗ್ರಾಮದಲ್ಲಿ ಮಾತ್ರ ವಾಸಿಸುವ ಇವಾಮ ಬುಡಕಟ್ಟು ಜನಾಂಗದ ಪುರುಷರು ತಮ್ಮ ಹೆಂಡಂದಿರು ಮತ್ತು ಅತ್ತೆಯರ ಆಜ್ಞಾನುಸಾರ ವರ್ತಿಸುತ್ತಾರೆ. ಅವರು ಹೇಳಿದ ಪ್ರತಿ ಕೆಲಸವನ್ನೂ ಆಸ್ಥೆಯಿಂದ ಮಾಡಿ ಮುಗಿಸುತ್ತಾರೆ.**

**ಆದರೆ ಅವರೇನೂ ಅಮ್ಮಾವ್ರ ಗಂಡಂದಿರಲ್ಲ. ಆ ಬುಡಕಟ್ಟಿನ ಹೆಂಗಸರು ಪುರುಷರ ಮೇಲೆ ನಡೆಸುವ ಸಂಗುಮಾ ಎಂಬ ಮಾಟವೇ ಇದಕ್ಕೆ ಕಾರಣ**

**ಅಳಿಯ ಸಂತಾನದ ರೀತಿಯಲ್ಲಿ ಇಲ್ಲಿ ಮದುವೆಯಾದ ಪುರುಷ ಹೆಂಡತಿಯೊಂದಿಗೆ ಅತ್ತೆಯ ಮನೆಯಲ್ಲೆ ಇರಬೇಕಾಗುತ್ತದೆ. ಮದುವೆಯಾದ ಕೆಲ ದಿನಗಳಲ್ಲಿ ಅತ್ತೆ ಅಳಿಯನ ತಲೆಗೆ ಬಲವಾದ ಏಟು ಕೊಟ್ಟು ಮೂರ್ಛೆ ಹೋಗುವಂತೆ ಮಾಡುತ್ತಾಳೆ. ನಂತರ ಆತ ಎಚ್ಚರಗೊಳ್ಳುವ ಮುನ್ನ ಆತನ ದೇಹದಲ್ಲಿ ಮುಳ್ಳು ಇಲ್ಲವೇ ಮೂಳೆಯ ತುಂಡುಗಳನ್ನು ಸೇರಿಸುವಾಗ ಕೂಡ ಆತನಿಗೆ ಗಾಯಗಳಾಗದಂತೆ ಎಚ್ಚರ ವಹಿಸುತ್ತಾರೆ. ಆತ ಎಚ್ಚರಗೊಂಡಾಗ ಏನಾಗಿದೆ ಎಂಬುದು ಗೊತ್ತಾಗುವುದೇ ಇಲ್ಲ. ಕೆಲ ದಿನಗಳಲ್ಲಿ ಆತ ಅಜ್ಞಾನುಸಾರ ವರ್ತಿಸಲಾರಂಭಿಸಿಬಿಡುತ್ತಾನೆ. ದೇಹದೊಳಗೆ ಸೇರಿಕೊಂಡ ಮುಳ್ಳು ಇಲ್ಲವೆ ಮೂಳೆಯ ತುಂಡಿಗೆ ಒಂದು ರೀತಿಯ ವಿಷ ಲೇಪಿಸಿರುವುದರಿಂದ ಆತ ನವೆನವೆದು ಸತ್ತು ಹೋಗುತ್ತಾನೆ.**

"ಹೌದು, ಇದು........ಕನಸಲ್ಲ,........ಭ್ರಾಂತಿಯಲ್ಲ........ ಮರೀಚಿಕೆಯಲ್ಲ........ಇವರೊಡನೆ ಸಾಲ್ಕನೆಯ ಹೆಜ್ಜೆ ಇಡುತ್ತೇನೆ... ...."



ಕಲ್ಯಾಣಮಂದಿರದಲ್ಲಿ ಮಂಗಳ ವಾದ್ಯ ಮೊಳಗುತ್ತಿದೆ. ಇನ್ನೊಂದೆಡೆ ಕಹಳೆ ಬಾರಿಸುತ್ತಿದೆ. ಡೋಲಿನ ಹೊಡೆತಕ್ಕಿಂತ ನನ್ನ ಎದೆಯ ಬಡಿತ ಜೋರಾಗಿ ಕೇಳಿಸುತ್ತಿರುವಂತಿದೆ, ನನಗೆ.

ಮೂರ್ಖತನ!... ಹುಚ್ಚುತನದಲ್ಲಿ ಆಗಿಹೋಯಿತು. ಹುಚ್ಚಿ ಹುಚ್ಚಿ ಹುಚ್ಚಿ !

ನಾನು ಮಾಡಿದುದು, ಅಥವಾ ಅನಂತರ ಮಾಡದಿದ್ದುದು, ಸರಿಯಾಯಿತೆ ? ತಪ್ಪಾಗುತ್ತದೆಯೋ? ಅನಾಹುತವನ್ನು ತಂದುಬಿಟ್ಟರೋ? ಹಾಗೆಂದು ಅವನು ಕೇಳಿದ್ದ ಆ ಬೆಲೆಯನ್ನು ಕೊಡಬಲ್ಲವಳಾಗಿದ್ದೆನೆ? ಇಲ್ಲ, ಸಾಧ್ಯವೇ ಇರಲಿಲ್ಲ. ಗಂಡಾಂತರ ಒದಗಿದರೆ ಪಾರಾದೇನೇ?... ಹೇಗೆ?

ಅಯ್ಯೋ, ಏನಾಗುತ್ತದೆಯೋ ಇನ್ನೂ. ಕಾಣೆನಲ್ಲ! ದೇವರೆ ನೀನೇ ಗತಿಯಪ್ಪಾ, ನೋಡಿಕೊ ಹಾಗಾಗದಂತೆ. ಅಷ್ಟು ದಯೆ ಮಾಡಿ ತೋರಪ್ಪಾ!

ಇಷ್ಟು ವಿಸ್ತಾರವಾದ ಬೆಳಕಾದ ಕಲ್ಯಾಣ ಮಂದಿರ. ನನ್ನ ಚಿಕ್ಕ ಎದೆಯಲ್ಲಿ ಮಹಾಂಧಕಾರ. ಸುತ್ತಲೂ ನೂರಾರು ನೆಂಟರು ಇಷ್ಟರು ಕಿಕ್ಕಿರಿದು ತುಂಬಿದ್ದಾರೆ. ಪಕ್ಕದಲ್ಲಿ ಇವರೇ ಇದ್ದಾರೆ. ಹಿಂದೆಯೇ ಅಪ್ಪ ಅಮ್ಮ ತಮ್ಮ ತಂಗಿ ಬಳಗವೆಲ್ಲ. ಎದುರಿನಲ್ಲಿ ಮಾವ ಅತ್ತೆ, ನಾಳೆಯ ತಾಯಿ ತಂದೆ. ನನ್ನವರ ನನ್ನವರೂ ಆಗಲಿರುವ ಬಂಧುವರ್ಗದ ಮಹಾಪೂರ. ಇಷ್ಟು ತುಂಬಿದಲ್ಲೂ ನನ್ನ ಎದೆ ಬರಿದು; ನಾನು ಏಕಾಕಿನಿ ಕೇವಲ ಏಕಾಕಿನಿ.

ಈ ಇಷ್ಟೊಂದು ವಿವಾಹ ಸಂಭ್ರಮದ ಮಧ್ಯದಲ್ಲೂ ನಾನು ಶೂನ್ಯ ಭಯ ಸ್ಮಶಾನದಲ್ಲಿದ್ದೇನೆ.

ಹಸೆಯ ಮುಂದಿನ ಈ ಪವಿತ್ರ ಹೋಮಾಗ್ನಿ, ನಾನೇ — ಇವರೂ ಪಾಪ! — ಅರಳು ತುಪ್ಪ ಸುರಿದು ಮೇಲೆಬ್ಬಿಸಿ ಬೆಳಗಿಸಿದ ಅಗ್ನಿ ನನ್ನನ್ನೂ ಇವರನ್ನೂ ಸಾಕ್ಷ್ಯದಿಂದ ಬೆಸೆಯುವ ಅಗ್ನಿಪುರುಷ ನನ್ನಲ್ಲಿ ಚಿಂತಾ, ಚಿತಾಗ್ನಿಯಾಗಿ ಧಗಿಧಗಿಸುತ್ತ ಉರಿಯುತ್ತಿದ್ದಾನೆ, ಉರಿಸುತ್ತಿದ್ದಾನೆ, ಮುಂದೆ ಇವರ ಕೋಪಾಗ್ನಿಯೂ ಆಗಿ ನನ್ನನ್ನು ಪೂರ್ಣಾಹುತಿ ತೆಗೆದುಕೊಂಡಾನೋ ?...

ಈ ಬಾಹ್ಯಾಂತರಾಗ್ನಿಗಳು ಸುಡುತ್ತಿದ್ದರೂ ಒಳಗಡೆಯೇ ಭಯ ಚಳಿಯಿಂದ ನಡುಗುತ್ತಲೂ ಇದ್ದೇನೆ. ಹಸೆಯ ಮೇಲೆ ಕುಳಿತೇ ಆದಷ್ಟು ಕಣ್ಣು ಮೇಲೆತ್ತಿ ಕೊರಳನ್ನು ತಿರುಗಿಸಿ ಮತ್ತೊಮ್ಮೆ ಅತ್ತಿತ್ತ ಸುತ್ತಲೂ ಸಭಾಜನರ ಮೇಲೆ ಕಣ್ಣ ನೋಟವನ್ನು ಹರಿಸುತ್ತೇನೆ. ಬಾಗಿಲ ಕಡೆಗೂ ನೋಡುತ್ತೇನೆ.

ಅವನು ಬಂದಿಲ್ಲ. ಬಂದಿಲ್ಲ! ಬಾರದೆಯೇ ಇರಲಿ ದೇವರೆ! ಈ ಮದುವೆಯಾದರೂ ನಿರ್ವಿಘ್ನವಾಗಿ ನಡೆದು ಹೋಗಲಿ. ಆ ಮೇಲೆ ನೋಡಿಕೊಳ್ಳೋಣ ... ಸದ್ಯದ ಆಪತ್ತು, ಬೀಸುವ ದೊಣ್ಣೆ ತಪ್ಪಿದರೆ ನೂರು ವರ್ಷ ಆಯುಸ್ಸು. ಮದುವೆಯಾಗಿ ನಾವಿಬ್ಬರೂ ಆ ದೂರ ದೂರಕ್ಕೆ ಹೋಗಿಬಿಟ್ಟರೆ ಅಪಾಯವೂ ದೂರ ದೂರ, ಅಪಾರ ದೂರವಾಗಿಬಿಟ್ಟೀತು. ಹಾಗೂ ಅದು ಬೆನ್ನಟ್ಟಿ ಬಂದರೂ ಆಗ ನಾವಿಬ್ಬರೇ ಇರುತ್ತೇವೆ. ಆ ರೀತಿ ಬೇರೆಯಾದೀತು. ಸಹಿಸಲು ಸಾಧ್ಯವಾದರೂ ಆಗಬಹುದು. ನನ್ನ ಪಾಲಿಗೆ ಬಂದದ್ದನ್ನು ಅನುಭವಿಸಬಹುದು. ಒಬ್ಬಳೇ ಬೇಕಾದದ್ದನ್ನು ಮಾಡಿಕೊಳ್ಳಬುಹುದು.

ಆದರೆ ಒಂದು ವೇಳೆ — ಒಂದು ವೇಳೆ...ಅವನು ಈಗಲೇ ಇನ್ನೂ ಇಲ್ಲಿಗೆ ಬಂದುಬಿಟ್ಟರೆ!... ಬೆದರಿಕೆ ಹಾಕಿದ್ದಾನಲ್ಲ...ಹೂಂ, ಬಂದೇಬಿಟ್ಟರೆ! ಬಂದೇ ಬರುತ್ತಾನೆ, ಅವನೇ ಬಿಡುವವನು? ...ಅಬ್ಬಬ್ಬ!... ಬಹಿರಂಗಪಡಿಸಿಬಿಟ್ಟರೆ ! ಆ? ಆಗ? ಆಗ? ಅಯ್ಯೋ!

ಥಳಕು ಹೊಡೆದ ಇಷ್ಟೊಂದು ಜನರ ತಿರಸ್ಕಾರದ ಮುಂದೆ, ಮೋಸ ಹೋದ ಇವರ ಮುಂದೆ, ಇತರ ತಂದೆ ತಾಯಿ ಬಂಧು ಬಳಗ ಏನೂ ಅರಿಯದ ಅಪ್ಪ ಅಮ್ಮ – ಪಾಪ!–ಇವರ ಮುಂದೆಲ್ಲ – ಏನಾಗಿಬಿಡುತ್ತದೆಯೋ ಏನಾಗಿಬಿಡುತ್ತದೆಯೋ ಕಾಣೆನಲ್ಲ, ಕಾಣೆನಲ್ಲ. ಏನು ಮಾಡಲಿ? ಈಗೇನು ಮಾಡಲಿ? ಏನು ಸಾಧ್ಯ? ಕಾಲ ಮೀರಿಹೋಯಿತಲ್ಲವೆ? ಹೋಯಿತೆ? ನಿಜವಾಗಿ ಮೀರಿಹೋಗಿದೆಯೆ? ಇನ್ನೂ ಮದುವೆ ಮುಗಿದಿಲ್ಲ. ಸಪ್ತಪದಿಯಾಗದೆ ಮುಗಿಯುವುದಿಲ್ಲವಂತಲ್ಲ. ಕಾನೂನಿನ ಪ್ರಕಾರ. ಆದರೆ ಹೇಗೆ, ಹೇಗಪ್ಪಾ ಮಾಡುವುದು ಧೈರ್ಯ. ಧೈರ್ಯವೆಲ್ಲಪ್ಪಾ! ಎಂಥ ಇಕ್ಕಟ್ಟು! ನಾನೇ ತಂದುಕೊಂಡಿರುವ ಇಕ್ಕಟ್ಟು ಸ್ವಂತ ಕೈ ಚಿತ್ರಹಿಂಸೆ, ಚಿತ್ರಹಿಂಸೆ. ಎಷ್ಟು ಅನುಭವಿಸುತ್ತಿದ್ದೇನೆ. ಎಷ್ಟು ಎಷ್ಟೊಂದು ! ನಿವಾರಣೆ ಉಂಟೆ? ಹೇಗೆ? ಇಲ್ಲ ಇಲ್ಲ. ಬೇರೆ ದಾರಿಯಿಲ್ಲ, ಬೇರೆ ದಾರಿಯೇ ಇಲ್ಲ, ಈಗ ಅನುಭವಿಸಿಯೇ ತೀರಬೇಕು-ತೀರಬೇಕಲ್ಲಾ.

ಛೆ, ಎಂಥ ಗಂಡಾಂತರವನ್ನು ತಂದುಕೊಂಡೆ ನಾನಾಗಿಯೇ! ಎಂಥ ತಪ್ಪನ್ನು ಮಾಡಿಬಿಟ್ಟೆ! ವಿಷಯ ಇಷ್ಟು ದೂರ, ಇಲ್ಲಿಯವರೆಗೂ ಬರುವದಕ್ಕೆ ಅವಕಾಶ ಕೊಡಬಾರದಿತ್ತು. ಹಿಂದಿನ ಅಷ್ಟು ಹಂತಗಳಲ್ಲಿ ಯಾವುದಾದರೊಂದರಲ್ಲಿ ಇದನ್ನು ತಡೆದುಬಿಡಬೇಕಾಗಿತ್ತು. ಹೌದು, ಅದೇ ಪ್ರಾಮಾಣಿಕ ದಾರಿಯಾಗಿರುತ್ತಿತ್ತು. ಕ್ಷೇಮದ ದಾರಿಯೂ ಆಗಿರುತ್ತಿತ್ತು. ಇಷ್ಟು ಅಪಮಾನದ ದಾರಿ ಅನಾಹುತದ ದಾರಿಯಂತೂ ಆಗುತ್ತಿರಲಿಲ್ಲ. ಏನು ಕೆಲಸ ಮಾಡಿಬಿಟ್ಟೆ!

ತಿಳಿದೂ ತಿಳಿದೂ ಮದುವೆ ಮಾಡಿಕೊಳ್ಳುವುದಕ್ಕೇ ಒಪ್ಪಿಕೊಳ್ಳಬಾರದಿತ್ತು. ಹೌದು ಒಪ್ಪಿಕೊಳ್ಳಲೇಬಾರದಾಗಿತ್ತು. ಆದರೆ ಅಪ್ಪ ಅಮ್ಮನ ಒತ್ತಾಯವೋ, ಅವರು ಕೊಡುತ್ತಿದ್ದ ಕಾರಣಗಳೋ. ನಿಜ, ಆ ಒತ್ತಾಯವೂ ಸಹಜ. ಕಾರಣಗಳೂ ಸರಿಯಾದುವೆ. ಇಲ್ಲ ಎನ್ನುವಂತಿಲ್ಲ. ಸಾಮಾನ್ಯ ಸಂದರ್ಭದಲ್ಲಿ ಆ ಕಾರಣಗಳು ಒತ್ತಾಯ ಯಾವುವೂ ಬೇಕಾಗುತ್ತಿರಲಿಲ್ಲ. ಹೇಳಿದೊಡನೆ ಒಪ್ಪಿಕೊಂಡುಬಿಡುತ್ತಿದ್ದೆ. ಆದರೆ ನನ್ನ ವಿಶೇಷ ಸಂದರ್ಭದಲ್ಲಿ ಹೀಗೆ ಮಾಡಬಾರದಾಗಿತ್ತು. ಅವರಿಗೆ ಸೂಚನೆ ಕೊಟ್ಟುಬಿಡಬೇಕಾಗಿತ್ತು. ಆಗ ಅವರು ಅರಿತುಕೊಂಡು ಬಲವಂತಪಡಿಸುತ್ತಿರಲಿಲ್ಲ ವೇನೋ. ಹೇಗೆ ಹೇಳುವುದು, ನಾನು, ಏನಾದರೂ ಅವರು ತಂದೆ ತಾಯಿಗಳು. ಏನು ಮಾಡುತ್ತಿದ್ದರೋ ಯಾರಿಗೆ ಗೊತ್ತು. ಆದರೆ ನನಗೆ ಆ ಧೈರ್ಯ ಸೂಚನೆ ಕೊಡುವಷ್ಟು ಧೈರ್ಯವೆಲ್ಲಿ? ಹಾಗೂ ಅವರು ಕುಸಿದು ಕುಗ್ಗಿ ಆ ಕೊರಗಿನಿಂದ ಏನಾಗಿ ಬಿಡುತ್ತಿದ್ದರೋ, ಪಾಪ ನನಗಾಗಿ! ಅದನ್ನು ಎದುರಿಸಬಲ್ಲವಳಾಗಿದ್ದನೆ – ಒಂದು ಪಕ್ಷ, ಒಂದು ಪಕ್ಷ ನನ್ನ ಬಗ್ಗೆ ಕೆಟ್ಟ ಧೈರ್ಯಮಾಡಬಲ್ಲವಳಾಗಿದ್ದನೆಂದರೂ...ಅಷ್ಟೇಯೆ? ಅಲ್ಲ. ಅಲ್ಲ. ನನಗೆ ಆಸೆಯೂ ಇದ್ದಿತಲ್ಲ, ಹೆಣ್ಣಿಗೆ ಸಹಜ ಹಾಪದ್ದು. ಮದುವೆ ಗಂಡ ಸಂಸಾರ ಮಕ್ಕಳು ಇತ್ಯಾದಿ ಇತ್ಯಾದಿ ಇತ್ಯಾದಿ ಏನೇನೇನೋ. ಹತ್ತಾರು ವರ್ಷ ಕಂಡ ಕೊನೆಯಿಲ್ಲದ ಹೆಂಗಸ ಸಾಗಸು. ಸೊಂಗಸುಗಳು! ನಾನೊಬ್ಬಳು ಮಹಾ ಮಹಾ ಆಸೆಬುರುಕ. ಅತಿಯಾಸೆ ಗತಿಕೇಡೇ ಆಗುತ್ತಿದೆಯೋ...ಹಾಗೂ ಆ ಆಶಾಕಿರಣವೊಂದೂ ಇತ್ತಲ್ಲ – ಈ ಈಗ ಬಂದೀತೆಂದು ಹೆದರಿಕೊಳ್ಳುತ್ತಿರುವ ವಿಪತ್ತು ಬರದೆಯೇ ಇರಬಹುದೆಂಬುದು, ಅವನು ತೊಂದರೆ ಕೊಡದಿರಬಹುದೆಂಬುದು. ಹಾಗೇ ಅವನು ಬಂದೂ ಇಲ್ಲವಲ್ಲ, ಇನ್ನೂ... ಆದರೆ... ಆದರೆ... ಇನ್ನೂ... ಇನ್ನೂ ಬರಬಹುದಲ್ಲ! ಬಂದರೂ ಸುಮ್ಮನಿರಬಹುದಲ್ಲ...ಹೂಂ...ಸುಮ್ಮನಿರದೆಯೂ ಇರಬಹುದಲ್ಲ! ಆಗ? ಆಗ?...ಆ ಯೋಚನೆಯಿಂದ ಬೆಚ್ಚುತ್ತೇನೆ...ಆಗ ನನ್ನ ಪಾಡು ಹೇಗೂ ನಾಯಿಪಾಡು, ಬಾಯಿಪಾಡು. ಬೀದಿಪಾಡು, ಇರಲಿ ಅಪ್ಪ ಅಮ್ಮನಿಂದ ಮುಚ್ಚಿಟ್ಟು ಮಾಡಿ ಏನಾಯಿತು? ಈ ಸನ್ನಿವೇಶದಲ್ಲಂತೂ ಅವರು ಕುಸಿಯುವುದಿರಲಿ, ಕೊರಗುವುದಿರಲಿ, ಎದೆಯೊಡೆದೇ

ಹೋಗಿಬಿಟ್ಟಾರು!... ಅಯ್ಯೋ, ಏನನ್ಯಾಯ! ಎಲ್ಲಿಗೆ ತಂದುಬಿಟ್ಟೆ, ಈ ದುರಂತ ಪ್ರಕರಣವನ್ನು!

ಹೋಗಲಿ, ಇವರ ನನ್ನ ವಿವಾಹ ವೀಕ್ಷಣ ಭೇಟಿಯಾದ ಮೇಲಾದರೂ ಏನಾದರೂ ಕುಂಟು ಕಾರಣ ಕೊಟ್ಟು ಮದುವೆಯನ್ನು ತಪ್ಪಿಸಿಕೊಳ್ಳಬಹುದಾಗಿತ್ತಲ್ಲ?... ಏನೂ? ತಪ್ಪಿಸಿಕೊಳ್ಳುವುದೆ! ಪ್ಚ್, ಈ ಗಂಭೀರ ಪ್ರಕೃತಿಯ ದೃಢಾಂಗ ಚೆಲುವರು ಆ ಪ್ರಥಮ ವೀಕ್ಷಣದಿಂದಲೇ ನನ್ನ ಮನಸ್ಸನ್ನು ಸೂರೆಗೊಂಡುಬಿಟ್ಟಿದ್ದರು. ಆ ಕ್ಷಣದಲ್ಲಿಯೇ ಅತ್ಯುತ್ಸಾಹ ಸಂಭ್ರಮದಲ್ಲಿ ತೇಲಿ ಹೋಗಿ ಇವರನ್ನು ಹೇಗಾದರೂ ಏನಾದರೂ ಮದುವೆ ಮಾಡಿಕೊಳ್ಳಬೇಕೆಂದು ನಿರ್ಲಜ್ಜೆಯಿಂದ ನಿರ್ಧರಿಸಿಬಿಟ್ಟಿದ್ದೆ, ನನ್ನ ಬಗ್ಗೆ ಬಂದಿದ್ದ ಅನುಮಾನ ಭಯಗಳನ್ನೆಲ್ಲ ಮೂಲೆಗೆ ಮನಸ್ಸಿನ ಮೂಲೆಗೆ ಗುಡಿಸಿ ಒತ್ತರಿಸಿ. ಹಾಗಿದ್ದರು, ಇದ್ದಾರೆ ಇವರು! ಇವರನ್ನು ಒಲ್ಲೆನೆಂದಿದ್ದರೆ ಎಲ್ಲರೂ ನನ್ನನ್ನು ಹುಚ್ಚಿಯೆಂದೆನ್ನುತ್ತಿದ್ದರು. ನಾನು ಆ ರೀತಿಯ ಹುಚ್ಚಿಯಾಗಿರಲಿಲ್ಲ, ಬೇರೊಂದು ರೀತಿ.

...ಅನಂತರವೂ ಮದುವೆ ಮುಂಚಿನ ದಿನಗಳಲ್ಲಿ ನನಗೆ ಎಷ್ಟೋ ಅವಕಾಶವಿತ್ತು, ಇವರಿಗೇ ನೇರವಾಗಿ ಬರೆದು ತಿಳಿಸುವುದಕ್ಕೆ; ಅದನ್ನಾದರೂ ಉಪಯೋಗಿಸಿಕೊಂಡೆನೆ! ಇಲ್ಲ. ಏಕೆ?... ಏಕೇ! ಹೇಗೆ ಉಪಯೋಗಿಸಿಕೊಳ್ಳುವುದು? ಮನಸ್ಸು ಇರಬೇಕಲ್ಲ, ಬರಬೇಕಲ್ಲ ಅದಕ್ಕೆ.

ಎರಡು ತಿಂಗಳಿಗೆ ಮದುವೆ ನಿಷ್ಕರ್ಷೆಯಾಗಿ ಇವರು, ಊರಿಗೆ ಹೋಗುವುದಕ್ಕೆ ಮುಂಚೆ ಇಲ್ಲಿಯೇ ಇದ್ದ ಸ್ವಲ್ಪ ಕಾಲದಲ್ಲಿ ದಿನವೂ ಮನೆಗೆ ಬಂದು ಹೊರಗಡೆ ವಿಹಾರಕ್ಕೆ ಕರೆದುಕೊಂಡು ಹೋಗುತ್ತಿದ್ದರು, ನಿಜ. ಆದರೆ ಈ ಸವಿ ಸನಗರ ಸಮಯಗಳಲ್ಲಿ ಆಹಾ-ಅವೆಂಥ ರಸಮಯ ಸಮಯಗಳು! ಆ ಒಡಕು ಸ್ವರವನ್ನೆತ್ತಲು ನನಗೆ ಬಾಯಿ ಹೇಗೆ ತಾನೆ ಬಂದೀತು? ಚಾಮುಂಡಿ ಬೆಟ್ಟದ ಮೇಲೇರಿ ಹೊಂಗೆಯ ತಂಪು ನೆರಳಿನಲ್ಲಿ ಕುಳಿತು ನಮ್ಮ ನಮ್ಮ ಅಭಿರುಚಿಯನ್ನು ವಿವರಿಸುತ್ತ ಸಾಮ್ಯವನ್ನು ಗುರುತಿಸಿ ಸಂತೋಷಪಡುತ್ತಿದ್ದಾಗ ಹೇಳಬೇಕಾಗಿತ್ತೆ?



ಕೃಷ್ಣಾಭಿಸಾರದ ಬೃಂದಾವನ ವಿಹಾರದ ಸುಮಧುರ ಸ್ವಪ್ನಗಳನ್ನು ಕಾಣುತ್ತ ಮುಂದಿನ ಜೋಡಿ ಜೀವನ ನಕ್ಷೆಯನ್ನು ನಾವು ರಚಿಸಿ ಕೊಳ್ಳುತ್ತಿದ್ದಾಗಲೋ ? ಕುಕ್ಕರಹಳ್ಳಿ ಕರೆ ಲತಾಮಂಟಪ ಸರಸ ಸಂಗ ಸಮಾಧಿಯಲ್ಲೊ, ಸಯ್ಯಾಜೀರಾವ್, ಧನ್ವಂತರಿ ರಸ್ತೆ ಜಾತ್ರೆ ಮೆರವಣಿಗೆಯಲ್ಲೊ? ಇಂದ್ರಭವನ ದಾಸಪ್ರಕಾಶ ಫ್ಯಾಮಿಲಿ ರೂಂ ಸವಿ ತಿನಿಸನ್ನು ಬಾಯಿಗೆ ತುಂಬಿಕೊಂಡೊ? 'ಲಿಡೊ' 'ಪ್ರಭಾ' ತುಂಬು ಬ್ಯಾಲ್ಕನಿಯಲ್ಲೊ? ಉಹುಂ, ಉಹುಂ, ಅದಲ್ಲ, ಅದಲ್ಲ. ಅವಕಾಶಕ್ಕೇನು, ಸಿಕ್ಕುತ್ತಿತ್ತು ಇನ್ನೆಲ್ಲಾದರೂ, ಇನ್ನು ಯಾವಾಗಲಾದರೂ. ಆದರೆ ಅಷ್ಟೊಂದು ಒಲವಿನಿಂದ ನನ್ನ ಉಸಿರು ಕಟ್ಟಿ ಹೋಗಿತ್ತೇನೋ. ಅಥವಾ ಆ ಸರಸ ಸಂಗದಲ್ಲೂ, ನಾನು ಬೇಕಾಗಿ ಆಸ್ಪದ ಕೊಡುತ್ತಿದ್ದರೂ ಸಣ್ಣ ಸಣ್ಣ ವಿಚಾರದಲ್ಲೂ ಇವರು ತೋರುತ್ತಿದ್ದ ಅಸಾಧಾರಣ ಬಿಗಿ ಸಂಯಮ ತಂದಿದ್ದ ಭಯ ನನ್ನನ್ನು ತಡೆದುಬಿಟ್ಟದ್ದಿತೋ? ಉಹುಂ ಉಹುಂ, ಅದು ಯಾವುದೂ ಅಲ್ಲ, ಅಲ್ಲವೇ ಅಲ್ಲ. ಎಲ್ಲೇ ಆಗಲಿ ಎಂತೇ ಆಗಲಿ, ನಾನಾಗಿಯೇ ಬಾಯಿ ಬಿಟ್ಟು ಇವರೊಡನಿನ ಬಾಳನ್ನು ಹಾಳು ಮಾಡಿಕೊಳ್ಳಲಾರದವಳಾಗಿದ್ದೆ. ಥೂ, ನನ್ನ ಆಸೆಯೇ! ಹಾಗಯೇ ಇವರು ಊರಿಗೆ ಹೋದ ಮೇಲೆ ನಮ್ಮಿಬ್ಬರ ಮಧ್ಯದ ಕಾವ್ಯಭರಿತ ಪ್ರೇಮಪತ್ರ ವರ್ಷ ಸಂದೇಶಾವಕಾಶದಲ್ಲೂ ಸುಮ್ಮನಿದ್ದುಬಿಟ್ಟೆ—ಹೆದರಿ, ಉಹುಂ, ಕೆಟ್ಟ ಧೈರ್ಯದಿಂದ...ಮುಖ್ಯವಾಗಿ ನಾನೊಬ್ಬಳು ಅತಿ ಸ್ವಾರ್ಥಿ ಪಕ್ಕಾ ಮೋಸಗಾತಿ, ನಾಚಿಕೆಗೆಟ್ಟ ಮೋಸಗಾತಿ, ಅಕ್ಷಮ್ಯ ಅಪರಾಧಿ.

ಈಗ ಇಂಥವಳಿಗೆ ತಕ್ಕ ಶಿಕ್ಷೆ ಆಗೇ ಆಗುತ್ತದೆಯೋ, ಅವನು ಬಂದು, ಬಂದೇಬಿಟ್ಟು! ...ಸಧ್ಯ ಈ ಸಂದರ್ಭವಾದರೂ ಅಪಮಾನವಿಲ್ಲದೆ ನಿರ್ವಿಘ್ನವಾಗಿ ಕಳೆದುಹೋಗಿಬಿಟ್ಟರೆ ! ನಾನು ಈ ಗಂಡಾಂತರದಿಂದ ಪಾರಾಗಿಬಿಟ್ಟರೆ!

ನಿಮಿಷಗಳು, ಸೆಕೆಂಡುಗಳು ಕಳೆಯುತ್ತಿವೆ. ಒಂದು—ಎರಡು—ಮೂರು...ನಿಧಾನವಾಗಿ. ನನ್ನ ಎದೆ ಬಡಿತ ಮಾತ್ರ ಜೋರು ಜೋರಾಗುತ್ತಿದೆ—ಅವಲಕ್ಕಿ ಕುಟ್ಟುತ್ತಿದೆ. ಶಾಸ್ತ್ರಿಗಳು ಏನೇನೋ ಮಂತ್ರ ಹೇಳುತ್ತಿದ್ದಾರೆ. ಶಬ್ದ ಕೇಳಿಸುತ್ತದೆ; ಕೊಂಚವೂ ಅರ್ಥವಾಗುವುದಿಲ್ಲ. ಧಗಧಗಿಸುವ ಅಗ್ನಿಗೆ ಏನೇನನ್ನೋ ಹಾಕಿಸುತ್ತಿದ್ದಾರೆ, ಅಗ್ನಿದೇವ ಕಬಳಿಸುತ್ತಿದ್ದಾನೆ ಎಲ್ಲವನ್ನೂ— ನನ್ನನ್ನೂ ಎನಿಸುತ್ತಿದೆ. ಇವರಿಗೂ ನನಗೂ ಏನೇನನ್ನೋ ಕೊಟ್ಟು ಒಬ್ಬರಿಂದೊಬ್ಬರಿಗೆ ಏನೇನನ್ನೋ ಮಾಡಿಸುತ್ತಿದ್ದಾರೆ; ಅದರ ಮೇಲೆ ನನ್ನ ಗಮನವೇ ಹೋಗುವದಿಲ್ಲ. ಯಾಂತ್ರಿಕ ಯಾಂತ್ರಿಕ ಎಲ್ಲವೂ. ನನ್ನ ಗಮನವೆಲ್ಲ ನನ್ನೊಳಗೆ; ಮಧ್ಯೆ ಮಧ್ಯೆ ದೃಷ್ಟಿ ಮಾತ್ರ ಆ ತೆರೆದ ಬಾಗಿಲ ಕಡೆಗೆ. ಯಾರಾದರೂ ಆ ಬಾಗಿಲನ್ನು ಮುಚ್ಚಿಬಿಡಬಾರದೆ ಬೋಲ್ಟ್ ಹಾಕಿಬಿಡಬಾರದೆ – ಅವನು ಬಂದವನು ಒಳಗೆ ಕಾಲಿಡದಂತೆ! ಉಹುಂ, ಯಾರೂ ಮುಚ್ಚುವುದೇ ಇಲ್ಲ. ಅಗಲವಾಗಿ ಎರಡು ಬಾಗಿಲನ್ನೂ ಅಗಲವಾಗಿ ತೆರೆದೇ ಇರುತ್ತಾರೆ– ತೆರೆದೇ ತೆರೆದೇ. ಸೆಕೆ ಸೆಕೆ, ಬಹಳ ಸೆಕೆಯಾಗುತ್ತಿದೆ. ಮೈ ಬೆವರುತ್ತಿದೆ, ಉಸಿರು ಹುಯ್ಯುತ್ತಿದೆ.

ಸೆರಗು ಎಳೆದಂತಾಗುತ್ತದೆ. ಎಚ್ಚೆತ್ತು ಅತ್ತ ನೋಡುತ್ತೇನೆ. ಇವರಿಗೂ ನನಗೂ ಗಂಟು ಹಾಕುತ್ತಿದ್ದಾರೆ. ನಮ್ಮ ನಂಟಿನ ಗಂಟು. ಬಿಗಿಯಾಗಿ ಹಾಕಿ, ಬಿಗಿಯಾಗಿ, ಇನ್ನೂ ಬಿಗಿಯಾಗಿ. ಸಡಿಲವಾಗಿ ಕಳಚಿಕೊಳ್ಳದಿರಲಿ. ಹಾಗೂ ಎಲ್ಲಿ ಕಳಚಿಕೊಂಡು ಬಿಡುವುದೋ, ಕಳಚಿಕೊಂಡೇ ಬಿಡುವುದೋ ನಾನೇ ಎಳೆದು ಎಲ್ಲಿ ಕಳಚಿಬಿಡುತ್ತೇನೋ ಕಾಣೆನಲ್ಲ!

ಸೆರಗು ಮತ್ತೊಮ್ಮೆ ತುಯ್ಯುತ್ತದೆ.

"ಏಳಮ್ಮ ಪಾಪು, ಅವರೂ ಏಳ್ತಾ ಇದಾರೆ; ಇನ್ನು ಸಪ್ತಪದಿಯಂತೆ" ಅಪ್ಪ ಹೇಳುತ್ತ ನನ್ನನ್ನು ಹಿಡಿದು ಎಬ್ಬಿಸುತ್ತಾರೆ. ಇವರ ಕೈ ನನ್ನನ್ನು ಸೋಂಕಿದಂತಿದೆ.

ಶಾಸ್ತ್ರಿಗಳು ಏನನ್ನೋ ಹೇಳುತ್ತಿದ್ದಾರೆ; ಇವರೂ ಏನನ್ನೋ ಹೇಳುತ್ತಿದ್ದಾರೆ– ಶಾಸ್ತ್ರಿಗಳು ಹೇಳಿದನ್ನೇ ಇರಬೇಕು.

"ಹೆಜ್ಜೆ ಇಡಮ್ಮ ಪಾಪು, ಅವರ ಜತೆ ಮೊದಲ ಹೆಜ್ಜೆ" ಅಪ್ಪ ಹೇಳಿ ಸ್ವಲ್ಪ ತಳ್ಳಿದಂತೆ ಮಾಡುತ್ತಾರೆ. ಇವರೊಡನೆ ಕುರುಡಳಂತೆ ಹೆಜ್ಜೆಯಿಡುತ್ತೇನೆ– ತಲೆ ತಗ್ಗಿದ್ದರೂ ನನ್ನ ಕಣ್ಣೆಲ್ಲ ಹೊರ ಬಾಗಿಲಿನ ಮೇಲೆ. ಮತ್ತೆ ಮಂತ್ರಪಠಣ.

"ಪಾಪು ಇನ್ನೊಂದು ಹೆಜ್ಜೆಯಿಡಮ್ಮ– ಎರಡನೇದು."

ಇನ್ನೊಂದು ಹೆಜ್ಜೆ ಇಡುತ್ತೇನೆ – ಬಾಗಿಲ ಕಡೆಗೆ ನೋಡುತ್ತಲೇ. ಮತ್ತೆ ಮಂತ್ರಪಠಣ.

"ಪಾಪು, ಮೂರನೆ ಹೆಜ್ಜೆಯಿಡಮ್ಮ" ಈಗ ಅದೂ ಆಗುತ್ತದೆ, ಅಂತೆಯೇ. ನಾನು ದೃಷ್ಟಿಯನ್ನು ತೆಗೆದೇ ಇಲ್ಲ. ಮತ್ತೆ ಮಂತ್ರಪಠಣ.

"ನಾಲ್ಕನೇ ಹೆಜ್ಜೆಯಿಡಮ್ಮ ಪಾಪೂ–ಯಾವ ಕಡೆ ನೋಡ್ತಾ ಇದೀಯಮ್ಮಾ !"

ಅಗೋ! ಯಾರೋ!...ಅವನು! ಅವನು ಅವನು...ಅವನೇ...ಅವನೇ ಬಂದುಬಿಟ್ಟ! ಬಂದು ಬಿಟ್ಟಿದ್ದಾನೆ. ಹೆಜ್ಜೆಯಿಡುತ್ತಿದ್ದಾನೆ–ಒಂದು ಎರಡು ...ಬೇಗ ಬೇಗ ...ಕೈಯಲ್ಲೊಂದು ಕಾಗದ!.... ಅದೇ ನನ್ನದೇ! ನನ್ನದೇ ಇರಬೇಕು.

ನನ್ನ ಹೆಜ್ಜೆ ನಿಂತುಬಿಟ್ಟಿದೆ. ನೆಲಕ್ಕೆ ಅಂಟಿಕೊಂಡುಬಿಟ್ಟಿದೆ. ಕದಲಲಾರೆ, ಕದಲಲಾರೆ. ನಡುಗುತ್ತಿದ್ದೇನೆ, ಗಡಗಡ ನಡುಗುತ್ತಿದ್ದೇನೆ ಒಳಗಡೆಯೇ. ಹೊರಗಡೆಯೂ...

"ಏನಾಯ್ತಮ್ಮಾ ಪಾಪು ? ಯಾಕೆ ನಿಂತೆ? ನಡೆಯಮ್ಮಾ...ಹೆಜ್ಜೆ..."

"ಇವಳು ವಿವಾಹ ಯೋಗ್ಯಳಲ್ಲ!" ಸಿನೀಮಯ ಕೂಗು! ಅವನದು! ಅರಿಸಿಕೊಂಡ ಸಮಯದಲ್ಲಿ ಎನ್ನುವಂತೆ! ಸಿಡಿಲು! ಸಿಡಿಲು! ಬಡಿಯಿತು ಬಡಿಯಿತು, ಬಡಿದೇಬಿಟ್ಟಿತು... ಸುಟ್ಟು ಬೆಂದು ಕುಸಿಯುತ್ತಿದ್ದೇನೆ, ಕುಸಿಯುತ್ತಿದ್ದೇನೆ. ಬಿದ್ದುಬಿಡುತ್ತಿದ್ದೆ – ಅಪ್ಪ ಹಿಡಿದುಕೊಂಡಿರದಿದ್ದರೆ.

"ಇಗೋ!...ಇಲ್ಲಿದೆ, ಅದಕ್ಕೆ ಸಾಕ್ಷಿ" ಅವನು ಕಾಗದವನ್ನು ಎತ್ತಿಹಿಡಿದಿದ್ದಾನೆ, ಆಡಿಸುತ್ತಿದ್ದಾನೆ ಬಿಚ್ಚಿ, ಬಾವುಟದಂತೆ...ನನ್ನ ಅಪಕೀರ್ತಿಯ ಬಾವುಟವನ್ನು ಎತ್ತಿ ಬೀಸುತ್ತಿದ್ದಾನೆ– ಈ ಜನಸಂದಣಿಯ ಮುಂದೆ, ಮಧ್ಯೆ. "ಸುಳ್ಳಾದರೆ ಇವಳು ಹೇಳಲಿ!" ಅವನು ಸವಾಲು ಹಾಕುತ್ತಾನೆ.

ವಾದ್ಯ, ಮಾತು ನಿಂತಿವೆ. ಸಭೆ ಸ್ತಬ್ಧ...ಕ್ಷಣ ಕಾಲ. ನನ್ನ ಮೌನವೇ, ಒಣಗಿದ ನಾಲಿಗೆಯ ಮೌನವೇ, ಎಲ್ಲ ಉತ್ತರವನ್ನೂ ಕೊಡುತ್ತದೆ. ಮರುಕ್ಷಣದಲ್ಲಿ ಗುಜುಗುಜು ಏಳುತ್ತಿದೆ ಎಲ್ಲೆಲ್ಲೂ.

"ಎಲ್ಲಿ? ಏನದು?" ನಿಶ್ಶಬ್ದ ಭೇದಿಸಿ ಕೇಳಿಸುತ್ತದೆ, ಭಾವಿ ಮಾವನವರ ಕೋಪ ಧ್ವನಿ. ಅವರು ಅವನ ಬಳಿಗೆ ಧಾವಿಸಿದ್ದಾರೆ. ಕಾಗದವನ್ನು ಆತುರದಿಂದ ತೆಗೆದುಕೊಂಡಿದ್ದಾರೆ. ಅದರ ಮೇಲೆ ಕಣ್ಣಾಡಿಸುತ್ತಿದ್ದಾರೆ. ಮುಖ ಬಿಗಿದುಕೊಳ್ಳುತ್ತಿದೆ.

ಈಗ ನಾನು ಅನ್ಯಮನಸ್ಕಳಲ್ಲ. ತಲೆ ತಗ್ಗಿದ್ದರೂ ಕಣ್ಣು ಎಲ್ಲೆಲ್ಲೂ ಚಲಿಸುತ್ತಿದೆ. ಕಿವಿಯೂ ಚುರುಕಾಗಿದೆ.

"ಮೋಸ!... ಮಹಾ ಮೋಸ!..." ಭಾವಿ ಮಾವನವರ ಗುಡುಗು ! "ವಿಷಯ ಬಚ್ಚಿಟ್ಟು ವಂಚಿಸಿ ಮದುವೆ ಮಾಡಿಸ್ತಾ ಇದಾರೆ!" ಸಭೆಯಲ್ಲಿ ಸುತ್ತಲೂ ನೋಡುತ್ತ ಹೇಳುತ್ತಿದ್ದಾರೆ. "ದ್ರೋಹಿಗಳು! ನೀವು ದ್ರೋಹಿಗಳು!" ಅವರು ಅಪ್ಪ ಅಮ್ಮನ ಕಡೆಗೆ ನೋಡುತ್ತ ಬೆರಳು ಮಾಡಿ ಹೇಳುತ್ತಾರೆ. "ಇವಳು ಅನರ್ಹಳು! ಶುದ್ಧ ಅನರ್ಹಳು!" ನನ್ನ ಕಡೆಗೆ ಬೆರಳು ದೃಷ್ಟಿ ತಿರುಗಿಸುತ್ತಾರೆ. "ಸಾಕು! ಮದುವೆ ನಿಲ್ಲಲಿ, ಇಲ್ಲಿಗೇ! ಸಧ್ಯ, ಸಪ್ತಪದಿ ಇನ್ನೂ ಮುಗಿದಿಲ್ಲ. ಈ ವರೆಗೆ ಆದದ್ದು ಅನೂರ್ಜಿತ. ಹುಂ, ಮತ್ತೆ ಡೈವೋರ್ಸ್ ಫಜೀತಿ ತಪ್ಪಿತು. ಅಬ್ಬ! ಎಂಥವಳು, ಎಂಥ ಜನ!"

"ಇಲ್ಲಿ ಕೊಡಿ" ಭಾವಿ ಅತ್ತೆ ಕಾಗದವನ್ನು ನೋಡುತ್ತಾರೆ. "ಅಯ್ಯೋ! ರಾಮ ರಾಮಾ!...ಸಧ್ಯ ಒಂದು ಗಂಡಾಂತರ ತಪ್ಪಿತು, ದೇವರ ದಯದಿಂದ, ತುಟಿಗಟ್ಟದಲ್ಲಿ; ಕೂದಲೆಳೆಯಿಂದ; ಇಂಥ ಸಂಬಂಧ ಕಟ್ಟಿಕೊಳ್ತಾ ಇದ್ದು.ನೋಡೋ ಮಗು, ನೋಡಪ್ಪಾ! ದೇವರು ದೊಡ್ಡೋನಾಗಿದ್ದ, ಗೆದ್ದುಕೊಂಡ್ವು" ತಾಯಿ ಹತ್ತಿರ ಬಂದು ಮಗನಿಗೆ ಕಾಗದವನ್ನು ಕೊಡುತ್ತಾರೆ.

"ಬಾರೋ ಮಗು, ಹೋಗೋಣ–ಇಲ್ಲಿಂದ, ಈ

ಪ್ರಾರಬ್ಧದಿಂದ ದೂರ, ಅದಷ್ಟು ಬೇಗ" ಇವರ ತಂದೆ ಇದ್ದಲ್ಲಿಂದಲೇ ಕೂಗುತ್ತಾರೆ, ಆಜ್ಞಾಪಿಸುತ್ತಾರೆ. "ಸಾರ್ ನಿಮ್ಮಿಂದ ಉಪಕಾರವಾಯಿತು. ಮಹೋಪಕಾರ. ದೊಡ್ಡ ಅಪಾಯದಿಂದ ಪಾರು ಮಾಡಿದಿರಿ. ಧನ್ಯವಾದ, ಧನ್ಯವಾದಗಳು. ಎಂದಿಗೂ ಮರೆಯುವುದಿಲ್ಲ, ನಿಮ್ಮ ಸಹಾಯವನ್ನ" ಅವನ ಕೈ ಕುಲುಕುತ್ತಾರೆ. "ಬಾರೋ ಮಗು ಏನು ನೋಡುತ್ತಿಯೆ. ಹೋಗೋಣ ಈ ತಕ್ಷಣವೆ."

"ಹೌದಪ್ಪಾ, ನಮ್ಮನ್ನು ಕಾಪಾಡಿದಿರಿ– ಈ ಪಾಪದಿಂದ. ದೇವರು ನಿಮಗೆ, ಒಳ್ಳೇದು ಮಾಡಲಿ" ಇವರ ತಾಯಿಯೂ ಅಲ್ಲಿ ಸೇರಿಕೊಂಡಿದ್ದಾರೆ. ಇವರ ಬೀಗರೂ ಅಲ್ಲಿಗೆ ಹೋಗಿ ಗುಂಪುಗೂಡುತ್ತಿದ್ದಾರೆ.

ಸಭೆಯಲ್ಲಿ ಗುಜುಗುಜು ಗಳಿಗೆಳಿಗೆಗೆ ಜೋರು ಜೋರಾಗುತ್ತಿದೆ. ಮಾತುಗಳೂ ಕೇಳಿಸುತ್ತಿವೆ– ಕೇಳಬಾರದ ಮಾತುಗಳು. ಹೇಳಬಹುದಾದ ಮಾತುಗಳು, ಹೇಳಬೇಕಾದ ಮಾತುಗಳೆ. ಛಳಕು ವಿಸ್ಮಯ ಧಿಕ್ಕಾರ, ಶಿಕ್ಷೆ ಮಾತುಗಳು. 'ಏನಿದೇರಿ ಕಾಗದದಲ್ಲಿ ? ಅದೇ ಗೊತ್ತಾಗಿಲ್ಲ. ಹೀಗೆಲ್ಲ ಮಾತಾಡ್ತಾ ಇದೀವಿ', 'ಇನ್ನೇನಿರುತ್ತೇರಿ ? ನೀವೊಬ್ಬರು!' ಅದೇ ಹೊಲಸು. ಮತ್ತೇನು? ಸಾಲದೆ? ಓದಬೇಕೆ? ಕೈ ಹುಣ್ಣಿಗೆ ಕನ್ನಡಿ ಬೇಕೆ? ಹುಂ!' 'ಥೂ! ಥೂ! ಹಾಳು! ಅಲ್ಲಾ ಎಂಥೋಳು ಅವಳು, ಅವರು, ಈತ ಮಾತ್ರ ಬರದೆ ಹೋಗಿದ್ರೆ ದೇವರೆ ದೇವರೆ ಎಂಥ ಅನಾಹುತ ದುರಂತ ಆಗಿ ಹೋಗ್ತಾ ಇತ್ತು ಅಂತ' ಹತ್ತಿರದಲ್ಲೇ ಕೇಳಿಸುತ್ತಿದೆ. 'ಅಯ್ಯೋ' ಎಂದು ಯಾರಿಂದಲೂ ಕೇಳಬರುತ್ತಿಲ್ಲ; ಏಕೆ ಕೇಳಿ ಬರಬೇಕು; ಯಾರಾದರೂ ಏಕೆ ಅನ್ನಬೇಕು ಇಷ್ಟಕ್ಕೂ? ಕೆಲವರಾಗಲೆ ಏಳುತ್ತಿದ್ದಾರೆ, ಹೊರಟೂ ಹೋಗುತ್ತಿದ್ದಾರೆ, ಬೀಗರ ಕಡೆ ಭಾರಿ ಗೊಂದಲ, ಬೈಗಳ ಹೀನಾಮಾನ. ಶಾಪ ನನಗೆ, ನಿರಪರಾಧಿಗಳಾದ ಅಪ್ಪ ಅಮ್ಮ ನಮ್ಮ ಕಡೆಯವರಿಗೆಲ್ಲ.

ಅಪ್ಪ ಅಮ್ಮ ತಲೆ ತಗ್ಗಿಸಿದ್ದಾರೆ. ಉತ್ತರ ಕೊಡುವುದಿಲ್ಲ. ಕೊಟ್ಟು ತಪ್ಪಿಸಿಕೊಳ್ಳುತ್ತಲೂ ಇಲ್ಲ. ನನಗಾದರೋ ನಾಲಿಗೆ ಹೋಗಿಬಿಟ್ಟಿದೆ. ನನ್ನ ಮಾನದಂತೆಯೇ. ಎಲ್ಲಿ ಧೈರ್ಯ ?...ಎದೆ ತಿದಿಯೊತ್ತುತ್ತಿದೆ, ಕಾಲು ನಡುಗುತ್ತಿದೆ. ತತ್ತರಿ




"ಒಳ್ಳೆ ನಲ್ಲಿ ಮಾತ್ರವಲ್ಲ...ಕಾರಂಜಿಯನ್ನೂ ನಮ್ಮಲ್ಲೀಗೆ ಒದಗಿಸಿದ್ದೀರಲ್ಲಾ ಸೋಮೀ..."

ಸುತ್ತಿದ್ದೇನೆ.

ಹಾಗೂ ಇವರ ಕಡೆಗೆ, ಇವರು ನೋಡುತ್ತಿರುವ ಕಾಗದದ ಕಡೆಗೆ, ಅರ್ಥಾರ್ಥ ಕಾಣಿಸುವ ಇವರ ಮುಖದ ಕಡೆಗೆ, ಕಣ್ಣಿನ ಕಡೆಗೆ, ಕಳ್ಳತನದಿಂದ ರೆಪ್ಪೆಯನ್ನು ಮಾತ್ರ ಎತ್ತಿ ನೋಡುತ್ತೇನೆ.

ಇವರ ಕಣ್ಣು—ಕೆಂಪಾಗಿದೆ ಕೋಪಾಗ್ನಿಯಂತೆ. ಮುಖವೂ ಕೆಂಪಾಗಿದೆ, ಬಿಗಿದುಕೊಂಡಿದೆ. ಹುಬ್ಬು ಗಂಟಿಕ್ಕಿದೆ.

ಅಯ್ಯೋ ನನ್ನ ಕಾಲ್ಕೆಳಗೆ ಭೂಮಿ ಬಿರಿಯಬಾರದೆ…ಇಲ್ಲಿಂದ ಓಡಿಹೋಗಲೆ? ಅಶಕ್ತ ಕಾಲೇ ಬರದಲ್ಲ. ಗಂಟು ಬೇರೆ ಹಾಕಿಬಿಟ್ಟಿದ್ದಾರಲ್ಲ ಇವರಿಗೆ …ಇನ್ನೆಲ್ಲಿಯ ಗಂಟು ನಂಟು! ಪ್ಥ! …ಗೌತಮ–ಅಹಲ್ಯ, ಜಮದಗ್ನಿ–ರೇಣುಕಾ, ರಾಮ–ಸೀತಾ ಸಂಸ್ಕೃತಿಯಲ್ಲವೆ ನಮ್ಮದು? ತಪ್ಪೇನಿದೆ? ಶಿಲೆಯಾಗಿಸು, ತಲೆ ಹೊಯ್ಯಿಸು, ಅಗ್ನಿಪ್ರವೇಶ ಮಾಡಿಸು; ಕಾಡಿಗೆ…ಹ್ಞ! ಅಗ್ನಿಪ್ರವೇಶ ಮಾಡಿಬಿಡಲೆ – ಮುಂದೆ ಉರಿಯುತ್ತಿದ್ದಾನಲ್ಲ…

"ಪಾಪು ಪಾಪು!…ಬೆಂಕಿ ಬೆಂಕಿ!…ಜೋಪಾನ ಜೋಪಾನ!" "ಅಮ್ಮ ಅಮ್ಮಾ" "ನೋಡಿಕೊಳ್ಳಿ"

ಅದೇನಾಯಿತೊ ಕಾಣೆ, ನನಗೇ ಗೊತ್ತಿಲ್ಲ; ಅಪ್ಪ ಹಿಡಿದುಕೊಂಡಿದ್ದಾರೆ ಎರಡು ಕೈಗಳಿಂದಲೂ. ಶಾಸ್ತ್ರಿ ಜೋಯಿಸರ ಕೈಗಳೂ ಮುಂದೆ ಬಂದಿವೆ. ಇವರ ಕೈಯೂ ಅಡ್ಡಲಾಗಿದೆ.

ಸಾವರಿಸಿಕೊಳ್ಳುತ್ತೇನೆ. ಕೈಗಳು ಹಿಂದೆ ಸರಿಯುತ್ತವೆ – ಅಪ್ಪನ ಕೈ ಬಿಟ್ಟು.

ಇವರು ಓದಿದ ಕಾಗದವನ್ನು ರಭಸದಿಂದ ಇತ್ತ ಹಾಕುತ್ತಾರೆ. ಯಾರಾದರೂ ಹಿಡಿದುಕೊಳ್ಳುವುದಕ್ಕೆ ಮುಂಚೆಯೇ ಅದು ಬೆಂಕಿಗೆ ಬಿದ್ದು ಭುಗಭುಗನೆ ಉರಿದು ಕರಿಕಾಗಿ ಬೂದಿಯಾಗುತ್ತದೆ. ಗಂಟು ಹಾಕಿದ್ದ ಮೇಲುಮುಗುಟವನ್ನು ಇವರು ಕಿತ್ತೆಸೆದು ದಡಗಟ್ಟುವ ಹೆಜ್ಜೆ ಹಾಕುತ್ತ ತಂದೆ ತಾಯಿಯರ ಕಡೆಗೆ ಹೋಗುತ್ತಿದ್ದಾರೆ.

ಇಲ್ಲಿಗೆ ಪೂರ್ತಿಯಾಗುತ್ತದೆ. ನನ್ನ ಅವತಾರ. ಇನ್ನು ನಾನು ಸೈರಿಸಲಾರೆ. ಇದ್ದ ಅಷ್ಟಿಷ್ಟು ಶಕ್ತಿಯೂ ಹೋಗಿಬಿಟ್ಟಿದೆ. ಕಾಲುಗಳು ಮುದುರಿಕೊಳ್ಳುತ್ತವೆ. ಅಪ್ಪನ ಕೈಗಳೂ ಹಿಡಿದುಕೊಳ್ಳಲಾರವು, ಎತ್ತಿ ನಿಲ್ಲಿಸಲಾರವು. ಕುಸಿಯುತ್ತೇನೆ, ಕುಸಿಯುತ್ತೇನೆ, ಕುಸಿದು ಕುಪ್ಪೆಯಾಗಿಬಿಡುತ್ತೇನೆ. ಗಂಟಲಿಗೆ ಒದೆಯುತ್ತಿದೆ - ಅಷ್ಟು ಒತ್ತಡ ಅಳು – ಬಿಕ್ಕಳಿಸಿದ ಅಳು ಒಳಗಿನಿಂದ ಒಡೆದುಕೊಂಡು ನುಗ್ಗಿ ಹೊರಗೆ ಬಂದುಬಿಡುತ್ತದೆ. ಅಸಹಾಯಳು, ನಾನು ಅಸಹಾಯಳು! ಇನ್ನು ತಡೆಯಲಾರೆ, ತಡೆದುಕೊಳ್ಳಲಾರೆ. ಅತ್ತುಬಿಡುತ್ತೇನೆ, ಧಾರಾಳವಾಗಿ ಅತ್ತುಬಿಡುತ್ತೇನೆ, ನಾಚಿಕೆ ಹೇಸಿಗೆ ಬಿಟ್ಟು ಅತ್ತುಬಿಡುತ್ತೇನೆ. ಮನಸ್ಸಿಗೆ ಬಂದಷ್ಟು. ಎಲ್ಲರೂ ನೋಡಲಿ, ನಗಲಿ, ತಿರಸ್ಕರದಿಂದ ನಗಲಿ, ತಿರಸ್ಕಾರದಿಂದ ಬೈಯಲಿ. ಥೀ ಥೂ ಎಂದು ಉಗುಳಲಿ. ಅಪ್ಪ ಅಮ್ಮನೂ ಮೂಕರು. ಏನೂ ಮಾಡಲಾರರು. ಯಾರು ತಾನೆ ಏನು ಮಾಡಲಾದೀತು ? ಮಾಡಿ ಪ್ರಯೋಜನವೇನು ? ಮಾಡಬೇಕೇಕೆ ?

ಇನ್ನೇನಿದೆ ನನಗೆ? ಆಗಿಹೋಯಿತು, ಎಲ್ಲವೂ ಆಗಿಹೋಯಿತು, ಆಗಬೇಕಾದ ರೀತಿಯಿಂದಲೇ. ತಕ್ಕ ಶಾಸ್ತಿ, ತಕ್ಕ ಶಾಸ್ತಿ.

ಆಗಲಿ, ಆಗಲಿ, ಸಹಿಸುತ್ತೇನೆ ಎಲ್ಲವನ್ನೂ, ಬಂದದ್ದೆಲ್ಲವನ್ನೂ. ಬರಲಿ, ಬರಲಿ, ಬರುವುದೆಲ್ಲವೂ ಬರಲಿ.

ಈಗಂತೂ ನಿಜವಾಗಿ ನಾನು ಒಬ್ಬಳೆ, ಅನಾಥೆ– ಈ ವಿಶಾಲ ಜನಜನಿತ ಪ್ರಪಂಚದಲ್ಲಿ. ಇನ್ನು ನನ್ನ ಪ್ರಪಂಚ ಶೂನ್ಯ. ನೀನೆನ್ನುವರು ನನಗೆ ಯಾರೂ ಇಲ್ಲ, ಯಾರೂ ಇಲ್ಲ. ನನ್ನ ಜನ ಎನ್ನುವವರು– ಅಪ್ಪ, ಅಮ್ಮ, ಅವರು, ಇವರು, ಇವರೂ ಯಾರೂ ಇಲ್ಲ. ಇಲ್ಲ, ಇಲ್ಲವೇ ಇಲ್ಲ.

ಥಟೀರ್!

ಬೆಚ್ಚುತ್ತೇನೆ, ನಡುಗುತ್ತೇನೆ. ಬಿಸಿ ಕೆನ್ನೆ ಮುಟ್ಟಿ ನೋಡಿಕೊಳ್ಳುತ್ತೇನೆ. ಏಟು ಬಿದ್ದಿತೆ? ನೋವು ಇಲ್ಲವಲ್ಲ? ಹೊಡೆದವರು ಯಾರು?

ಸ್ವಲ್ಪ ಕಿತ್ತೆತ್ತಿ ನೋಡುತ್ತೇನೆ ಸುಪ್ತೇಖಾ.

ಫಟೀರ್?

ಅಗೋ, ಅಲ್ಲಿ ಶಬ್ದ! ಅಲ್ಲಿಂದ ಬಂದಿತು. ಇವರು, ಇವರ ತಂದೆ ತಾಯಿ ಇರುವ ಕಡೆಯಿಂದ? ಯಾರು ಹೊಡೆದರು? ಯಾರಿಗೆ ?

ಫಟೀರ್!

"ನನಗೆ ಯಾಕ್ರೀ ಹೊಡೀತೀರಾ?" ಅಪ್ಪನ ಧ್ವನಿ! ಕೂಗು ಧ್ವನಿ. "ನಿಮಗೆ ಉಪಕಾರ ಮಾಡೋದಕ್ಕೆ ಬಂದ್ರೆ ಹೀಗೇ ಮಾಡೋದು? ನನಗೇನು ಬೇಕಾಗಿತ್ತು."

ಫಟೀರ್!

"ಮಗು, ಇದೇನು ಮಾಡ್ತಾ ಇದೀಯಪ್ಪಾ-ದೇವರ ಹಾಗೆ ಬಂದು ಸಹಾಯ ಮಾಡಿದ ಮನುಷ್ಯ..."

ಫಟೀರ್ ಫಟೀರ್!



ಇವರು ಆವೇಶ ಬಂದಂತೆ ಅವನನ್ನು ಹೊಡೆಯುತ್ತಿದ್ದಾರೆ, ತಳ್ಳಿ ತರುಬಿಕೊಂಡು ಹೋಗುತ್ತಿದ್ದಾರೆ ಹೊರ ಬಾಗಿಲಿನ ಕಡೆಗೆ. ಅವನು ಕತ್ತರಿಸುತ್ತ ಹಿಂದೆ ಹಿಂದೆ ಬೀಳುತ್ತಿದ್ದಾನೆ.

"ಅಪ್ಪಾ ಬ್ಯಾಡವೋ, ನಿಲ್ಲಿಸು !" ತಾಯಿ ಅಂಗಲಾಚುತ್ತಿದ್ದಾರೆ.

"ನಿಲ್ಲಿಸೋ ಮಗೂ!" ತಂದೆ ಆಜ್ಞಾಪಿಸುತ್ತಿದ್ದಾರೆ. ಸಾರ್ ಸಾರ್! ಇದೇನ್ ಸಾರ್! ನಿಲ್ಲಿ ಸಾರ್!" ಜನರು ಇವರ ಕಡೆಗೆ ನುಗ್ಗುತ್ತಾರೆ.

ಆದರೆ ಈಪರೆಗಾಗಲೇ ಅಪನನ್ನು ಇವರು ಆಚೆಗೆ ಬಾಗಿಲಾಚೆಗೆ ತಳ್ಳಿಬಿಟ್ಟಿದ್ದಾರೆ.

"ಆಗಲಿ! ಆಗಲಿ! ನಿಮಗೆ ಮಾಡ್ತೀನೀ! ಬುದ್ಧಿ ಕಲಿಸ್ತೀನಿ.ಇಂಥ ಉಪಕಾರಕ್ಕೆ ಇಂಥಾ ಅಪಕಾರಾ..."

ಧಪಾರ್! ಇವರು ಬಾಗಿಲನ್ನು ಮುಚ್ಚುತ್ತಿದ್ದಾರೆ. ಬೋಲ್ಟ್ ಜಡಿಯುತ್ತಿದ್ದಾರೆ. ಹಿಂತಿರುಗಿ ಬರುತ್ತಿದ್ದಾರೆ.

"ಇದೇನೋ ಮಗು! ನಿಂಗೆ ಹುಚ್ಚುಗಿಚ್ಚೇನು? ಜ್ಞಾನಗೀನ ಇಲ್ಲವೆ ಏನು ಮಾಡ್ತಾ ಇದೀಯೆ ಅಂತ?...ಏನು ಮಾಡಿಬಿಟ್ಟೆ!" ತಂದೆ ಕೋಪದಿಂದ ಗದರಿಸುತ್ತಿದ್ದಾರೆ.

"ಇರ್ಲಿ ಬಿಡಿ ಅಂದ್ರೆ. ಇದೇನೋ ಆಮೇಲೆ ವಿಚಾರಿಸೋಣ. ಈಗ ಮಹಡಿ ಮೇಲೆ ಹೋಗೋಣ ಬಿಡಾರಕ್ಕೆ ಮೊದಲು...ಬಾಪ್ಪಾ ಮಗು" ತಾಯಿ ಸಮಾಧಾನ.

"ಆಗಲಿ ನಡೀರಿ ಎಲ್ಲರೂ. ಮೊದಲು ಸಾಮಾನು ಕಟ್ಟಿಕೊಂಡು ಇಲ್ಲಿಂದ ಹೋಗೋಣ ಹಾಳಾಗಿ. ಬಾರಯ್ಯಾ."

ಮಹಡಿ ಮೆಟ್ಟಿಲ ಕಡೆಗೆ ಇತ್ತ ಬರುತ್ತಿದ್ದಾರೆ ಮೂವರೂ, ಹಾಯ್ದು ಹೋಗುವುದಕ್ಕೆ. ತಂದೆ ತಾಯಿ ಮುಂದೆ, ಇವರು ಅವರ ಹಿಂದೆ. ಇತರ ಬೀಗ ವರ್ಗ ಮೇಲೆ ಹೋಗುತ್ತಿರುವ ದಡಬಡ ಶಬ್ದ ಕೇಳಿಸುತ್ತಿದೆ.

ತಂದೆ ತಾಯಿ ಹಾಯ್ದು ಹೋದರು. ಇವರು ನಿಲ್ಲುತ್ತಾರೆ.

ಬರುತ್ತಿದ್ದಾರೆ! ಇತ್ತಲೇ, ಇತ್ತಲೇ!

ಯಾಕೆ? ಏನು ಮಾಡುತ್ತಾರೋ – ಅವನಿಗೆ ಮಾಡಿದಂತೆ? ...ಇರಲೆ? ಓಡಿಹೋಗಲೆ? ಊಹುಂ. ಇರುತ್ತೇನೆ ಇಲ್ಲೇ. ಶಿಕ್ಷಿಸಲಿ ಶಿಕ್ಷಿಸಲಿ ಬೇಕಾದಷ್ಟು. ಮನಸ್ಸಿಗೆ ತೃಪ್ತಿಯಾಗುವಷ್ಟು. ನಾನು ಅರ್ಹಳು ಅದಕ್ಕೆ. ಆಗಲಿ ಪ್ರಾಯಶ್ಚಿತ್ತ ಅಷ್ಟಾದರೂ.

ಇವರು ಬರುತ್ತಾರೆ, ನನ್ನ ಬಳಿಗೇ. ನನ್ನ ತೋಳು ಹಿಡಿದು ಜಗ್ಗುತ್ತಾರೆ ಮೇಲೆ, ಸ್ವಲ್ಪ ಒರಟಾಗಿಯೇ. ಎದ್ದು ನಿಲ್ಲುತ್ತೇನೆ.

"ಅಯ್ಯೋ ಮಗೂ ಇದೇನು ಮಾಡುತ್ತ ಇದ್ದೀ–ಯೋ? ಬಾ ಬಿಟ್ಟು ಅವಳನ್ನ ಆ ಕಳಂಕಿನಿಯನ್ನ. ಇನ್ನೇನೂ ಮಾಡಬೇಡ!" ಹಿಂದೆ ತಿರುಗಿ ನಿಂತು ನೋಡಿದ ತಂದೆಯಿಂದ.

"ಅಪ್ಪಾ ಮಗೂ ಬಾರೋ. ಸಾಕು ಕ್ರೈಸಿಸ್ ಮಾಡಬೇಡ. ಆದದ್ದಾಗಿ ಹೋಯ್ತು. ಹಾಳಾಗಿ ಹೋಗಲಿ ಅವಳು ಅವನು ಎಲ್ಲಿಗಾದರೂ" ತಾಯಿ ಮಾತು ಸೇರಿಸುತ್ತಾರೆ.

"ಜೋಯಿಸರೆ ಹೇಳಿ ಮಂತ್ರ ಮುಂದಕ್ಕೆ!"

ಏನು! ಏನು! ಏನು ಹೇಳುತ್ತಿದ್ದಾರೆ ಇವರು! ನಿಜವೆ? ನಿಜವೆ? ಇದು ನಿಜವೆ? ಕನಸೋ? ನನಗೆ ಭ್ರಾಂತಿಗೀಂತಿಯಾದೆಯೋ?

"ಇದೇನಯ್ಯಾ ಅನ್ಯಾಯ? ಅನಾಚಾರ! ಪಾಪ! ಬಿಟ್ಟು ಬಾ!" ತಂದೆಯ ಕೂಗು.

"ಮಗು ಏನು ನಾಚಿಕೆಗೇಡೋ! ರಾಮ ರಾಮಾ!... ಹಾಳುಗೆಲಸ! ಮೊದಲಿನಿಂದಲೂ, ಲಾಗಾಯಿತಿನಿಂದಲೂ, ಒಂದಲ್ಲ ಒಂದು ಮಾಡ್ತಾಲೇ ಇರೋದು ಅವಿವೇಕಿನಾ? ಬೇಡಪ್ಪಾ, ಬಾ. ಇದೊಂದು ಸಲವಾದರೂ. ಅಪ್ಪ ಅಮ್ಮನ ಮಾತು ಕೇಳು ಈಗಲಾದರೂ. ಬೇಡ. ಈ ಪ್ರಾರಬ್ಧ ಸಂಬಂಧ" ತಾಯಿ ಪ್ರಲಾಪಿಸುತ್ತಾರೆ.

"ಬರ್ತೀಯೋ ಇಲ್ವೋ? ಬನ್ನಿ ಜೋಯಿಸರೆ. ಮಂತ್ರಾನೂ ಬೇಡ ತಂತ್ರಾನೂ ಬೇಡ" ಇವರ ತಂದೆಯ ಅಜ್ಞೆ.

"ಅಪ್ಪಾ, ತಂದೆ ತಾಯಿ ಮಾತು ಕೇಳಬೇಕಪ್ಪಾ. ತಂದೆ ತಾಯಿಗಿಂತ ಹೆಚ್ಚುಂಟೆ! ಮಾತೃ ದೇವೋಭವ ಪಿತೃದೇವೋಭವ ಅಂತಾರೆ. ಇಷ್ಟರ ಮೇಲೆ ಶಾಸ್ತ್ರ ಆಚಾರ ನೀತಿ ರೀತಿ ಎಲ್ಲವೂ ನೋಡಬೇಕು. ನಾಳೆ ನಿಮ್ಮ ಸುಖ ಮಾನ ಮರ್ಯಾದೆ–ಇವನ್ನೂ ಯೋಚಿಸಬೇಕಪ್ಪಾ" ಗಂಡಿನ ಕಡೆಯ ಜೋಯಿಸರು ಹೇಳುತ್ತ ಎದ್ದು ಹೋಗುತ್ತಾರೆ.

"ನೀವು ಹೇಳಿ ಶಾಸ್ತ್ರಿಗಳೆ" ಇವರು ನಮ್ಮ ಕಡೆ ಶಾಸ್ತ್ರಿಗಳಿಗೆ ಹೇಳುತ್ತಾರೆ.

"ಸಾರ್, ಸ್ವಲ್ಪ ಯೋಚಿಸಿ ನೋಡಿ ಎಲ್ಲಾನೂ" ಶಾಸ್ತ್ರಿಗಳು ಅಂಜುತ್ತ ಅಂಜುತ್ತ ಅನುಮಾನಿಸುತ್ತಾರೆ, ಅಪ್ಪ ಅಮ್ಮನ ಕಡೆಗೆ ನೋಡುತ್ತ.

"ಇಲ್ಲಿ ಕೊಡಿ ನಿಮ್ಮ ಮಂತ್ರದ ಪುಸ್ತಕಾನ!" ಇವರು ತಾಳ್ಮೆಗೆಟ್ಟು ಸಿಡಿಗುಟ್ಟುತ್ತ ಪುಸ್ತಕವನ್ನು ಕಿತ್ತುಕೊಳ್ಳುತ್ತಾರೆ. ಹಾಳೆ ತಿರುವುತ್ತಾರೆ ನೋಡುತ್ತ.

"ಎಲ್ಲಾದ್ರೂ ಹಾಳಾಗಿ ಹೋಗ್ಲಿ ಬಾರೇ... ಅವನು ನಮ್ಮ ಮಗನೇ ಅಲ್ಲ ಅಂದುಕೊಳ್ಳೋಣ. ಅಂದುಕೊಳ್ಳೋದೇನು. ಮಗ ಅಲ್ಲವೆ ಅಲ್ಲ. ಅಂಥೋನು. ಅವನು ಯಾವಾಗಲೂ ಹಾಗೇ. ಎಲ್ಲಾರದ್ದೂ ಒಂದು ದಾರಿಯಾದರೆ ಅವನದ್ದೇ ಒಂದು ದಾರಿ. ಹೋಗೋಣ ಬನ್ನಿ ಎಲ್ಲ...ಏನಾದರೂ ಮಾಡಿಕೊಳ್ಳಲಿ, ಏನಾದರೂ ಆಗಲಿ ಅವನು ಅವರು. ಮದುವೆ ನಮಗಿಷ್ಟವಿಲ್ಲ. ಆಗಕೂಡದು. ಒಪ್ಪೋದಿಲ್ಲ."

ಇವರ ತಂದೆ ತಾಯಿ ಬಂಧು ಬಳಗ ಹೊರಟು ಹೋಗುತ್ತಾರೆ. ನಮ್ಮ ಕಡೆಯಲ್ಲೂ ಬಹಳ ಜನ ಹೋಗಿದ್ದಾರೆ, ಹೋಗುತ್ತಿದ್ದಾರೆ. ಕಲ್ಯಾಣ ಮಂದಿರ ಖಾಲಿಖಾಲಿಯಾಗಿದೆ. ಉಳಿದುಳಿದವರೂ ಕುತೂಹಲಪೂರ್ತಿಗಾಗಿ ಇರಬೇಕು.

"ಹುಂ ಸಿಕ್ಕಿತು ನಾಲ್ಕನೆಯ ಹೆಜ್ಜೆಯ ಮಂತ್ರ 'ಓಂ...?' ಘಂಟಾಘೋಷವಾಗಿ ಓದುತ್ತಾರೆ."

"'ಓಂ...ಮಾಯೋಭವ್ಯಾಯ ಚತುಷ್ಪದೀ ಭವ ಸಾ ಮಾಮನುವ್ರತಾ ಭವ ವಿಷ್ಣು ಸ್ತ್ವಾ ನಯತು ಪುತ್ರಾನ್ ವಿಂದಾವಹೈ ಬಹೂನ್ ತೇ ಸಂತು ಜರದಷ್ಟಯಃ' ಅಂದರೆ 'ಸುಖದ ಪ್ರಾಪ್ತಿಗಾಗಿ ನಾಲ್ಕನೆಯ ಹೆಜ್ಜೆ ಇಡುವವಳಾಗು. ನನಗೆ ಅನುಕೂಲ ವ್ರತೆಯಾಗಿರು. ವ್ಯಾಪಕ ಪರಮಾತ್ಮನು ನಿನ್ನನ್ನು ಮುಂದುವರಿಸಲಿ. ಒಂದಕ್ಕಿಂತ ಹೆಚ್ಚು ಮಕ್ಕಳನ್ನು ಪಡೆಯೋಣ. ಅವರು ವೃದ್ಧಾಪ್ಯದ ವರೆಗೆ ಜೀವಿಸಿರುವವರು ಆಗಲಿ. ಅಂತ...ಇಡು ಮುಂದಿನ ಹೆಜ್ಜೆ–ನನ್ನೊಡನೆ" ಎನ್ನುತ್ತಾರೆ.

ಹೌದು, ಇದು ನಿಜ, ಈಗ ನಡೆಯುತ್ತಿರುವುದು ಕನಸಲ್ಲ, ನನ್ನ ಭ್ರಾಂತಿಯಲ್ಲ. ನನ್ನ ಎದುರಿನಲ್ಲಾಗುತ್ತಿರುವ ದೃಶ್ಯ ನಿಜ. ಜೀವನ ಮರೀಚಿಕೆಯಲ್ಲ, ನಿಜ ನಿಜ ನಿಜ. ಹಾಗೆಂದುಕೊಳ್ಳುತ್ತ ನಂಬಿಕೆ ಹುಟ್ಟಿಸಿಕೊಳ್ಳುತ್ತೇನೆ. ನಂಬುತ್ತೇನೆ. ಪೂರ್ತಿಯಾಗಿ ನಂಬುತ್ತೇನೆ. ಅನುಮಾನವಿಲ್ಲ, ಇನ್ನು.

ಇವರ ಆಜ್ಞೆಯನ್ನು ಪಾಲಿಸುತ್ತೇನೆ. ಇನ್ನೂ ದಿಙ್ಮೂಢರಾದ ಅಪ್ಪ ಅಮ್ಮ ಬೆರಗಾಗಿ ನೋಡುತ್ತಿರುವ ಸಭಿಕರ ಮುಂದೆ ಇವರೊಡನೆ ನಾಲ್ಕನೆಯ ಹೆಜ್ಜೆಯಿಡುತ್ತೇನೆ – ಸಾಮಾನ್ಯ ಗಂಡಂದಿರಿಗೂ ಇವರಿಗೂ ಎಷ್ಟು ಅಂತರ ಎಂದುಕೊಳ್ಳುತ್ತ. ★



ನಾಗರಿಕತೆ ಎಂದು ಪ್ರಾರಂಭವಾಯಿತೆಂದು ಗೊತ್ತೆ ? ತನಗೆ ಸೇರದಂಥದನ್ನು ಆಡಿದ, ಮಾಡಿದ ಇನ್ನೊಬ್ಬನನ್ನು ದೊಣ್ಣೆಯಿಂದ ಹೊಡೆದು ಮುಗಿಸಿಬಿಡುವುದನ್ನು ಬಿಟ್ಟು ಮನಸ್ಸಿ ಬೈದುಕೊಳ್ಳಲಾರಂಭಿಸಿದಂದಿನಿಂದ.

— ಜಾನ್ ಕೋಹೆನ್

ಮುಂದಿನ ಶತಮಾನದಲ್ಲಿ ಆದೇ ಆಧಾರವಂತೆ

# ಜಲಜನಕ ಇಂಧನವೇ?

ಎಂ. ಆರ್. ಶಾನಭಾಗ

ಇಂದು ಇಂಧನಕ್ಕೆ ಬೇಕಾಗುವ ಎಣ್ಣೆಯನ್ನು ದೊರಕಿಸುವದೇ ದೊಡ್ಡ ಸಮಸ್ಯೆಯಾಗಿದೆ. ಸದ್ಯ ಎಣ್ಣೆಯ ಕೊರತೆಯಿಂದಾಗಿ ಅದರ ಬೆಲೆ ಗಗನಕ್ಕೆ ಏರುತ್ತಿರುವುದನ್ನು ಕಂಡರೆ ಇನ್ನು ಕೆಲವು ವರ್ಷಗಳಲ್ಲಿ ಇಂಧನದ ಎಣ್ಣೆ ದೊರೆಯುವದೇ ಕಷ್ಟವಾಗಬಹುದು ಎಂದು ಅನ್ನಿಸುತ್ತದೆ. ಹಲವಾರು ಕೆಲಸಗಳು ಇಂಧನದ ಸಹಾಯವಿಲ್ಲದೆ ನಡೆಯಲಾರವು. ಆದ್ದರಿಂದ ಇಂಧನದ ಕೊರತೆಯನ್ನು ನಿವಾರಿಸಲು ಪರಿಹಾರ ಕಂಡುಹಿಡಿಯುವದು ತೀರ ಅವಶ್ಯ.

ಹೆಚ್ಚು ಪ್ರಮಾಣದಲ್ಲಿ ವ್ಯಾಪಿಸಿರುವ ನೀರು, ಬೆಳಕು ಮತ್ತು ಉಷ್ಣತೆಯನ್ನು ಒದಗಿಸುವದರಿಂದ ಇದನ್ನು ಇಂಧನವನ್ನಾಗಿ ಉಪಯೋಗಿಸಬಹುದು ಎಂದು ವಿಜ್ಞಾನಿ ಬ್ಯೂಲವೇರ್ನರು ನೂರು ವರ್ಷಗಳ ಹಿಂದೆಯೇ ನುಡಿದಿದ್ದರು. ಜಗತ್ತಿನಲ್ಲಿಯೇ ಎಣ್ಣೆ ಮತ್ತು ಇಂಧನ ಅನಿಲವು ನಶಿಸುತ್ತ ಹೋದ ಹಾಗೆ ಈ ವಿಚಾರವು ನಮಗೆ ಸರಿ ಎಂದು ತೋರುತ್ತದೆ. ಆದ್ದರಿಂದ ಹಲವು ವಿಜ್ಞಾನಿಗಳು ನೀರಿನಿಂದ ಹೆಚ್ಚಿನ ಪ್ರಮಾಣದಲ್ಲಿ ಸಸಾರಜನಕವನ್ನು ತಯಾರಿಸುವ ವಿಚಾರ ಮಾಡುತ್ತಿದ್ದಾರೆ ಎಂದು ಅಮೇರಿಕದ ಆಟಾಮಿಕ್ ಎನರ್ಜಿ ಕಮಿಶನ್ನಿನ ಓಕ್ ರಿಜ್ ಪ್ರಯೋಗ ಶಾಲೆಯ ಡೈರೆಕ್ಟರರಾದ ಎಲ್ವಿನ್ ವೇನ್‌ಬರ್ಗರು ಹೇಳುತ್ತಾರೆ. ಇಂಧನವಾದ ಜಲಜನಕವು ಜಗತ್ತಿಗೆ ಶಕ್ತಿಯನ್ನು ನೀಡುವ ಉಪವಸ್ತುವಾಗಬಹುದು.

ಈ ಅನಿಲವನ್ನು ಮೂಲ ಪದಾರ್ಥವಾದ ಕಲ್ಲಿದ್ದಲು, ಅಣುಶಕ್ತಿ ಮತ್ತು ನೀರಿನಿಂದ ಒದಗಿಸುವದರಿಂದ ಇದು ವಿದ್ಯುತ್ತಿನಂತೆ ಉಪಯುಕ್ತವಾಗುವದು ಮತ್ತು ಶಕ್ತಿಯನ್ನು ಒದಗಿಸುವದು. ಇತರ ಹಲವಾರು ಇಂಧನಗಳನ್ನು ತಯಾರಿಸಲ ಸಾಧ್ಯವಾಗಬಹುದು. ಆದರೂ ಜಲಜನಕವನ್ನು ಶ್ರೇಷ್ಠ ಇಂಧನವನ್ನಾಗಿ ತಯಾರಿಸುವ ಪ್ರಯತ್ನ ನಡೆದಿದೆ. ಹೆಚ್ಚಿನ ಪ್ರಮಾಣದಲ್ಲಿ ತಯಾರಿಸಿದ ನಂತರ ಪೆಟ್ರೋಲಿನಂತೆ ಇದು ಕೂಡ ಸುಲಭವಾದ ಬೆಲೆಗೆ ಸಿಗಬಹುದು. ವಿದ್ಯುತ್ತನ್ನು ಸಂಗ್ರಹಿಸಿಡಲು ಶಕ್ಯವಿಲ್ಲ. ಆದರೆ ಇದಕ್ಕೆ ಈ ತೊಂದರೆ ಇಲ್ಲ. ಅಲ್ಲದೆ ಇದು ಕಲ್ಮಶದಿಂದ ದೂರವಾದುದು. ಇದನ್ನು ಸುಟ್ಟ ನಂತರ ಕೇವಲ ಶಕ್ತಿ ಮತ್ತು ನೀರಿನ ಉಗಿ ಮಾತ್ರ ಉತ್ಪನ್ನವಾಗುವದು.

ಎಲ್ಲ ಮೂಲ ವಸ್ತುಗಳಿಂದ ಜಲಜನಕ ಅನಿಲವು ಹಗುರಾಗಿರುವದು. ಇದಕ್ಕೆ ವಾಸನೆ, ರುಚಿ ಮತ್ತು ಬಣ್ಣ ಇರುವುದಿಲ್ಲ. ಇದು ವಿಷಕಾರಿಯಲ್ಲ. ಜಗತ್ತಿನಲ್ಲಿ ಅತಿ ಹೆಚ್ಚು ಪ್ರಮಾಣದಲ್ಲಿ ದೊರೆಯುತ್ತದೆ; ಜೀವಿಸುವದಕ್ಕೆ ಅತ್ಯಂತ ಅವಶ್ಯವಾದುದು. ಆದರೆ ಹಲವರಿಗೆ ಜಲಜನಕವು ಮನುಷ್ಯನನ್ನು ನಾಶಪಡಿಸುವ ಪರಮಾಣು ಬಾಂಬಿನ ನೆನಪನ್ನೇ ಮಾಡಿಕೊಡುತ್ತದೆ. ಅಲ್ಲದೆ ಅನಿಲ ತುಂಬಿದ ವಾಯುನೌಕೆಗೆ ಬೆಂಕಿ ಹಿಡಿಯುವ ದೃಶ್ಯವೇ ಹಲವರಿಗೆ ಗೋಚರಿಸುತ್ತದೆ. ಸರಿಯಾಗಿ ಉಪಯೋಗಿಸದಿದ್ದರೆ ಎಲ್ಲ ಇಂಧನಗಳೂ ಅಪಾಯಕಾರಿ ಎಂದು ಚಿಕಾಗೋದ ಟೆಕ್ನಾಲಜಿ ಇನ್‌ಸ್ಟಿಟ್ಯೂಟಿನ ಅಸೋಸಿಯೇಟ್ ಡೈರೆಕ್ಟರರು ಹೇಳುತ್ತಾರೆ. ಸರಿಯಾಗಿ ಉಪಯೋಗಿಸಿದಲ್ಲಿ ಜಲಜನಕ ಅನಿಲವು ಪೆಟ್ರೋಲ್ ಮತ್ತು ಇತರ ಇಂಧನಗಳಷ್ಟು ಅಪಾಯಕಾರಿಯಲ್ಲ.

೧೯೫೦ ರ ವರೆಗೆ ೫೦% ಜಲಜನಕವಿದ್ದ ಟೌನ್ ಅನಿಲವನ್ನು ಮನೆ ಬಳಕೆಗಾಗಿ ಮತ್ತು ಕಾರ್ಖಾನೆಗಳಲ್ಲಿ ಉಪಯೋಗಿಸು-ತ್ತಿದ್ದರು. ಪೈಪ್ ಲೈನುಗಳ ಮುಖಾಂತರ ಈ ಅನಿಲವನ್ನು ಕಾರ್ಖಾನೆಗಳಿಗೆ ಒದಗಿಸುವದನ್ನು ಹಲವಾರು ಕಡೆ ಕಾಣಬಹುದು. ಕಳೆದ ೨೫ ವರ್ಷಗಳಿಂದ ಅಮೇರಿಕದಲ್ಲಿ ಅಣು ಮತ್ತು ಬಾಹ್ಯಾಕಾಶ ಕೆಲಸಗಳಿಗಾಗಿ ಜಲಜನಕ ಅನಿಲವನ್ನು ಉಪಯೋಗಿಸಲಾಗುತ್ತಿದೆ. ರಾಕೆಟನ್ನು ಪೃಥ್ವಿಯ ಆಕರ್ಷಣೆಯಿಂದ ಹೊರಗೆ ಕಳಿಸಲು ಇದನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಇದು ಇತರ ಇಂಧನದ ಅನಿಲಗಳಿಗಿಂತ ೧೪ ಪಟ್ಟು ಹಗುರವಾಗಿರುವದರಿಂದ ಹೊರಗೆ ಬಿದ್ದ ಕೂಡಲೇ ನೆಟ್ಟಗೆ ಮೇಲಕ್ಕೆ ಹೋಗುತ್ತದೆ. ಅಲ್ಲದೆ ಇತರ ಅನಿಲಗಳಂತೆ ಇದರ ಜ್ವಾಲೆಗಳು ಬಹಳ ಹೊತ್ತು ಹರಡಿ ಉರಿಯುವದಿಲ್ಲ.

ಈ ಅನಿಲವನ್ನು ತಯಾರಿಸಲು ವಿಶೇಷವಾದ ಯಂತ್ರೋಪಕರಣಗಳ ಅವಶ್ಯಕತೆ ಇಲ್ಲ ಇದನ್ನು ಈಗಾಗಲೇ ನಮ್ಮ ದೇಶದಲ್ಲಿ ತಯಾರಿಸಲಾಗಿದೆ. ಇಂಧನದಂತೆ ಉಪಯೋಗಿಸಬೇಕಾದರೆ ಇದನ್ನು ಹೆಚ್ಚಿನ ಪ್ರಮಾಣದಲ್ಲಿ ತಯಾರಿಸಬೇಕು. ಇದು ಕೇವಲ ಯಾಂತ್ರಿಕ ಕೆಲಸ. ಆದರೆ ಹೆಚ್ಚಿನ ಖರ್ಚಿಗೆ ಆಸ್ಪದ ಕೊಡುವಂಥದು. ಇದನ್ನು ತಯಾರಿಸಲು ಮೊಟ್ಟ ಮೊದಲಿಗೆ ವಿದ್ಯುತ್ತಿನ ಅನುಕೂಲತೆ ಬೇಕು. ಸಮುದ್ರದ ಸಮೀಪದಲ್ಲಿ ಇದಕ್ಕೆ ಬೇಕಾಗುವ ಯಂತ್ರವನ್ನು ಸಜ್ಜುಗೊಳಿಸಬೇಕು. ವಿದ್ಯುತ್ತನ್ನು ಸಮುದ್ರದ ನೀರಿನಲ್ಲಿ ಹಾಯಿಸಲಾಗಿ ನೀರಿನ ವಿಭಜನೆಯಾಗಿ ಜಲಜನಕ ಮತ್ತು ಪ್ರಾಣವಾಯು ಉತ್ಪನ್ನವಾಗುವದು. ಸಮುದ್ರ ತೀರದಲ್ಲಿ ತಯಾರಿಸಿದ ಅನಿಲವನ್ನು ಬೇಕಾದಲ್ಲಿಗೆ ಸಾಗಿಸಬಹುದು. ಮಣ್ಣಿನ ಅಡಿಯಲ್ಲಿ ಅಳವಡಿಸಿದ ಕೊಳವೆಯ ಮುಖಾಂತರ ಇದನ್ನು ಸಾಗಿಸಬಹುದು. ಈಗ ಅಮೇರಿಕದಲ್ಲಿ ಪ್ರೊಪೇನ್ ಅನಿಲವನ್ನು ಅಡಿಗೆಯ ಕೆಲಸಗಳಿಗೆ ಉಪಯೋಗಿಸಬಹುದು. ನೆಲದಡಿಯಲ್ಲಿಯೂ ಮತ್ತು ಹೆಚ್ಚು ತಣ್ಣಗೆ ಮಾಡಿದ ಟ್ಯಾಂಕುಗಳಲ್ಲಿಯೂ ಇದನ್ನು ಶೇಖರಿಸಬಹುದು.

ಸಣ್ಣ ಪ್ರಮಾಣದ ಇಂಧನದ ಅನಿಲಗಳ ಬದಲಾಗಿ ಜಲಜನಕವನ್ನು ಹಲವು ಕ್ಷೇತ್ರಗಳಲ್ಲಿ ಉಪಯೋಗಿಸಬಹುದು. ಹಲವು ಬಗೆಯ ಇಂಧನದ ಸೆಲ್ಲುಗಳಲ್ಲಿ ಇದನ್ನು ಈಗಾಗಲೇ ಉಪಯೋಗಿಸುತ್ತಾರೆ. ಯಂತ್ರಗಳಿಗೆ ಇಂಧನದ ಅನಿಲಗಳಂತೆ ಉಪಯೋಗಿಸಲು ಜಲಜನಕ ಬಹಳ ಉತ್ತಮ. ಕೆಲವು ಯಂತ್ರಗಳು ಬಹಳ ಬೇಗ ಪ್ರಾರಂಭವಾಗುತ್ತವೆ. ತಂಪು ಪ್ರದೇಶಗಳಲ್ಲಿ ಈ ಅನಿಲದ ಉಪಯೋಗ ಬಹಳ ಅವಶ್ಯ. ಇಂಧನದ ಸುಡುವಿಕೆಯಿಂದ ನಡೆಯುವ ಯಂತ್ರಗಳನ್ನು ಈ ಅನಿಲದಿಂದ ಕೆಲವು ಬದಲಾವಣೆಗಳೊಡನೆ ಸುಲಭವಾಗಿ ನಡೆಸಬಹುದು. ಈ ಮೊದಲು ಪೆಟ್ರೋಲಿನಿಂದ ನಡೆಯುತ್ತಿದ್ದ

ಪರಿವರ್ತಿಸಲು ಒಂದು ಯಂತ್ರಕ್ಕೆ ೧೫೦೦ ರೂಪಾಯಿಗಳಿದ್ದರೆ ಸಾಕು. ಹೊಸದಾಗಿ ಯಂತ್ರವನ್ನು ತಯಾರಿಸುವದಾದರೆ ಮೊದಲಿನ ಯಂತ್ರಕ್ಕೆ ಆದಷ್ಟೇ ಖರ್ಚು ಇದಕ್ಕೆ ಆಗುವದು.

ಈಗಾಗಲೇ ಜಲಜನಕದಿಂದ ನಡೆಯುವ ಕಾರನ್ನು ಯುರೋಪ್, ಅಮೇರಿಕಗಳಲ್ಲಿ ಪರೀಕ್ಷಿಸಲಾಗಿದೆ. ಅದರೊಡನೆ ಇರುವ ದೊಡ್ಡ ಸಮಸ್ಯೆ ಎಂದರೆ ಜಲಜನಕವನ್ನು ಸುರಕ್ಷಿತವಾಗಿ ಮತ್ತು ಪ್ರಾಯೋಗಿಕವಾಗಿ ಹೇಗೆ ಸಾಗಿಸಿ ಉಪಯೋಗಿಸಬಹುದೆಂಬುದೇ ಆಗಿದೆ. ಒಂದು ಲೀಟರ್ ಜಲಜನಕವು ೫೦ ಗ್ರಾಮಿನಷ್ಟು ತೂಗುವದಾದರೂ ದ್ರವ ಅನಿಲವು ಗಾತ್ರದಲ್ಲಿ ಹೆಚ್ಚಾಗಿರುವದು. ೧೬೦ ಗ್ಯಾಲನ್ ಪೆಟ್ರೋಲ್ ಸಾಗಿಸಲು ಬೇಕಾಗುವಷ್ಟು ಟ್ಯಾಂಕು ಕೇವಲ ೨೦ ಗ್ಯಾಲನ್ ಜಲಜನಕ ಸಾಗಿಸಲು ಬೇಕಾಗುವದು. ಇಂಥ ಒಂದು ಸುರಕ್ಷಿತ ಟ್ಯಾಂಕಿಗೆ ೧೫,೦೦೦ ರೂಪಾಯಿ ಬೆಲೆ ಇರುವದು. ಖಾಲಿ ಇದ್ದಾಗ ೯೦ ಕಿಲೋದಷ್ಟು ಭಾರವಾಗಿರುವುದು. ಅಲ್ಲದೆ ಎಷ್ಟು ಸುರಕ್ಷಿಸಿದರೂ ಈ ಅನಿಲವು ಆವಿಯಾಗಿ ತಪ್ಪಿಸಿಕೊಂಡು ಹೋಗುವದರಿಂದ ಕಾರಿನಲ್ಲಿ ಬಹಳ ಸಮಯದವರೆಗೆ ಸಂಗ್ರಹಿಸಿ ಉಪಯೋಗಿಸಲು ಬರುವಂತಿಲ್ಲ.

ಆದರೆ ಈ ಅನಿಲವು ವಿಮಾನದಲ್ಲಿ ಉಪಯೋಗಿಸುವ ಇಂಧನದ ಎಣ್ಣೆಗಿಂತ ೪೦% ಪ್ರಮಾಣದಷ್ಟು ಕಡಿಮೆ ಭಾರವಾಗಿರುವದರಿಂದ ಗಗನನೌಕೆಗಳಲ್ಲಿ ಉಪಯೋಗಿಸಲು ಬಹಳ ಉಪಯುಕ್ತ. ಅಲ್ಲಿದೇ ಹೆಚ್ಚು ಇಂಧನವನ್ನು ಒಯ್ಯಬಹುದು.

ಗಗನನೌಕೆಯು ಜಲಜನಕದ ಸಹಾಯದಿಂದ ಹಾರಾಟ ಮಾಡುವದನ್ನು ೧೯೫೬ರಲ್ಲಿ ವೈಟನೆಯವರು ಅಮೇರಿಕದಲ್ಲಿ ವಿವರಿಸಿದರು. ಗಗನನೌಕಾ ಕಂಪನಿಯ ನೈರೆಕ್ಟರರಾದ ರಿಚರ್ಡ್ ಮೂರೆಡಿಯು

ವರು, "ಈ ಅನಿಲವು ಸರಿಯಾಗಿ ದೊರೆತು, ತಯಾರಿಕೆಯು ಖರ್ಚಿನ ಕಡಿಮೆಯಾಗಿ ಸಂರಕ್ಷಣೆಯು ತೃಪ್ತಿಕರವಾದರೆ ಗಗನಯಾತ್ರೆಯಲ್ಲಿ ಇದರ ಉಪಯೋಗವು ಬಹಳ ಆಕರ್ಷಣೀಯವಾಗುವದು. ಆದರೆ ಹೀಗಾಗುವದಕ್ಕಿಂತ ಮುಂಚೆ ಹಲವಾರು ಸಮಸ್ಯೆಗಳನ್ನು ಬಿಡಿಸಬೇಕಾಗುವುದು" ಎನ್ನುತ್ತಾರೆ.

ಇಷ್ಟು ಶ್ರೇಷ್ಠವಾದ ಈ ಇಂಧನವು ಇತರ ಇಂಧನಗಳಂತೆ ಬಹಳ ಕ್ರಯವುಳ್ಳದ್ದಾಗಿದೆ. ಈಗ ತಯಾರಿಸುವ ಈ ಇಂಧನವು ಪೆಟ್ರೋಲಿನ ಮೂರು ಪಾಲಿನಷ್ಟು ಕ್ರಯವನ್ನು ಹೊಂದಿದೆ. ಆದರೆ ಅರ್ಥಶಾಸ್ತ್ರಜ್ಞರ ಅಭಿಪ್ರಾಯದಂತೆ ಹೆಚ್ಚು ಪ್ರಮಾಣದಲ್ಲಿ ಜಲಜನಕವು ತಯಾರಿಸಲ್ಪಟ್ಟು ಈಗ ದೊರೆಯುವ ಇಂಧನವು ಕಡಿಮೆಯಾದ ಹಾಗೆ ಬೆಲೆಯಲ್ಲಿಯ ಅಂತರವು ಕಡಿಮೆಯಾಗುವದು.

ನೀರಿನಿಂದ ಜಲಜನಕವನ್ನು ಬೇರ್ಪಡಿಸಬೇಕಾದರೆ ಬಹಳ ವಿದ್ಯುತ್ ಶಕ್ತಿ ಬೇಕು. ಅಂದರೆ ಬಹಳ ಹಣ ಖರ್ಚು ಮಾಡಬೇಕಾಗುವದು. ಹಾಗಾದರೆ ಜಲಜನಕ ತಯಾರಿಸುವ ಬದಲಾಗಿ ನೇರವಾಗಿ ವಿದ್ಯುತ್‌ಶಕ್ತಿಯನ್ನೇ ಬಳಸಬಾರದೇಕೆಂದು ಅನಿಸಬಹುದು. ಆದರೆ ಇದು ಕಷ್ಟಸಾಧ್ಯ. ಯಾಕೆಂದರೆ ವಿದ್ಯುತ್ತನ್ನು ಸಂಗ್ರಹಿಸಿ ಒಂದು ಕಡೆಯಿಂದ ಇನ್ನೊಂದು ಕಡೆ ಸಾಗಿಸುವದು ಬಹಳ ಕಷ್ಟ. ಇನ್ನೊಂದೊಂದರೆ ವಿಮಾನ ಹಾಗೂ ಕಾರುಗಳನ್ನು ಇಂಧನದಿಂದ ಸುಲಭವಾಗಿ ನಡೆಸಬಹುದು. ಈ ದಿಶೆಯಲ್ಲಿ ಜಲಜನಕವು ಹೆಚ್ಚು ಉಪಯುಕ್ತವಾಗುವದು.

ಪ್ರಾರಂಭದಲ್ಲಿ ದೊಡ್ಡ ಪ್ರಮಾಣದಲ್ಲಿ ಜಲಜನಕ ತಯಾರಿಸುವದು ಬಹಳಷ್ಟು ಖರ್ಚಿಗೆ ಆಸ್ಪದವಾಗುವದರಿಂದ ಈ ಕೂಡಲೇ ಜಲಜನಕ ಯುಗವು ಪ್ರಾರಂಭವಾಗುವದು ಕಷ್ಟಸಾಧ್ಯ. ಆದರೆ ಸದ್ಯ ಇದು ಇಂಧನಕ್ಕೆ ಸಹಾಯಕ ವಸ್ತುವಾಗಬಹುದು. ಈಗಾಗಲೇ ಪೆಟ್ರೋಲಿನ ಸಂಗಡ ಜಲಜನಕದ ಉಪಯೋಗವನ್ನು ನಾನಾ ಎಂಜಿನಿಯರರು ಮಾಡಿಕೊಳ್ಳುತ್ತಿದ್ದಾರೆ. ೨೧ನೇ ಶತಮಾನದ ಪ್ರಾರಂಭದಿಂದಲೇ ಎಲ್ಲ ಯಂತ್ರಗಳೂ ಜಲಜನಕದ ಸಹಾಯದಿಂದ ನಡೆಯುವದೆಂದು ಆಶ ವ್ಯಕ್ತಪಡಿಸುತ್ತಾರೆ. ಆ ಸಮಯದಲ್ಲಿ ಪೆಟ್ರೋಲನ್ನು ರಾಸಾಯನಿಕ ಕಚ್ಚಾ ವಸ್ತುವಾಗಿ ಬಹಳವಾಗಿ ಉಪಯೋಗಿಸಬಹುದು (ಪೆಟ್ರೋಲಿನ ವಸ್ತುಗಳು ಗ್ಲಾಸು, ಧಾಪು, ರಾಸಾಯನಿಕ ಬಣ್ಣಗಳು ಮತ್ತು ಔಷಧಿಗಳು).

೨೧ನೇ ಶತಮಾನದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜಲಜನಕ ಉತ್ಪನ್ನವಾಗಿ ಪೈಪ್‌ಲೈನುಗಳು ವ್ಯವಸ್ಥಿತಗೊಂಡು ಜಲಜನಕಯುಗವು ಬಂದೇ ಬರುವದು. ಈಗಾಗಲೇ ಅಮೇರಿಕೆಯು ಜಗತ್ತಿನಲ್ಲಿ ಉಪಯೋಗವಾಗುವ ಜಲಜನಕದ ಮೂರರಲ್ಲಿ ಒಂದು ಪಾಲನ್ನು ಉಪಯೋಗಿಸುತ್ತಾರೆ. ೧೯೮೦ ರಷ್ಟರಲ್ಲಿ ಈ ದೇಶವು ಉಪಯೋಗಿಸುವ ಶಕ್ತಿಯ ಪ್ರಮಾಣವು ಇದರ ಎರಡರಷ್ಟಾಗುವದು. ಈಗ ಉಪಯೋಗಿಸುತ್ತಿರುವ ಇಂಧನವು ನಶಿಸಿ ಅಪವಿತ್ರತೆಯನ್ನು ಹೊಂದಿ ಇಂಧನದ ಕೊರತೆಯುಂಟಾದಾಗ ಇದಕ್ಕೆ ಜಲಜನಕವೊಂದೇ ಪರಿಹಾರ ನೀಡುವದು ಎಂಬ ಉಜ್ವಲ ಆಶಾವಾದವು ಕಂಡುಬರುತ್ತದೆ. ●

(ಆಧಾರ)



ಜೆಲ್‌ಗ್ರೇಡಿನ ಸರ್ಬಿಯನ್ ಭಾಗದ ಜನನಿಬಿಡ ಮಾರುಕಟ್ಟೆಯಲ್ಲಿ ಬ್ರೊಜೊಮಿರ್ ಅಂಟಕ್ ಎಂಬ ೪೯ ವರ್ಷದ ವ್ಯಕ್ತಿ ಮತ್ತೊಬ್ಬನ ಕಿಸೆಯಲ್ಲಿನ ಹಣ ಕದಿಯುತ್ತಿದ್ದಾಗಲೇ ಬಂಧಿಸಲ್ಪಟ್ಟ. ಪೋಲೀಸರು ಆತ ಕಿಸೆಗೆ ಕೈ ಹಾಕಿದ್ದಂತೆಯೆ ಠಾಣೆಗೆ ಎಳೆದೊಯ್ದರು. ಆತ ಕೈ ಹಾಕಿದ್ದು ತನ್ನ ಅಣ್ಣನ ಕಿಸೆಗೇ ಎಂಬುದು ಗೊತ್ತಾದಾಗ ಪಶ್ಚಾತ್ತಾಪಪಟ್ಟ. ಗದ್ದಲದಲ್ಲಿ ಆತ ತನ್ನಣ್ಣನನ್ನು ಗುರುತಿಸಿರಲಿಲ್ಲ. ಆದರೆ ಅಣ್ಣ ಪೋಲೀಸರೆದುರು, "ನನ್ನ ಕೈ ಖಾಲಿ ಇರಲಿಲ್ಲ—ಕಿಸೆಯಲ್ಲಿ ಹಣವಿದೆ. ತೆಗೆದುಕೋ ಎಂದು ಹೇಳಿದ್ದೆ" ಎಂದು ಹೇಳಿದ್ದರಿಂದ ಬಿಡುಗಡೆಹೊಂದಿದ.

# ನಿಮ್ಮ ಶಬ್ದಭಾಂಡಾರ ಬೆಳೆಸಿರಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

**ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.**

೧ **ಅಪ್ರಮತ್ತ**
(ಅ) ಅಜಾಗರೂಕನಲ್ಲದ (ಆ) ಕೆಲಸಕ್ಕೆ ಬಾರದ (ಇ) ಅಳತೆಗೆ ಸಿಕ್ಕದ (ಈ) ಸಂದರ್ಭಕ್ಕೆ ಸರಿ ಹೋಗದ

೨. **ಅಪಮಾರ್ಗ**
(ಅ) ನೀರಿನ ದಾರಿ (ಆ) ಗುರಿ ತಪ್ಪಿದ್ದು (ಇ) ಇಳುಕಲು (ಈ) ಕೆಟ್ಟ ದಾರಿ

೩. **ಕುಶಾಗ್ರತೆ**
(ಅ) ಉಡಾಳತನ (ಆ) ಬೆಲೆ ಏರಿಕೆ (ಇ) ಹರಿತ (ಈ) ಭಯ

೪. **ಕುಡುಕು**
(ಅ) ನೀರು ಹನಿ (ಆ) ದೋಟಿ (ಇ) ತಟ್ಟನೆ ಹಿಡಿ (ಈ) ಕುಟ್ಟು

೫. **ನೀರೆ**
(ಅ) ಹೆಂಡ (ಆ) ನದಿ (ಇ) ಸುಂದರಿ (ಈ) ತರುಣನ ಹೆಂಡತಿ

೬. **ನೀರಾಜನ**
(ಅ) ಕೊಳವೆ (ಆ) ಆರತಿ (ಇ) ಪ್ರಜಾಪ್ರಭುತ್ವ (ಈ) ಸಮುದ್ರ

೭. **ಯಾಯುವಾರ**
(ಅ) ಕೊಳವೆ (ಆ) ಹೋಗಿಬರುವುದು (ಇ) ಲಾಭ (ಈ) ವೆಚ್ಚ

೮. **ಯಾವಜ್ಜೀವ**
(ಅ) ಅಲ್ಪಾಯುಷ್ಯ (ಆ) ಕ್ಷುದ್ರಜೀವಿ (ಇ) ಬೆಳಗ್ಗೆ (ಈ) ಬದುಕಿರುವವರೆಗೆ

೯. **ಸದರು**
(ಅ) ಮನೆ (ಆ) ಒಪ್ಪಿಗೆ (ಇ) ನೋಟ (ಈ) ಮೇಲಿನದು

೧೦. **ಸತಾಯಿಸು**
(ಅ) ನೂರು ವರ್ಷ ಬಾಳು (ಆ) ಅಧಿಕಾರ ನಡೆಸು (ಇ) ಪೀಡಿಸು (ಈ) ಏಳು ಪಾಲು ಮಾಡು

೧೧. **ಹಿಸೆ**
(ಅ) ಒಂದು ಜಾತಿಯ ದನ (ಆ) ಪಾಲು (ಇ) ಹರಿ (ಈ) ಎಳೆಯ

೧೨. **ಹಗರಣ**
(ಅ) ನಗೆಗೇಡು (ಆ) ಒಂದು ತಿಂಡಿ (ಇ) ಬದಲಾವಣೆ (ಈ) ಕಟ್ಟಿ ಹಾಕುವುದು.

# 'ಶಬ್ದಭಾಂಡಾರ'ದ ಸರಿಯಾದ ಅರ್ಥಗಳು

೧. **ಅಪ್ರಮತ್ತ** (ಅ) ಅಜಾಗರೂಕನಲ್ಲದ, ಜಾಗ್ರತೆಯುಳ್ಳ, ಎಚ್ಚರವುಳ್ಳ. ಉದಾ:— ಅಪ್ರಮತ್ತನಾಗಿ ಅಭ್ಯಾಸ ಮಾಡು. [ಸಂ. ಅ = ಅಲ್ಲ + ಪ್ರ = ಹೆಚ್ಚು + ಮತ್ತ = ತಲೆ ಕೆಟ್ಟ]

೨. **ಅಪಾಮಾರ್ಗ** (ಈ) ಕೆಟ್ಟ ದಾರಿ, ಕೆಟ್ಟ ನಡತೆ, ದುರ್ಮಾರ್ಗ, ದಾರಿ ಕೆಟ್ಟ. ಉದಾ:— ಅಪಾಮಾರ್ಗನಾದ ಮಗ. [ಸಂ. ಅಪ = ಸಲ್ಲದ + ಮಾರ್ಗ = ದಾರಿ]

೩. **ತುಟಾಗ್ರತೆ** (ಅ) ಬೆಲೆ ಏರಿಕೆ, ದುರ್ಲಭವಾಗುವಿಕೆ, ಕೊರತೆ, ತುಟ್ಟಿಯಾಗುವುದು. ಉದಾ:— ಸಕ್ಕರೆಯ ತುಟಾಗ್ರತೆ. [ವ್ಯುತ್ಪತ್ತಿ ಅಸ್ಪಷ್ಟ ತುಟ್ಟಿ – ಯಿಂದ]

೪. **ತುಡುಕು** (ಇ) ತಟ್ಟನೆ ಹಿಡಿ, ಹಿರಿ; ಆಕ್ರಮಣ ಮಾಡು ಉದಾ: — ಶಸ್ತ್ರವನ್ನು ತುಡುಕಿ ಮೇಲೆ ಬಿದ್ದನು [ದೇಶ್ಯ]

೫. **ನೀರೆ** (ಇ) ಸುಂದರಿ, ಚೆಲುವೆ; ಪ್ರೇಯಸಿ, ನಲ್ಲೆ, ಉದಾ:— ನಟರಿಗೆ ನೀರೆಯರು ತೊಡಕಿಕೊಳ್ಳುತ್ತಾರೆ.

೬. **ನೀರಾಜನ** (ಅ) ದೇವರಿಗೆ ಅಥವಾ ರಾಜರಿಗೆ ಬೆಳಗುವ ಆರತಿ. ಉದಾ:— ನೀರಾಜನದೊಂದಿಗೆ ಪೂಜೆ ಮುಗಿಯಿತು. [ಸಂ. ನಿರ್ = ವಿಶೇಷವಾಗಿ, ರಾಜನ = ಪ್ರಕಾಶಿಸುವುದು]

೭. **ಯಾಯವಾರ** (ಅ) ಭಿಕ್ಷೆ, ತಿರುಪೆ ಉದಾ:— ಯಾಯವಾರದ ದಾಸನಿವನು. [ಸಂ. ಯಾಯಾವರ = ಬೈರಾಗಿ]

೮. **ಯಾವಜ್ಜೀವ** (ಈ) ಬದುಕಿರುವವರೆಗೆ, ಜೀವಮಾನ ಪರ್ಯಂತ. ಉದಾ:— ಯಾವಜ್ಜೀವ ಸುಖವಾಗಿರು. [ಸಂ. ಯಾವತ್ = ವರೆಗೆ + ಜೀವ = ಬದುಕು ]

೯. **ಸದರು** (ಈ) ಮೇಲಿನದು; ಶ್ರೇಷ್ಠ ನ್ಯಾಯಾಲಯ; ಮುಂದಾಳು; ತಲೆಬರೆಹ [ಅರಬ್ಬಿ, ಸದ್ರ್ = ಮುಂದಿನದು, ಮುಖ್ಯವಾದ್ದು.]

೧೦. **ಸತಾಯಿಸು** (ಇ) ಪೀಡಿಸು, ಕಾಡು, ತೊಂದರೆ ಕೊಡು, ಬಹಳ ಕಾಲ ಉಪದ್ರವ ಕೊಡು. ಉದಾ:— ಪ್ರಜೆಗಳನ್ನು ಸತಾಯಿಸಿದ. [ಹಿಂದಿ, ಸತಾನಾ = ಪೀಡಿಸುವುದು.]

೧೧. **ಹಿಸೆ** (ಅ) ಪಾಲು, ಭಾಗ, ಅಂಶ. ಉದಾ;— ಅಣ್ಣ ತಮ್ಮಂದಿರು ಹಿಸೆ ಮಾಡಿಕೊಂಡರು. [ಅರಬ್ಬಿ, ಹಿಸ್ಸಾಹ್]

೧೨. **ಹಗರಣ** (ಅ) ನಗೆಗೇಡಿನ ಪ್ರಸಂಗ; ಕೆಲಸಕ್ಕೆ ಬಾರದ ಹರಟೆ, ಮಾತು. ಉದಾ:— ಲೋಕಸಭೆಯಲ್ಲಿ ಹಗರಣವಾಯಿತು. [ಸಂ. ಪ್ರಕರಣ = ಒಂದು ಬಗೆಯ ಹಾಸ್ಯ ನಾಟಕ]

●

## ನಿಮ್ಮ ಶಬ್ದಶಕ್ತಿಯ ತರಗತಿ

**ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.**

| | | |
|---|---|---|
| ೬—೮ ಸರಿಯಿದ್ದರೆ | ... | ಸಾಧಾರಣ |
| ೯—೧೦ ,, | ... | ಉತ್ತಮ |
| ೧೧—೧೨ ,, | ... | ಅತ್ಯುತ್ತಮ |

●

# "ಅಮ್ಮಾ, ತುಂಬಾ ಉರೀತಾಯಿದೆ, ತುರಿಸ್ತಾಯಿದೆ, ನೋಡಬಾರಮ್ಮಾ."

**ನೈಸಿಲ್**
ಬಳಸಿರಿ.
ಶೀಘ್ರ ಉಪಶಮನಕ್ಕಾಗಿ
ತ್ವಚೆ ಉರಿತದ ಪಾಡರ್.




2 ಬಗೆಯ
ಡಬ್ಬಿಗಳಲ್ಲಿ ಲಭ್ಯ
'ನೀಲಿ' ಮತ್ತು
'ಚಂದನ್'.

***ನೈಸಿಲ್ ತನ್ನಿರಿ ತ್ವಚೆ ಉರಿತವನ್ನು ಮರೆಯಿರಿ.***



ಔಷಧಿಯುಕ್ತ ನೈಸಿಲ್:

1. ಹೆಚ್ಚಿನ ಬಿಸಿಯುಸಿರನ್ನು ತಡೆಯುತ್ತದೆ.
2. ಬೆವರನ್ನು ಹೀರಿಕೊಳ್ಳುತ್ತದೆ.
3. ದುರ್ವಾಸನೆ ಕೊಡುವ ಕ್ರಿಮಿಗಳನ್ನು ನಾಶಮಾಡುತ್ತದೆ.
4. ತ್ವಚೆಯನ್ನು ಸಂತಯಿಸುತ್ತದೆ.

CASGLN-4 152 KAN

ಅದು ಈಗ ವಿಜ್ಞಾನಿಗಳಿಗೇ
ತಲೆನೋವನ್ನು ಉಂಟುಮಾಡುತ್ತಿದೆ

# ಆಸ್ಪಿರಿನ್ ಸಮಸ್ಯೆ

**ಡಾ. ಜಿ. ಎ ಗೋವಿಂದ**

ಪ್ರಾಯಶಃ ಆಸ್ಪಿರಿನ್ನಿನಷ್ಟು ಹಳೆಯ ಔಷಧಿ ಜಗತ್ತಿನಲ್ಲಿ ಬೇರಾವುದೂ ಇಲ್ಲ. ಆಸ್ಪಿರಿನ್ ಸ್ಯಾಲಿಸಿಲೇಟ್ ಗುಂಪಿಗೆ ಸೇರಿದ ಔಷಧ. ವಿಲ್ಲೊ ಮರಗಳ ತೊಗಟೆಯಲ್ಲಿ ಇದು ಧಾರಾಳವಾಗಿರುತ್ತದೆ. ಶಿಲಾಯುಗದಷ್ಟು ಪ್ರಾಚೀನಕಾಲದಲ್ಲಿಯೆ ಮಾನವ ಈ ಗಿಡದ ತೊಗಟೆಯನ್ನು ತಿಂದು ನೋವನ್ನು ನಿವಾರಿಸಿಕೊಳ್ಳುತ್ತಿದ್ದನೆಂದು ಹೇಳಲಾಗುತ್ತಿದೆಯಾದರೂ ಇದನ್ನು ಬಳಸಿದ ಮೊದಲ ಐತಿಹಾಸಿಕ ದಾಖಲೆ ಸಿಗುವುದು ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಲ್ಲಿ. ಆಗ ಜೀವಿಸಿದ್ದ ಹಿಪ್ಪೊಕ್ರೇಟಸ್ ಪ್ರಸವವೇದನೆಯಿಂದ ಬಳಲುವವರಿಗೆ ಈ ಮರದ ತೊಗಟೆಯನ್ನು ಕೊಟ್ಟು ನೋವನ್ನು ಶಮನಗೊಳಿಸಬಹುದು ಎಂದು ಬರೆದಿದ್ದಾನೆ. ಅರ್ಥಾತ್ ಕೇವಲ ಐತಿಹಾಸಿಕ ಆಧಾರಗಳ ಮೇಲಿನಿಂದ ಹೇಳುವುದಾದರೂ ಆಸ್ಪಿರಿನ್ನಿನ ಇತಿಹಾಸ ಎರಡು ಸಾವಿರ ವರ್ಷಕ್ಕೂ ಹಿಂದೆ ಓಡುತ್ತದೆ ಎಂದಾಯಿತು.

ಇಷ್ಟು ಹಳೆಯ ಔಷಧವಾದರೂ ಇದು ಬಹು ಚರ್ಚಾಸ್ಪದವಾಗಿರುವುದರಿಂದ ತಜ್ಞರಿಗೆ ಈ ಔಷಧ ಜಿಜ್ಞಾಸೆಯ ದೃಷ್ಟಿಯಿಂದ ನಿತ್ಯನೂತನವಾಗಿ ತೋರುತ್ತಿದೆ. ಆಸ್ಪಿರಿನ್ನಿನ ಹೊಸ ಹೊಸ ಗುಣಧರ್ಮಗಳು ಬೆಳಕಿಗೆ ಬಂದಂತೆಲ್ಲ ವೈದ್ಯಕೀಯ ವಲಯಗಳಲ್ಲಿ ಚರ್ಚೆಯ ಅಲೆಗಳು ಹುಟ್ಟಿಕೊಂಡು ಕ್ಲಿಷ್ಟ ಸಂಶೋಧನೆಗಳಲ್ಲಿ ತೊಡಗಿರುವ ವಿಜ್ಞಾನಿಗಳಿಂದ ಹಿಡಿದು ಯಾವುದನ್ನೂ ಅಷ್ಟಾಗಿ ತಲೆಗೆ ಹಚ್ಚಿಕೊಳ್ಳದ ಸಾಮಾನ್ಯ ಜನತೆಯವರೆಗೂ ವಿಶಾಲವಾಗಿ ಜಗತ್ತಿನಾದ್ಯಂತ ಪಸರಿಸುತ್ತವೆ.

ಇದರರ್ಥ ಎರಡು ಸಾವಿರ ವರ್ಷಗಳಿಂದಲೂ ಈ ಔಷಧಿ ಜನಪ್ರಿಯವಾಗಿದೆಯೆಂದಾಗಲಿ ಚರ್ಚಾಸ್ಪದವಾಗಿದೆ ಎಂದಾಗಲಿ ಅಲ್ಲ. ಆಸ್ಪಿರಿನ್ನಿನ ಇತಿಹಾಸವನ್ನು ಸ್ವಲ್ಪ ತೆರೆದು ನೋಡಿದರೂ ಇದು ಒಮ್ಮೆಲೆ ಪ್ರಸಿದ್ಧಿಗೆ ಬಂದು ಮುಂದೆ ಅದಾವ ಕಾರಣದಿಂದಲೋ ಜನಮಾನಸದಿಂದ ಮಾಯವಾಗಿ ಮುಂದೆ ಮತ್ತೆ ಉಚ್ಛ್ರಾಯಕ್ಕೆ ಬಂದದ್ದು ಕಾಣುತ್ತದೆ. ಉದಾಹರಣೆಗಾಗಿ ಕಳೆದ ಶತಮಾನದಲ್ಲಿ ಜೀವಿಸಿದ್ದ ಜರ್ಮನ್ ವಿಜ್ಞಾನಿ ಚಾರ್ಲ್ಸ್ ಗೆರ್ಹಾರ್ಟನ ಪ್ರಕರಣವನ್ನೇ ತೆಗೆದುಕೊಳ್ಳಿ. ವಿಲ್ಲೊಮರದ ತೊಗಟೆಯಲ್ಲಿರುವುದೇ [illegible]

ಬಹುಕಾಲದ ಹಿಂದೆಯೆ ತಿಳಿದಿದ್ದರೂ ಆಸ್ಪಿರಿನ್ನನ್ನು ಕೃತಕವಾಗಿ ತಯಾರಿಸುವುದನ್ನು ಕಂಡು ಹಿಡಿದಾತ ಚಾರ್ಲ್ಸ್ ಗೆರ್ಹಾರ್ಟ್ ಇವನು ೧೮೫೩ರಲ್ಲಿ ಪ್ರಯೋಗಾಲಯದಲ್ಲಿ ಪ್ರಥಮತಃ ಆಸ್ಪಿರಿನ್ನನ್ನು ತಯಾರಿಸಿ ಪ್ರಸಿದ್ಧಿಯನ್ನು ಪಡೆದವನಾದರೂ ಯಾವ ಕಾರಣದಿಂದಲೋ ಮುಂದೆ ಅನಾಮಧೇಯನಾಗಿ ಉಳಿದ. ಅವನೊಂದಿಗೆ ಅವನ ಸಂಶೋಧನೆಯೂ ಮೂಲೆಗೆ ಬಿತ್ತು. ಕಳೆದ ಶತಮಾನ ಕೊನೆಗೊಳ್ಳುವಾಗ ಜರ್ಮನಿಯ 'ಫ್ರೆಡರಿಕ್ ಬೇಯರ್ ಆ್ಯಂಡ್ ಕಂಪನಿ'ಯ ಫೆಲಿಕ್ಸ್ ಹಾಫ್‌ಮನ್ ಎಂಬಾತ ಅವನ ಸಂಶೋಧನೆಯನ್ನು ಮತ್ತೆ ಬೆಳಕಿಗೆ ತಂದಾಗ ಆಸ್ಪಿರಿನ್ನು ಮತ್ತೆ ಉಚ್ಛ್ರಾಯಕ್ಕೆ ಬಂತು.

ಅಂದಿನಿಂದ ಪೇಟೆಯಲ್ಲಿ ಆಸ್ಪಿರಿನ್ ಮಾತ್ರೆಗಳು ಸುಲಭವಾಗಿ ಲಭ್ಯವಾಗತೊಡಗಿ ಈ ಮಾತ್ರೆಗಳು ಸಾಮಾನ್ಯವಾಗಿ ಬಳಕೆಯಾಗುವ ಇತರ ಮಾತ್ರೆಗಳ ಸಾಲಿಗೆ ಸೇರಿದ್ದರಿಂದ ಇದು ಜನಪ್ರಿಯ ಮಾತ್ರೆಯಾಗಿ ಉಳಿಯಿತೇ ಹೊರತು ಚರ್ಚಾಸ್ಪದ ಮಾತ್ರೆಯಾಗಿ ಉಳಿಯಲಿಲ್ಲ. ಈ ಶತಮಾನದ ನಾಲ್ಕನೆಯ ದಶಕದಲ್ಲಿ ಲಾರೆನ್ಸ್ ಕ್ರ್ಯಾವೆನ್ ಎಂಬ ಅಮೇರಿಕದ ಡಾಕ್ಟರನೊಬ್ಬ ಆಸ್ಪಿರಿನ್ನಿನ ಸೇವನೆಗೂ ಹೃದಯಾಘಾತಕ್ಕೂ ಸಂಬಂಧವಿರಬಹುದೆಂದು ಪ್ರಕಟಿಸಿದಾಗ ಆಸ್ಪಿರಿನ್ ಮಾತ್ರೆ ತಜ್ಞ ವಲಯಗಳಲ್ಲಿ ಜಿಜ್ಞಾಸೆಯನ್ನು ಕೆರಳಿಸಿತು.

ವೈದ್ಯಕೀಯ ವಲಯಗಳಲ್ಲಿ ಇಂದು ಆಸ್ಪಿರಿನ್ ಒಂದು ಚರ್ಚಾಸ್ಪದ ವಸ್ತು. ಸಾಮಾನ್ಯವಾಗಿ ಮಾತ್ರೆಗಳಲ್ಲೆಲ್ಲ ತೀರಾ ನಿರಪಾಯಕರವಾದದ್ದೆಂದರೆ ಆಸ್ಪಿರಿನ್ನು. ಇದರ ೪೩೦ ಮಾತ್ರೆಗಳನ್ನು ಸೇವಿಸಿಯೂ ಬದುಕಿದವರಿದ್ದಾರೆ. ಹಾಗೆಯೆ ಮೂರೇ ಮೂರು ಮಾತ್ರೆಗಳನ್ನು ಸೇವಿಸಿ ಪ್ರಾಣ ಕಳೆದು ಕೊಂಡವರೂ ಇದ್ದಾರೆ. ಅಮೇರಿಕದ ಮೇಯೋ ಕ್ಲಿನಿಕ್ಕಿನ ತಜ್ಞರ ಒಂದು ತಂಡ ದೀರ್ಘಕಾಲಿಕ ಪರಿಶೀಲನೆಯ ನಂತರ ನೋವು ನಿವಾರಣೆಯಲ್ಲಿ ಬಾಯಿಯ ಮೂಲಕ ಸೇವಿಸುವ ಔಷಧಗಳಲ್ಲಿ ಆಸ್ಪಿರಿನ್ನಿಗಿಂತ ಮಿಗಿಲಾದ ಔಷಧವಿಲ್ಲವೆಂದು ಸಾರಿತು. ಇದನ್ನು ... ಕೊನೆಗೊಳಿಸುವುದರಿಂದ ಆಸ್ಪಿರಿನ್ನಿನದು ಎತ್ತಿದ ಕೈ. ಜ್ವರವನ್ನು ನಿವಾರಿಸುವಲ್ಲಿ ಇದು ಎಷ್ಟು ಪ್ರಭಾವಶಾಲಿಯೆಂದರೆ ಇತರ ಜ್ವರ ನಿವಾರಕಗಳು ಎಷ್ಟು ಪರಿಣಾಮಕರವಾಗಿವೆ ಎಂಬುದನ್ನು ಲೆಕ್ಕ ಹಾಕುವಾಗ ತಜ್ಞರು ಅದನ್ನು ಆಸ್ಪಿರಿನ್ನಿನ ಪರಿಣಾಮದೊಡನೆ ಅಳೆದು ನೋಡುತ್ತಾರೆ. ಸಂಧಿವಾತಕ್ಕೆ ಇಂದು ಪೇಟೆಯಲ್ಲಿ ಅನೇಕ ಔಷಧಗಳು ಲಭ್ಯವಿದ್ದರೂ ಇದು ಉರಿಯೂತವನ್ನು ಬಹು ಶೀಘ್ರವಾಗಿ ಹೋಗಲಾಡಿಸುವುದರಿಂದ ಅದನ್ನು ಸಂಧಿವಾತದ ಚಿಕಿತ್ಸೆಯಲ್ಲೂ ಬಳಸುವುದಿದೆ. ಆದರೆ ಇದು ಚಟಕಾರಕವಲ್ಲ. ಕೆಲವು ಔಷಧಗಳನ್ನು ಕೆಲಕಾಲ ತೆಗೆದುಕೊಂಡರೆ ಅವು ದೇಹಕ್ಕೆ ಒಗ್ಗಿಕೊಂಡುಬಿಡುತ್ತವೆ. ಹೀಗಾಗಿ ಇಚ್ಛಿತ ಪರಿಣಾಮವುಂಟಾಗಬೇಕಾದರೆ ಹೆಚ್ಚು ಹೆಚ್ಚು ಮಾತ್ರೆಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಆದರೆ ಆಸ್ಪಿರಿನ್ನಿನ ಮಾತು ಹಾಗಲ್ಲ. ಆಸ್ಪಿರಿನ್ನು ಹೃದಯಾಘಾತವನ್ನೂ ಪಾರ್ಶ್ವವಾಯುವನ್ನೂ ತಡೆಗಟ್ಟುತ್ತದೆ ಎಂದು ಹೇಳುವ ವಿಜ್ಞಾನಿಗಳಿದ್ದರೂ. ಇಂದು ಈ ವಾದವನ್ನು ಅನೇಕ ಡಾಕ್ಟರರು ಒಪ್ಪುತ್ತಿಲ್ಲ. ರಕ್ತದಲ್ಲಿ ಕರಣೆಗಟ್ಟುವುದನ್ನು ತಡೆಯುವ ಗುಣ ಇದಕ್ಕಿದೆ.

ಒಂದು ರೀತಿಯಲ್ಲಿ ಆಸ್ಪಿರಿನ್ ಎರಡಲಗಿನ ಕತ್ತಿಯಿದ್ದಂತೆ. ಏಕೆಂದರೆ ಗರ್ಭಧಾರಣೆಯ ಸಮಯದಲ್ಲಿ – ಅದರಲ್ಲೂ ಗರ್ಭಧಾರಣೆಯ ಕೊನೆಯ ಹಂತದಲ್ಲಿ – ಆಸ್ಪಿರಿನ್ ಸೇವಿಸುವುದು ತಾಯಿಗೂ ಗರ್ಭಸ್ಥ ಶಿಶುವಿಗೂ ಹಾನಿಕರವಾದರೂ ಅಕಾಲ ಗರ್ಭಪಾತವಾಗುವುದನ್ನು ಆಸ್ಪಿರಿನ್ ತಡೆಯುವುದೆಂದು ಹೇಳುವ ತಜ್ಞರೂ ಇದ್ದಾರೆ. ಹಾರ್ವರ್ಡ್ ವಿಶ್ವವಿದ್ಯಾಲಯದ ವಿಜ್ಞಾನಿಗಳು ಇಲಿಗಳ ಮೇಲೆ ಪ್ರಯೋಗ ನಡೆಸಿದಾಗ ಅಂಡಾಣುವು ಫಲಿತವಾಗುವುದನ್ನು ಆಸ್ಪಿರಿನ್ ತಡೆಯುವುದೆಂದು ಸಿದ್ಧವಾಯಿತು. ಅರ್ಥಾತ್ ಇಂದಿಲ್ಲ ನಾಳೆ ಈ ಔಷಧ ಹೆಚ್ಚು ಮಟ್ಟಿಗೆ ನಿರಪಾಯಕರವಾದ ಗರ್ಭನಿರೋಧಕವೆಂದು ಸಿದ್ಧವಾಗಲೂಬಹುದು.

ಇದೆಲ್ಲಕ್ಕಿಂತ ಮುಖ್ಯವಾದದ್ದು ಅದು ಹೃದಯಾಘಾತವನ್ನೂ ಪಾರ್ಶ್ವವಾಯುವನ್ನೂ ತಡೆಗಟ್ಟುತ್ತದೆನ್ನುವುದು. ಆದರೆ ಇದು ಬೆಳಕಿಗೆ ಬರಲು ೭೮ ವರ್ಷಗಳೇ ಹಿಡಿದವು. ಏಕೆ? ಕಾರಣ

ಸ್ಪಷ್ಟವೇ ಇದೆ. ಹೃದಯಾಘಾತವಾಗಲು ಅನೇಕ ಕಾರಣಗಳಿದ್ದುದರಿಂದ ಒಂದೇ ಔಷಧಿಯ ಪರಿಣಾಮ ಸುಲಭವಾಗಿ ತಿಳಿದುಬರುವುದು ಕಷ್ಟವಾಗುತ್ತದೆ. ನಿಯಮಿತವಾಗಿ ಆಸ್ಪಿರಿನ್ನನ್ನು ಸೇವಿಸುವುದಕ್ಕೂ ಹೃದಯಾಘಾತದ ಸಾಧ್ಯತೆ ಕಡಿಮೆಯಾಗುವುದಕ್ಕೂ ಇರುವ ಸಂಬಂಧವನ್ನು ಡಾಕ್ಟರರು ಕೆಲವು ದಶಕಗಳ ಹಿಂದೆ ಗಮನಿಸಿದರಾದರೂ ಅವುಗಳ ಕಾರ್ಯ-ಕಾರಣ ಸಂಬಂಧವನ್ನು ವೈಜ್ಞಾನಿಕವಾಗಿ ದೃಢಪಡಿಸುವ ಪ್ರಯತ್ನ ಪ್ರಾರಂಭವಾದದ್ದು ಕೆಲವೇ ವರ್ಷಗಳ ಹಿಂದೆ. ಇದರ ಅಂಗವಾಗಿ ನಡೆದ ಪ್ರಯೋಗಗಳಿಂದ ಹೊರಬಿದ್ದ ಫಲಿತಾಂಶಗಳು ಆಶ್ಚರ್ಯಕರವಾಗಿವೆ.

ಲಕ್ವ ಹೊಡೆಯುವದಕ್ಕೆ ಕೆಲಕಾಲ ಮೊದಲು ಶೇಕಡಾ ಐವತ್ತರಷ್ಟು ಪ್ರಕರಣಗಳಲ್ಲಿ ಶರೀರದ ಒಂದು ಭಾಗದಲ್ಲಿ ಮಾತ್ರ ಜೋಮು ಹಿಡಿದ ಅಥವಾ ಅಶಕ್ತತೆಯಾದ ಲಕ್ಷಣಗಳು ತೋರಿದುದುಂಟು. ಮಿದುಳಿನ ರಕ್ತನಾಳಗಳಲ್ಲಿ ರಕ್ತದ ಕರಣೆ ಸಿಕ್ಕಿಕೊಂಡು ಹೀಗಾಗುತ್ತಿದೆಯೆ? ಎಂಬ ಸಂಶಯ ವಿಜ್ಞಾನಿಗಳಿಗೆ ಬಂದಾಗ ರಕ್ತ ಕರಣೆಗಟ್ಟುವುದನ್ನು ತಡೆಯಲು ಅವರು ಉಪಯೋಗಿಸಿದ್ದು ಆಸ್ಪಿರಿನ್ನನ್ನು. ಅವರು ಈ ಔಷಧಿಯನ್ನು ದಿನಕ್ಕೆರಡು ಮಾತ್ರೆಗಳ ಪ್ರಮಾಣದಲ್ಲಿ ಕೊಟ್ಟಾಗ ಮೇಲೆ ಹೇಳಿದ ಲಕ್ಷಣಗಳು ಎಷ್ಟೋ ಪ್ರಸಂಗಗಳಲ್ಲಿ ಕಣ್ಮರೆಯಾದವು. ಲಕ್ವಹೊಡೆಯುವ ಸಾಧ್ಯತೆಯಿದ್ದ ವ್ಯಕ್ತಿಗಳಿಗೆ ಇದೇ ಪ್ರಮಾಣದಲ್ಲಿ ಮಾತ್ರೆಗಳನ್ನು ಕೊಟ್ಟಾಗ ಲಕ್ವಹೊಡೆಯುವ ಸಂಭವ ಕಡಿಮೆಯಾಯಿತು. ಪ್ರಯೋಗ ನಡೆಸಲ್ಪಟ್ಟ ವ್ಯಕ್ತಿಗಳ ಪೈಕಿ ಶೇಕಡಾ ಐವತ್ತರಷ್ಟು ಗಂಡಸರಿಗೆ ಈ ಚಿಕಿತ್ಸೆ ಪ್ರಯೋಜನಕರವಾಯಿತು. ಈ ಪ್ರಯೋಗ ಸ್ತ್ರೀಯರಿಗೂ ಪ್ರಯೋಜನಕರವಾದರೂ ಅದರಿಂದ ಲಾಭಹೊಂದಿದವರ ಶೇಕಡಾವಾರು ಲೆಕ್ಕದಲ್ಲಿ ಅದು ಪುರುಷರಿಗೆ ಮಾತ್ರ ಹೆಚ್ಚು ಪ್ರಯೋಜನಕರವೆಂಬುದು ತಿಳಿದುಬಂತು. ಏಕೆ? ಆಸ್ಪಿರಿನ್ನಿಗೆ ಸ್ತ್ರೀಯರ ಮೇಲೆ ಅಸೂಯೆಯೆ? ಅದು ಪುರುಷರಿಗೆ ಮಾತ್ರ ಏಕೆ ಹೆಚ್ಚು ಲಾಭಕರವಾಗಬೇಕು? ಇದಕ್ಕೆ ಕಾರಣವನ್ನು ಕಂಡುಹಿಡಿಯುವುದು ಸುಲಭವಲ್ಲ. ಬಹುಶಃ ಪ್ರಕೃತಿಯೇ ಈ ವಿಷಯದಲ್ಲಿ ಪುರುಷರಿಗೆ ಪಕ್ಷಪಾತ ಮಾಡಿರುವುದರಿಂದ ಹೀಗಾಗಿರಬಹುದು. ಹಾರ್ಮೋನುಗಳಿಗೆ ಸಂಬಂಧಿಸಿದ ಕಾರಣಗಳಿಂದ ಹೀಗಾಗಿರಬೇಕು ಎಂದು ಕೆನಡಾದ ವಿಜ್ಞಾನಿ ಡಾ. ಹೆನ್ರಿ ಬಾರ್ನೆಟ್ ಹೇಳುತ್ತಾರೆ.

## ಪರಿಹಾರ

ಸಿಕ್ಕ ಸಿಕ್ಕಲ್ಲಿ ಗೆಳೆಯರ ಕಾಟ
ಅಂಗಡಿಗಳಿಂದ ಚೀಟು
ಬೇಂಕಿನಿಂದ ನೋಟೀಸು
ಕೋರ್ಟಿನಿಂದ ವಾರಂಟು
ತೆಗೆದ ಸಾಲವನ್ನು ಹಿಂದಿರುಗಿಸದ್ದಕ್ಕಾಗಿ.
ಎಲ್ಲವೂ ಒಮ್ಮೆಲೇ ತಲೆ ಮೇಲೆರಗಿದಾಗ
ಏನೂ ಮಾಡಲು ತೋಚದೆ ಸುಮ್ಮನೆ
ಕುಸಿದು ಕುಳಿತಾಗ ದೇವರ
ನೆನಪಾಯಿತಂ.
ಒಡನೆ ಊರಿನ ದೇವಸ್ಥಾನದ
ಜೀರ್ಣೋದ್ಧಾರದ ರಶೀದಿ ಪುಸ್ತಕವನ್ನು
ಚೀಲಕ್ಕೆ ಸೇರಿಸಿ ಮಾರ್ಗಕ್ಕಿಳಿದೆ.

—ಶ್ರೀಕೃಷ್ಣ ಚೆನ್ನಂಗೋಡ್

ಅಮೇರಿಕದ ಮೇಯೋ ಕ್ಲಿನಿಕ್ಕಿನಲ್ಲಿ ಆಸ್ಪಿರಿನ್ನು ಹೃದಯಾಘಾತವನ್ನು ತಡೆಗಟ್ಟಬಹುದೆ? ಎನ್ನುವುದನ್ನು ಕುರಿತು ಹತ್ತು ವರ್ಷಗಳ ವರೆಗೆ ಸಂಶೋಧನೆಯನ್ನು ನಡೆಸಿದಾಗ ಆಸ್ಪಿರಿನ್ನು ಹೃದಯಾಘಾತವುಂಟಾಗುವ ಸಾಧ್ಯತೆಯನ್ನು ಕಡಿಮೆ ಮಾಡುತ್ತದೆಂಬುದು ಕಂಡುಬಂತು. ಇದಕ್ಕೆ ಕಾರಣ ಹೃದಯ ರಕ್ತನಾಳಗಳಲ್ಲಿ ರಕ್ತ ಕರಣೆಯಾಗುವುದನ್ನು ಆಸ್ಪಿರಿನ್ ತಡೆಹಿಡಿಯಬಹುದು ಎಂಬ ಅಭಿಪ್ರಾಯವಿರುವುದೇ ಆಗಿದೆ. ಹೃದಯಾಘಾತವಾಗುವ ಸಾಧ್ಯತೆಯಿದ್ದವರಿಗೆ ನಿಯಮಿತವಾಗಿ ಆಸ್ಪಿರಿನ್ ಕೊಟ್ಟಾಗ ಪುರುಷರಲ್ಲಿ ಶೇಕಡಾ ೩೦ ರಿಂದ ೪೦ ರಷ್ಟು ಹೃದಯಾಘಾತ

ವುಂಟಾಗುವ ಸಂಭವ ಕಡಿಮೆಯಾಗುತ್ತದೆಂದು ವ್ಯಕ್ತವಾಯಿತು. ಇಲ್ಲಿಯೂ ಆಸ್ಪಿರಿನ್ನು ಪುರುಷ ಪಕ್ಷಪಾತಿಯಾಗಿ ವರ್ತಿಸಿತು. ಆಸ್ಟ್ರಿಯನ್ ವಿಜ್ಞಾನಿಗಳು ಸೇರಿ ಕೈಕೊಂಡ ಪ್ರಯೋಗಗಳಲ್ಲೂ ಆಸ್ಪಿರಿನ್ನು ಹೃದಯಾಘಾತವನ್ನು ತಡೆಯುವುದೆಂಬುದು ಸಿದ್ಧವಾಯಿತು. ಅಮೇರಿಕದ ನ್ಯಾಷನಲ್ ಹಾರ್ಟ್ ಲಂಗ್, ಬ್ಲಡ್ ಇನ್‌ಸ್ಟಿಟ್ಯೂಟಿನಲ್ಲಿ ೧೯೭೫ ರಿಂದ ನಡೆಸಿದ ಆಸ್ಪಿರಿನ್ ಹೃದಯಾಘಾತವನ್ನು ತಪ್ಪಿಸಬಲ್ಲದೇ ಎಂಬ ಸಂಶೋಧನೆಯ ಫಲಿತಾಂಶಗಳು ಫೆಬ್ರುವರಿ ೧೯೮೦ರಲ್ಲಿ ಹೊರಬಿದ್ದಾಗ ಆ ಫಲಿತಾಂಶಗಳು ಅಷ್ಟೇನೂ ಪ್ರೋತ್ಸಾಹಕರವಾಗಿರಲಿಲ್ಲ.

ಅದು ಹೇಗೇ ಇರಲಿ, ರಕ್ತ ಕರಣೆಗಟ್ಟುವುದನ್ನು ತಡೆಯುವ ಗುಣ ಆಸ್ಪಿರಿನ್ನಿಗಿರುವುದು ನಿಜ. ಅರೆತಲೆಶೂಲೆಯಲ್ಲೂ ಅದು ಹೆಚ್ಚು ಮಟ್ಟಿಗೆ ಪರಿಣಾಮಕರವಾಗಿದೆ ಎನ್ನುವುದೂ ಅಷ್ಟೇ ನಿಜ. ಇತ್ತೀಚೆಗಷ್ಟೆ ಜಪಾನಿನಲ್ಲಿ ಹುಟ್ಟಿಕೊಂಡು ಜಗತ್ತಿನಲ್ಲೆಲ್ಲ ವ್ಯಾಪಿಸಿರುವ ಕಾವಾಸಾಕಿ ವ್ಯಾಧಿಯು ! ಚಿಕ್ಕ ಮಕ್ಕಳಿಗೆ ತಗಲಿ ಪ್ರಾಣಾಂತಕವಾಗಬಹುದು. ಜಪಾನಿ ತಜ್ಞರ ತಂಡವೊಂದು ಈ ರೋಗ ತಗುಲಿದ ಪ್ರದೇಶಗಳಿಗೆ ಭೇಟಿ ಕೊಟ್ಟು ಪರಿಶೀಲಿಸಿದಾಗ ಕಾವಾಸಾಕಿಗೆ ಆಸ್ಪಿರಿನ್ನು ಮಾತ್ರ ಪರಿಣಾಮಕರವಾದ ಪ್ರಾಥಮಿಕ ಔಷಧಿಯೆಂದು ಸಿದ್ಧವಾಯಿತು. ಸಂಧಿವಾತದ ನೋವನ್ನು ನಿವಾರಿಸುವಲ್ಲಿ ಇದು ಎತ್ತಿದ ಕೈಯೆಂದು ಮೊದಲೆ ಹೇಳಿದೆಯಲ್ಲವೆ? ಆದರೆ ಆಸ್ಪಿರಿನ್ನಿಗೆ ಇದಕ್ಕೂ ಮಿಗಿಲಾದ ಗುಣವೊಂದಿದೆ. ಅದು ನೋವನ್ನು ನಿವಾರಿಸುವುದಲ್ಲದೆ ಸಂಧಿವಿಕಾರವನ್ನೂ ತಡೆಗಟ್ಟುತ್ತದೆ.

ಆದರೆ ಇದು ಎಲ್ಲ ರೋಗಗಳಿಗ ರಾಮಬಾಣವೆಂದು ಎಲ್ಲರೂ ಯಾವಾಗ ಬೇಕಾದಾಗ ಬೇಕಾದಷ್ಟು ಆಸ್ಪಿರಿನ್ ಮಾತ್ರೆಗಳನ್ನು ಸೇವಿಸಬಹುದು ಎಂದು ಮಾತ್ರ

ಯಾರೂ ಭಾವಿಸಕೂಡದು. ಅದು ತೀರಾ ನಿರಪಾಯಕರವಾದದ್ದು; ಉಪಪರಿಣಾಮಗಳು ಬಹಳ ಕಡಿಮೆ ಎಂಬುದು ನಿಜವಾದರೂ ಅದು ಮಾರಕವೂ ಆಗಬಹುದೆಂಬುದನ್ನು ಅಲಕ್ಷಿಸಬಾರದು. ಈ ಮಾತ್ರೆಗಳನ್ನು ಸಿಕ್ಕಸಿಕ್ಕಲ್ಲಿ ಇಡುವುದರಿಂದ ಮುಗ್ಧವಾದ ಎಳೆಯ ಮಕ್ಕಳು ಅವುಗಳನ್ನು ನುಂಗಿ ಪ್ರಾಣಕ್ಕೆರವಾದ ಪ್ರಸಂಗಗಳೂ ಉಂಟು. ಆಸ್ಪಿರಿನ್ನಿನ ಅಲರ್ಜಿಯಿರುವವರು ಈ ಮಾತ್ರೆಗಳನ್ನು ಸೇವಿಸಿದರೆ ಆಸ್ತಮಾ ಬಂದು ಕೆಲವೇಳೆ ಅದು ಮಾರಕವೂ ಆಗಬಹುದು. ಆಸ್ತಮಾ ಇರುವವರಿಗಂತೂ ಇದರ ಅಲರ್ಜಿಯುಂಟಾಗುವ ಸಂಭವ ಹೆಚ್ಚಿಗೆಯಾಗಿದ್ದರಿಂದ ಅಂಥವರು ಆಸ್ಪಿರಿನ್ನಿನಿಂದ ದೂರವಿರುವುದು ಒಳ್ಳೆಯದು. ಜಠರದಲ್ಲಿ ವ್ರಣವುಂಟಾಗಲೂ ಇದು ಕಾರಣವೆಂದು ಭಾವಿಸಲಾಗಿದೆ. ಗರ್ಭಿಣಿಯರು, ಶ್ರವಣಶಕ್ತಿ ಕುಂಠಿತಗೊಂಡಿರುವವರು, ಜಠರ ವ್ರಣದಿಂದ ನರಳುತ್ತಿರುವವರು ಹಾಗೂ ರಕ್ತವನ್ನು ಕರಣೆಗಟ್ಟುವುದನ್ನು ತಡೆಯುವ ಔಷಧಿಗಳನ್ನು ಸೇವಿಸುವವರು ಆಸ್ಪಿರಿನ್ನಿನಿಂದ ಆದಷ್ಟು ದೂರವಿರುವುದು ಒಳ್ಳೆಯದು. ಯಾವುದೇ ವ್ಯಾಧಿಗಾಗಿ ದೀರ್ಘಕಾಲದಿಂದ ನಿಯಮಿತವಾಗಿ ಔಷಧಿಗಳನ್ನು ಸೇವಿಸುವವರು ಡಾಕ್ಟರರ ಸಲಹೆಯಿಲ್ಲದೆ ಈ ಮಾತ್ರೆಗಳನ್ನು ತೆಗೆದುಕೊಳ್ಳಕೂಡದು.

ಇಷ್ಟೆಲ್ಲ ಹೇಳಿದರೂ ಆಸ್ಪಿರಿನ್ ದೇಹದಲ್ಲಿ ಹೇಗೆ ಕೆಲಸ ಮಾಡುತ್ತದೆನ್ನುವುದನ್ನು ಹೇಳಲೇ ಇಲ್ಲ. ಏಕೆಂದರೆ ಅದು ಹೇಗೆ ಕಾರ್ಯನಿರ್ವಹಿಸುತ್ತದೆನ್ನುವುದು ಇಲ್ಲಿಯ ವರೆಗೂ ನಿಗೂಢವಾಗಿದೆ. ದೇಹದ ತುಂಬೆಲ್ಲ ಅಂಗಾಂಶಗಳಲ್ಲಿ ಪ್ರೋಸ್ಟಾಗ್ಲಾಂಡಿನ್ನುಗಳೆಂಬ ರಾಸಾಯನಿಕಗಳಿವೆ. ಇವು ರಕ್ತದ ಒತ್ತಡ, ಸಂತಾನಶಕ್ತಿ, ಮೈಯಿಳಿತ, ಆಸ್ತಮಾ, ಉರಿಯೂತ, ಜ್ವರ, ಅನೇಕ ತರಹ ನೋವು ಮುಂತಾದ ಅನೇಕ ದೈಹಿಕ ಕ್ರಿಯೆಗಳಲ್ಲಿ ಭಾಗವಹಿಸುತ್ತದೆ. ಈ ಪ್ರೊಸ್ಟಾಗ್ಲಾಂಡಿನ್ನುಗಳ ಉತ್ಪಾದನೆಯನ್ನು ಆಸ್ಪಿರಿನ್ ತಡೆಗಟ್ಟುತ್ತದೆಯೆಂದು ವಿಜ್ಞಾನಿಗಳು ನಂಬಿದ್ದಾರೆ. ಅದು ಹೇಗೆ ತಡೆಗಟ್ಟುವುದೆಂಬುದು ತಿಳಿದಾಗ ಆಸ್ಪಿರಿನ್ನು ವಿವಿಧ ವ್ಯಾಧಿಗಳಿಗೆ ಹೇಗೆ ಪರಿಣಾಮಕರವಾಗಿದೆಯೆನ್ನುವುದೂ ತಿಳಿದುಬರುವದು.

ಆಸ್ಪಿರಿನ್ ತಲೆನೋವನ್ನು ಹೋಗಲಾಡಿಸುತ್ತಿದ್ದರೂ ಸದ್ಯಕ್ಕೆ ಅದು ತನ್ನ ರಹಸ್ಯಾತ್ಮಕ ಗುಣಧರ್ಮದಿಂದ ವಿಜ್ಞಾನಿಗಳಿಗೇ ತಲೆನೋವನ್ನು ಉಂಟುಮಾಡುತ್ತಿದೆ. ✡



ಉರ್ದು ಸಾಹಿತಿ ಸ್ವರ್ಗೀಯ ಕೃಷ್ಣಚಂದ್ರರು ಬಹಳ ಹಾಸ್ಯ ಸ್ವಭಾವದವರು. ಫಿಲ್ಮ್ ಪಾರ್ಟಿಯಲ್ಲಿ ಅವರು ಭಾಗವಹಿಸಿದಾಗ ಅವರೊಡನೆ ಅವರ ಸಾಹಿತಿ ಮಿತ್ರರೊಬ್ಬರೂ ಇದ್ದರು. ಕೃಷ್ಣಚಂದ್ರರು ಗಡ್ಡಧಾರಿ ವ್ಯಕ್ತಿಯೊಬ್ಬನನ್ನು ತಮ್ಮ ಸಾಹಿತಿ ಮಿತ್ರನಿಗೆ ತೋರಿಸುತ್ತಾ, "ನೋಡಿ, ಸರ್ದಾರ್‌ಜೀ ನಿಂತಿದ್ದಾರಲ್ಲಾ...ಅವರೇ ಪ್ರಸಿದ್ಧ ಲೇಖಕ, ನಿರ್ಮಾತೃ ಹಾಗೂ ನಿರ್ದೇಶಕರಾದ ರಾಜೇಂದ್ರಸಿಂಗ್ ಬೇಡೀ," ಎಂದು ಹೇಳಿದರು.

"ಓಹೋ! ಅವರೇ ಏನು ಪಾಪದ ಬಡಪಾಯಿ ರಾಜೇಂದ್ರಸಿಂಗ್ ಬೇಡಿ," ಎಂದು ಅವರ ಮಿತ್ರರು ಆಶ್ಚರ್ಯಚಕಿತರಾಗಿ ಉದ್ಗರಿಸಿದರು. "ಪಾಪದ ಬಡಪಾಯಿಗಳು ಅವರಲ್ಲ; ಅವರ ಚಿತ್ರಗಳನ್ನು ನೋಡುವವರು!" ಎಂದು ಕೃಷ್ಣಚಂದ್ರರವರು ತಟ್ಟನೆ ನುಡಿದರು.

* * *

ಇದುವರೆಗೆ ಬಿಡುಗಡೆಯಾದ ಅತಿ ದೊಡ್ಡ ಅಂಚೆ ಚೀಟಿಯೆಂದರೆ ೧೯೩೯ ರಲ್ಲಿ ಚೀನಾ ಹೊರಡಿಸಿದ್ದು. ಇದು ೯ ಇಂಚು ಉದ್ದ ಹಾಗೂ ೨ ಇಂಚು ಅಗಲವಾಗಿತ್ತು!

—ಎಸ್. ವಿಶ್ವನಾಥ

# "ಇಂದು ಶೇಷನ ಬಾರಿ!"

ಗೌರೀಶ ಕಾಯ್ಕಿಣಿ

ದುರ್ಯೋಧನನನ್ನು – ಅವನು ಸುಯೋಧನನೂ ಅಹುದು!– "ಉರಗಪತಾಕ" "ಫಣಿರಾಜ–ಕೇತನ" ಎಂದೆಲ್ಲ ನಮ್ಮ ಪಂಪರನ್ನಾದಿ ಮಹಾ ಕವಿಗಳು ಕರೆದಿದ್ದಾರೆ. ಆದರೆ ಈ ಕೌರವನಿಗೂ ಆದಿಶೇಷನಿಗೂ ಎಲ್ಲಿಯ ಸಂಬಂಧ? ಅವನ ಧ್ವಜದ ಮೇಲೆ ಈ ಸರ್ಪದ ಚಿಹ್ನವೇಕೆ?

ನಾನು ತಿಳಿದ ಮಟ್ಟಿಗೆ ಈ ಶಂಕೆಯನ್ನು ಮೊದಲಿಗೆ ಎತ್ತಿ ತಮ್ಮ ಮಟ್ಟಿಗೆ ಸಯುಕ್ತಿಕವಾಗಿ ಅದರ ನಿರಸನ ಮಾಡಿದವರು ನನ್ನ ವಿದ್ವಾನ್ ಮಿತ್ರ ಡಾ. ಕೆ. ಕೃಷ್ಣಮೂರ್ತಿಗಳು. ಆದಿ ಪಂಪನ ಬಗೆಗೆ ಕೆಲವು ವರ್ಷ ಹಿಂದೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿಯ ಕನ್ನಡ ಅಧ್ಯಯನ ಸಂಸ್ಥೆಯು ಒಂದು ಸೆಮಿನಾರ್ ಏರ್ಪಡಿಸಿತ್ತು. ಅಂದು ಚರ್ಚಿಸಿದ ಪ್ರಬಂಧಗಳ ಸಂಕಲನ ಗ್ರಂಥವನ್ನು ಸಮಾಲೋಚಿಸುವಾಗ ನಾನು ಡಾ. ಕೃಷ್ಣಮೂರ್ತಿಗಳ ಪ್ರಬಂಧವನ್ನು ಓದಿ ಮೆಚ್ಚಿದೆನು.

ಅವರ ಅಭಿಪ್ರಾಯದಂತೆ ವಸ್ತುತಃ ದುರ್ಯೋಧನನಿಗೂ ಫಣಿರಾಜನಿಗೂ ಯಾವ ಸಂಬಂಧವೂ ಇಲ್ಲ. ಮೂಲ ಮಹಾಭಾರತದಲ್ಲಿಯೂ ಆ ಬಗೆಯ ಸಂಬಂಧ ಸೂಚಿಸಿದ್ದಿಲ್ಲ. ಅಲ್ಲಿ ಅವನ ಧ್ವಜಕ್ಕೆ ಆನೆಯ ಕೊರಳಿಗೆ ಕಟ್ಟುವಂತೆ ಅನೇಕ ಗಂಟೆಗಳನ್ನು ಕಟ್ಟಿದ್ದರೆಂಬ ವರ್ಣನೆ ಬರುತ್ತದೆಯೆ ಹೊರತು ಧ್ವಜದ ಮೇಲೆ ಸರ್ಪದ ಚಿಹ್ನವಿದ್ದ ಉಲ್ಲೇಖವಿಲ್ಲ.

ಹಾಗಿದ್ದರೆ ಅದು ನಮ್ಮ ಹಳೆಗನ್ನಡ ಕವಿಗಳಿಗೆ ಸೂಚಿತವಾದ್ದು ಹೇಗೆ? ಮುಂದಿನ ಕವಿಗಳಿಗೆ ಆದಿ ಪಂಪನೆ ಇದಕ್ಕೆ ಆಧಾರ. ಆದರೆ ಅವನಿಗೆ? ಡಾ. ಕೃಷ್ಣಮೂರ್ತಿಯವರ ಪ್ರತಿಪಾದನೆಯಂತೆ ಈ ಸರ್ಪ ಚಿಹ್ನೆ ದುರ್ಯೋಧನನ ಪತಾಕೆಯಲ್ಲಿ ಮೊದಲಿಗೆ ಬರೆದವನು ಸಂಸ್ಕೃತ "ಭಾರತ ಚಂಪೂ"ಕಾರ ಕವಿ ಅನಂತಭಟ್ಟ. ಅವನು ಎಸಗಿದ ಈ ಮುಗ್ಧ ಪ್ರಮಾದಕ್ಕೆ ಕಾರಣ ಭಾರತದಲ್ಲಿ ಬರುವ 'ನಾಗ' ಶಬ್ದ. ಸಂಸ್ಕೃತದಲ್ಲಿ ನಾಗ ಅಂದರೆ ಹಾವೂ ಅಹುದು, ಆನೆಯೂ ಅಹುದು. ಕುರುಕುಲದ ರಾಜಧಾನಿ ಹಸ್ತಿನಾಪುರ – ನಾಗಪುರ. ಪಾಂಡವರಿಗೆ ರಾಜ್ಯದ ಪಾಲು ಮಾಡಿ ಕೊಟ್ಟಾಗಲೂ ಅವರ ಹೊಸ ರಾಜಧಾನಿ ವಾರಣವರ್ತ. ('ವಾರಣ'ವೆಂದರೂ ಆನೆಯೇ.)

ಆನೆಗೆ ಇರುವ ಈ 'ನಾಗ' ಪರ್ಯಾಯ ಪದವೇ ಭಾರತ ಚಂಪೂಕಾರನಿಗೆ ದುರ್ಯೋಧನನ ಧ್ವಜ 'ಉರಗ ಪತಾಕ'ವೆಂದು ಹೇಳಲು ಪ್ರೇರಿಸಿರಬೇಕು. ಮುಂದೆ ನಮ್ಮ ಪಂಪ ಅದನ್ನು ಎತ್ತಿಕೊಂಡ. ಆ ವರಕವಿಯನ್ನು ಅನಂತರದ ಸರಕವಿಗಳು ಅನುಸರಿಸಿದರು, ವಿಶೇಷ–ಅಥವಾ ಸ್ವತಂತ್ರ ತರ್ಕದಿಂದ ತಲೆ ಕೆಡಿಸಿಕೊಳ್ಳದೆ.

ಆದರೆ ಇಲ್ಲಿ ಒಂದು ಮುಖ್ಯ ಮಾತು ಖಚಿತವಾಗಬೇಕಾಗಿದೆ. ಭಾರತ ಚಂಪೂದಿಂದ ಕವಿ ಪಂಪ ಈ ಕಲ್ಪನೆಯನ್ನು ಎತ್ತಿಕೊಂಡಿದ್ದರೆ ಆ ಚಂಪೂ ಕಾವ್ಯ ನಮ್ಮ 'ಸಮಸ್ತ ಭಾರತ'ಕ್ಕಿಂತ

ಹಿಂದಿನದೆಂದು ಆಯಿತು. ಆದರೆ ಅದು ನಿಜವೇ?

ಈ ಸಂಶಯಕ್ಕೆ ಕಾರಣ ಈಚೆಗೆ ಶಿವಮೊಗ್ಗೆಯ ವೇದ ಸಾಹಿತ್ಯ ವಿದ್ವಾಂಸರೂ ಪ್ರಚಂಡ ವಾಗ್ಮಿಗಳೂ ಆದ ಡಾ. ರಂಗಾಚಾರ್ಯರ ಒಂದು ಉಪನ್ಯಾಸದಲ್ಲಿ ಅವರು ವಿಷಯಾನುಷಂಗಿಕವಾಗಿ ಅಂದರು: "ಭಾರತ ಚಂಪೂ"ದಲ್ಲಿ ಅರ್ಜುನ ಭೂಪ್ರದಕ್ಷಿಣೆಯ ತದಂಗದಲ್ಲಿ ಗೋಕರ್ಣ ಕ್ಷೇತ್ರಕ್ಕೆ ಬರುತ್ತಾನೆ. ಆದರೆ ನಾವು ತಿಳಿದ ಮಟ್ಟಿಗೆ ಕವಿ ಪಂಪನೇ ಅರ್ಜುನನನ್ನು ತನ್ನ ಬನವಾಸಿ ದೇಶಕ್ಕೆ, ಅಲ್ಲಿಯ ವರದಾ ನದಿಗೆ ಮತ್ತು ಗೋಕರ್ಣನಾಥನ ದರ್ಶನಕ್ಕೆ ತನ್ನದೇ ಹೊಣೆಗಾರಿಕೆಯ ಮೇಲೆ ತಂದಿದ್ದಾನೆ!

ಇಲ್ಲಿ ನನ್ನನ್ನು ಕಾಡುವ ಪ್ರಶ್ನೆ– ಭಾರತ ಚಂಪೂವಿಂದ ಉರಗ ಪತಾಕೆಯ ಕಲ್ಪನೆ ಎತ್ತಿಕೊಂಡ ಪಂಪ ಈ ಅರ್ಜುನನ ಗೋಕರ್ಣ ಯಾತ್ರೆಯ ಪ್ರಸಂಗವನ್ನೂ ಅಲ್ಲಿಂದಲೇ ಎತ್ತಿಕೊಂಡಿರಬೇಕು. ಅಂದರೆ ಅದು ಪಂಪನದೇ ಸ್ವಂತಿಕೆಯ ಕಲ್ಪನೆ ಅಲ್ಲ! ಅಥವಾ ಅನಂತ ಭಟ್ಟನೇ ಪಂಪನಿಂದ ಈ ವಿವರ ಸ್ವೀಕರಿಸಿದ್ದರೆ ಭಾರತ ಚಂಪೂ ವಿಕ್ರಮಾರ್ಜುನ ವಿಜಯದ ನಂತರದ ಕಾವ್ಯ ಪ್ರಬಂಧವೆಂದಾಗಬೇಕು. ಅರ್ಥಾತ್ ದುರ್ಯೋಧನನ ಧ್ವಜದಲ್ಲಿ ಸ್ಥಾನವನ್ನು ಪಡೆದ ಈ ಹಾವು ಯಾರ ಮಿದುಳಿನ ಹುತ್ತದಿಂದ ಹೊರಬಿತ್ತು? ಪಂಪನಿಂದಲೋ? ಚಂಪೂ ಕವಿಯಿಂದಲೋ?

ಇದೇನೇ ಇರಲಿ, ಇನ್ನೆರಡು ಸಂಗತಿಗಳಿಂದ ಈ ಉರಗ ಪತಾಕನ ರಹಸ್ಯದ ಇತ್ಯರ್ಥಕ್ಕೆ ಏನಾದರೂ ಬೆಳಕು ಬೀಳಬಹುದೋ ನೋಡೋಣ.

ನಮ್ಮ ಉತ್ತರ ಕನ್ನಡ ಜಿಲ್ಲೆಯ ಹಿರಿಯ ತಾಳಮದ್ದಲೆ ಅರ್ಥಗಾರ ಹೈಗುಂದದ ಡಾ. ಪದ್ಮನಾಭರಾಯರು ಈ ಕುರಿತು ನಾನು ಅವರೊಂದಿಗೆ ಪ್ರಸ್ತಾಪಿಸಿದಾಗ "ತುರಂಗ ಭಾರತ" ಕಾವ್ಯದಿಂದ ಒಂದು ಕಥಾ ಪ್ರಸಂಗವನ್ನು ಜ್ಞಾಪಿಸಿ ಹೇಳಿದರು. ಅದು ದುರ್ಯೋಧನನ ಮದುವೆಯಾದ ಹೊಸತರಲ್ಲಿ ನಡೆದದ್ದು. ಅದು ಕವಿಯ ದುರ್ಯೋಧನ–ಕರ್ಣರ ನಡುವಿನ ಗೆಳೆತನ ಎಷ್ಟು ಗಾಢವಾಗಿತ್ತೆಂಬುದಕ್ಕೆ ನಿದರ್ಶನವಾಗಿ ತಂದದ್ದು.

ಮದುವೆ ಆದ ಹೊಸತರಲ್ಲಿ ದಿನವೂ ಮುಂಜಾನೆ ದುರ್ಯೋಧನನ ಮೋರೆ ಬಳಲಿ ಬಾಡಿ ಕಳೆಗುಂದಿದ್ದು ಕರ್ಣ ನೋಡುತ್ತಾನೆ. ಗೆಳೆಯನನ್ನ ಅದರ ಕಾರಣ ಕೇಳುತ್ತಾನೆ. ಆಗ ದುರ್ಯೋಧನ ಒಂದು ವಿಚಿತ್ರ ವೃತ್ತಾಂತವನ್ನು ಅರುಹುತ್ತಾನೆ. ದಿನವೂ ರಾತ್ರಿ ಆತ ತನ್ನ ವಧು ಭಾನುಮತಿ*ಯೊಂದಿಗೆ ಮಲಗಿದಾಗ, ನಡು ರಾತ್ರಿಗೆ (ಪಾತಾಳದಿಂದ ?) ಯಾರೋ ಬಲಿಷ್ಠ ಭದ್ರಾಕಾರಿ ಪುರುಷ ಎದ್ದು ಬಂದು ಅವನನ್ನು ಬದಿಗೆ ಬಿಗಿದು ಕಟ್ಟಿಟ್ಟು ತಾನೇ ಅವಳನ್ನು ಭೋಗಿಸಿ ಮಾಯವಾಗುತ್ತಿದ್ದ.

ಇದನ್ನು ಕೇಳಿ ಕರ್ಣ ಆ ದಿನ ರಾತ್ರೆ ಗೆಳೆಯನ ಮಂಚದಲ್ಲಿ ತಾನೇ ಮಲಗುವೆನೆಂದನು. ತನ್ನ ನವ ವಧುವಿನೊಂದಿಗೆ ಕರ್ಣನು ಮಲಗುವದಕ್ಕೆ ದುರ್ಯೋಧನ ಒಪ್ಪಿಕೊಂಡ. ಆ ರಾತ್ರೆ ಆ 'ಪರ ಪುರುಷ' ಬಂದ. ಆದರೆ ಈ ಸಲ ಕರ್ಣನೊಂದಿಗೆ ಆತನ ಮುಖಾಮುಖಿ ಆಯಿತು. ಚೆನ್ನಾಗಿ ಪೆಟ್ಟು ತಿಂದು ಆತ ಸೋತು ಓಡಿಹೋದ. ಈ ಪ್ರಸಂಗದಲ್ಲಿ ನಮಗೆ ಗಮನಾರ್ಹವಾದ ಅಂಶ ಈ 'ಪರ ಪುರುಷ'ನದು. ಆತ ಪಾತಾಳದಿಂದ ಬಂದವನು–ಫಣಿರಾಜ, ಆದಿಶೇಷನಿರಬಹುದೇ?

ಈ ಶಂಕೆಗೆ ಇನ್ನೊಂದು ಕಥೆ ನಮಗೆ ಆಧಾರ. ಅದು ನಾನು ಬಾಲ್ಯದಲ್ಲಿ ಒಬ್ಬ ಪುರಾಣೀ ಹರಿಕೀರ್ತನಕಾರನಿಂದ ಕೇಳಿದ್ದು. ದ್ರೌಪದಿ ಭಾನುಮತಿಯರು ಕೂಡಿರುವಾಗ ಭಾನುಮತಿ ದಿನಾಲು ಮುಂಜಾನೆ ಪ್ರಶ್ನೆ ಕೇಳಿ ಚುಡಾಯಿಸುತ್ತಿದ್ದಳಂತೆ– "ಅಕ್ಕಾ, ನಿನ್ನೆ ಯಾರ ಬಾರಿ?" ಅಂದರೆ ಐದರು ಗಂಡಂದಿರಲ್ಲಿ ಈ ರಾತ್ರಿ ಅವಳೊಡನೆ ಕಳೆದವನು ಯಾರು? ಇಂಥ ಪ್ರಶ್ನೆಗೆ ದ್ರೌಪದಿ ತೀರ ಸಣ್ಣಾಗಿ ನೊಂದುಕೊಂಡು ತನ್ನ ಈ ಕಷ್ಟವನ್ನು ಕೃಷ್ಣನಲ್ಲಿ ತೋಡಿಕೊಂಡಳಂತೆ. ಆಗ ಕೃಷ್ಣ ಸಲಹೆ ನೀಡಿದ: "ಹೆದರಬೇಡ ತಂಗೀ, ನಾಳೆ ಆಕೆ ಹಾಗೆ ಕೇಳಿದಾಗ 'ಇಂದು ಶೇಷನ ಬಾರಿ!' ಎಂದು ಅಂದು

---

* ಮೂಲ ಭಾರತದಲ್ಲಿ ದುರ್ಯೋಧನನ ಮಡದಿಯ ಹೆಸರೇ ಇಲ್ಲ. ಭಟ್ಟನಾರಾಯಣನ ವೇಣೀಸಂಹಾರದಲ್ಲಿ ಈ ಭಾನುಮತಿ ಹೆಸರು ಮೊದಲಿಗೆ ಬರುತ್ತದೆ. ಅದೇ ಅಂದಿನಿಂದ ಜನಪ್ರಿಯವಾಗಿ ಪ್ರಚಾರ ಪಡೆದಿದೆ.

ಬಿಡು." ಮರುದಿನ ಮತ್ತೆ ಭಾನುಮತಿಯು ಅದೇ ಪ್ರಶ್ನೆ ಹಾಕಿದಳು. ಆದರೆ ಈ ಸಲ ದ್ರೌಪದಿ ಈ ಹೊಸ ಉತ್ತರ ಕೊಟ್ಟಳು. ಭಾನುಮತಿ ಏಕೋ ಮುಖಭಂಗಪಟ್ಟು ಕಂಗೆಟ್ಟು ಹೊರಟು ಹೋದಳು. ಮತ್ತೆ ಅಕ್ಕನ ತಂಟೆಗೆ ಬರಲಿಲ್ಲ.

ಆಗ ದ್ರೌಪದಿ ಆದದ್ದೆಲ್ಲ ಕೃಷ್ಣನಿಗೆ ಹೇಳಿ, ಬೆರಗಾಗಿ ಕೇಳಿದಳು– "ಇದೇನು ಹೀಗಾಯಿತು?" ಆಗ ಕೃಷ್ಣ ವಿವರಿಸಿದನಂತೆ: "ಪತಿವಶೀಕರಣಕ್ಕಾಗಿ ಭಾನುಮತಿಯು ಏನೋ ಮೆಚ್ಚು ಮದ್ದಿನ ತೈಲ ವನ್ನು ತುದಿದ್ದಳಂತೆ. ಅದು ಚೆಲ್ಲಿ ಹೋಗಿ ಅವಳ ಅಂತಃಪುರದ ನೆಲದಲ್ಲಿ ಇಂಗಿ ಆರಿಹೋಯಿತು. ಆದರೆ ಅದು ಹಾಗೆಯೇ ಆಳಕ್ಕೆ ಇಳಿದು ಹೋಗಿ ಭೂಮಿ ಗೋಲ ಹೊತ್ತ ಆದಿಶೇಷನ ನೆತ್ತಿಗೆ ಬಿತ್ತಂತೆ. ಅಂದಿನಿಂದ ಆದಿಶೇಷನೇ ಭಾನುಮತಿಗೆ ವಶೀಕೃತನಾಗಿ ಮೋಹಿಸಿ ಬಂದು ಅವಳನ್ನು ಭೋಗಿಸಿ ಹೋಗತೊಡಗಿದನು." ಈ ರಹಸ್ಯ ಕೃಷ್ಣನಿಗೆ ಗೊತ್ತಿತ್ತು.

ಈ ಕತೆಯಲ್ಲಿ ತಪ್ಪದೇ "ಭಾನುಮತಿಯ ಮಂಚಕ್ಕೆ ಬರುವ ಶೇಷ 'ತುರಂಗ ಭಾರತ'ದ ಬರುವ ಆಮಾಯಾಪುರುಷನಿಗೆ ಹೋಲುತ್ತಾನೆ.

ಇವೆರಡು ಕತೆಗಳ ಹಿನ್ನೆಲೆಯಲ್ಲಿ ದುರ್ಯೋಧನನಿಗೆ 'ಉರಗ ಪತಾಕ'ನೆನಿಸಿಕೊಳ್ಳಲು ನಿಜವಾ ಯಾವ ವಿಶೇಷ ಆಸಕ್ತಿಯೂ ಇರಲಾರದು. (ಇನ 'ಆದಿಶೇಷನ ಬಾರಿ'ಯ ಕತೆ ನಾನು ಕನ್ನಡದ ಕೇಳಿದ್ದು ಇಲ್ಲ. ಅದು ಯಾವ ಭಾರತದ್ದೋ!)

ಅಥವಾ ನಾಗಪ್ರತೀಕ ಕೌರವೇಶ್ವರನ ಸ್ವಂತ totem ಆಗಿರಬಹುದೇ? ಕುಲದಿಂದ ಬೇರೆ ಬೇ ಯಾಗಿ ವ್ಯಕ್ತಿಗೊಂದು totem ಇರುತ್ತಿತ್ತೋ! ಕೃಷ್ಣ ಗರುಡಧ್ವಜ. ಗರುಡ ನಾಗನ ಶತ್ರು. ಅದು ದುರ್ಯೋಧನ ಭೀಮನಿಗೇ ಶತ್ರು. ಅರ್ಜುನ ಕಪಿಧ್ವಜ (ಕಪಿ–ನಾಗ ಎರಡೂ ಲೈಂಗಿಕ ಪ್ರತೀಕ ಗಳು). ಭೀಮನ ಧ್ವಜ ಚಿಹ್ನೆ ಯಾವುದೋ! ಅದರೊಂದಿಗೆ ಫಣಿರಾಜ ಕೇತನಕ್ಕೆ ಏನಾದರು ಸಾಮಂಜಸ್ಯವಿರಬಹುದೇ ?

## 'ಶುಕ್ರ' ಭವಿಷ್ಯ

**ಈಗ ನಾವೆಲ್ಲ ತಿಳಿದಿರುವ ಹಾಗೆ ಕೇವಲ ಪೃಥ್ವಿಯ ಮೇಲೆ ಕಾಣಸಿಗುವ ಸಮುದ್ರ-ಸಾಗರ-ಮಹಾಸಾಗರಗಳು ಮುಂಬರುವ ಶತಮಾನಗಳಲ್ಲಿ ಶುಕ್ರನ ಮೇಲೂ ಉದ್ಭವಿಸುತ್ತವೆ ಮತ್ತು ಅಲ್ಲಿರುವ ಭೂಮೇಲ್ಮೈ ಪದರದ ತಗ್ಗುಗಳನ್ನೂ ಬಿರುಕುಗಳನ್ನೂ ಮುಚ್ಚಿ ಎಲ್ಲ ಕಡೆ ನೀರೇ ನೀರಾಗಿಸುವ ಸಾಧ್ಯತೆಗಳಿವೆ.**

ಬಹುಶಃ ಶುಕ್ರನ ಪ್ರಾಗೈತಿಹಾಸಿಕ ಇತಿಹಾಸ ಪೃಥ್ವಿಯ ಪ್ರಾಗೈತಿಹಾಸಿಕ ಇತಿಹಾಸಕ್ಕಿಂತ ಭಿನ್ನವಾಗಿದೆ. ಇಪ್ಪತ್ತು ಸಾವಿರ ವರ್ಷಗಳ ಹಿಂದೆ ಜ್ವಾಲಾಮುಖಿಯ ಸ್ಫೋಟವೊಂದು ಶುಕ್ರನನ್ನು ನಡುಗಿಸಿತು. ಜೊತೆಗೇ ಶುಕ್ರನ ಭೂಪದರದೊಳಗಿಂದ ಖನಿಜ ವಸ್ತುಗಳು ದ್ರವರೂಪದಲ್ಲಿ ಹೊರಚಿಮ್ಮಿತು. ಮುಂದೆ ಲಾವಾ ಸಮುದ್ರಗಳು ಹುಟ್ಟಿಕೊಳ್ಳಲು ಕಾರಣವಾದದ್ದು ಇದೇ ವಸ್ತು. ಇಂದಿಗೂ ಶುಕ್ರನ ಮೇಲ್ಮೈ ಈ ಲಾವಾ ಸಮುದ್ರದ ಕಾರಣವಾಗಿ ಸುಡುಬಿಸಿಯಾಗಿದೆ ಜ್ವಾಲಾಮುಖಿಯಿಂದಾಗಿ ಅಲ್ಲಿನ ವಾತಾವರಣದಲ್ಲಿ ದೊಡ್ಡ ಪ್ರಮಾಣದಲ್ಲಿ ಇಂಗಾಲಾಮ್ಲ ಮತ್ತು ಬೂದಿ ಶೇಖರವಾಗಿರುವುದನ್ನು ಶುಕ್ರನ ವಾತಾವರಣ ಅಧ್ಯಯನ ಮಾಡಿದ ರಶಿಯನ್ ವಿಜ್ಞಾನಿಗಳು ಕಂಡುಹಿಡಿದಿದ್ದಾರೆ.

ಆದರೆ ಭವಿಷ್ಯತ್ತಿನಲ್ಲಿ ಈ ಗ್ರಹ ತಂಪಾಗಿ ಅದರ ವಾತಾವರಣದಲ್ಲಿರುವ ರಸಾಯನಿಕಗಳ ಪ್ರಮಾಣದಲ್ಲಿ ಬದಲಾವಣೆಯಾಗಿ ಭೂಮಿಯ ಮೇಲಿರುವಂತೆ ಜಲ ಮೂಲಗಳು ಕಾಣಿಸಿಕೊಳ್ಳುವ ಹಾಗೂ ಇವು ಭೂಮಿಯ ಮೇಲಿನ ರಾಸಾಯನಗಳಿಗಿಂತ ಭಿನ್ನವಾಗಿರುವ ಸಾಧ್ಯತೆ ಇದೆ. ('ಸುಟ್ನಿಕ್'ನಿಂದ)

# ದಲಿತೋದ್ಧಾರ

ನಾವು ಸಮಾಜದ
ಅಸ್ತಿತ್ವದ ಉತ್ಕ್ರಾಂತಿಯ ವ್ಯವಸ್ಥೆಯಲ್ಲಿ
ಜನಿಸಿ ಭೂಗರ್ಭದಲ್ಲಿ ಕೆಲ ಕಾಲ ಅಡಗಿದ್ದು
ಇದ್ದಕ್ಕಿದ್ದಂತೆಯೇ ಸಿಡಿದು ತೆರೆಯ ಮೇಲೆ ಬಂದವರು !
ವರ್ಗ- ಜಾತಿಯ ಸೃಷ್ಟಿಸುವ, ಘೋಷಿಸುವ
"...ಇಸಂ" ಪ್ರಿಯರು ನಮ್ಮನ್ನು ಶೋಷಿತರೆಂದು ಕರೆದರು.
ಬಡತನ, ನೀತಿಯ ಕಂಡು ಕೆಲವು ಪಟ್ಟಭದ್ರರು
ಶೂದ್ರರೆಂದು ಕರೆದರು ! ಜೊತೆಯಲ್ಲಿ ಮಡಿ-ಮೈಲಿಗೆಯ
ಮುಸುಕು ಹಾಕಿ ಅಸ್ಪೃಶ್ಯರೆಂದು ಕರೆದು ಬೀದಿ ಆಚೆ ಇಟ್ಟು
ಕಂಡಲ್ಲಿ ಕೆಂಡದಂತಾಗಿ, ಚಡಪಡಿಸಿ ಉರಿ ಬಿದ್ದರು.
ನಮ್ಮ ಹೆಸರಿನಲ್ಲಿ ಸಂಘ-ಸಂಸ್ಥೆ, ಕಾರ್ಪೊರೇಷನ್ ನಿಗಮಗಳ
ಕಟ್ಟಿ, ಭರ್ಜರಿ ಉದ್ಘಾಟನಾ-ಸಮಾರಂಭ ನಡೆದು, ಪವಾಡದಂತೆ
ಸಂದಿಗಲ್ಲಿಗಳಲ್ಲಿ ರಾಶಿರಾಶಿ ಕಪ್ಪು-ಬಿಳುಪು ನೋಟುಗಳು ಹರಿದಾಡಿದವು.
ಉದ್ಯೋಗನಿರತ, ನಿವೃತ್ತ ಅಧಿಕಾರಿ-ಸರ್ವಾಧಿಕಾರಿಗಳೆಲ್ಲಾ
ಚೇರ್‌ಮನ್, ಡೈರೆಕ್ಟರೆಂದು ಅನ್ನಿಸಿಕೊಂಡು,
ಒಳಗೊಳಗೆ ಭದ್ರವಾಗಿ ತಳವೂರಿ ಕುಳಿತರು.
ಇತ್ತೀಚೆಗೆ ಹುಟ್ಟಿಕೊಂಡ ಕೆಲವು ಸಮಾಜಸುಧಾರಕರು(?) ಸಮಯಸಾಧಕರು
ನಿಘಂಟಿನರ್ಥದ ಒರೆಹಚ್ಚಿ ನಮ್ಮನ್ನು 'ದಲಿತ'ರೆಂದು ಸಾರಿ
'ಉದ್ಧಾರ'ದ ಹೆಸರಿನಲ್ಲಿ ದೋಚಿ, ತಮ್ಮುದ್ಧಾರ ಮಾಡಿಕೊಂಡರು !
ಸರ್ಕಾರ ನೀಡಿದ ಹಲವಾರು ರಿಯಾಯಿತಿಗಳು
ನಮ್ಮನ್ನೇ ವಿನಾಯಿತಿಗೊಳಿಸಿ, ಸರಕಾರೀ ಥೀಲಾಗಳ
ಜೋಳಿಗೆಗೆ ಹೋದವು !
ನಂತರದಲ್ಲಿ ಸ್ಮಶಾನದ ಹದ್ದುಗಳಿಗಿಂತ
ಒಂದು ಪಟ್ಟು ಚೆನ್ನಾಗಿ ಭಕ್ಷಿಸಿ ಎಲುಬು-ಮೂಳೆ-ಬೂದಿ ಒಂದೂ
ಬಿಡದೆ ನುಂಗಿ ನೀರು ಕುಡಿದರು.
ಬೆಳೆದ ಗೇಣು ಟೊಳ್ಳು ಹೊಟ್ಟೆಯ ಮೇಲೆ ಮಣಗಟ್ಟಲೆ ಭಾರ ಹಾಕಿ
ಘಂಟೆಗಟ್ಟಲೆ ಅಂಬೇಡ್ಕರ್, ಪೆರಿಯಾರನ್ನು ನೆನೆದು ಹೊಗಳಿ—
ಕಿವುಡು ಕಿವಿಗೆ ಕಾದ ಕಬ್ಬಿಣದ ರಸ ಸುರಿದರು !
ತಮ್ಮ ಬೇಳೆಕಾಳು ಬೆಂದಾಗ, ನಾನು ಬರ್ತೀನಿ ಎಂದು
ನಮ್ರದಿಂದ ಕೈ ಜೋಡಿಸಿ, ನಡೆದೇಬಿಟ್ಟರು.
ನೆನ್ನೆಯಂತೆಯೇ ಇಂದೂ ನಾವು ಮಾತ್ರ ಹಾಗೇ ಉಳಿದಿದ್ದೇವೆ.
ಇದು-ದಲಿತೋದ್ಧಾರ.

# ಸ್ವಚ್ಛ, ಆಹ್ಲಾದಕರ ಶ್ವಾಸ
# ಆರೋಗ್ಯಕರ, ಗಟ್ಟಿ ಹಲ್ಲುಗಳು



## ಕೋಲ್ಗೇಟ್ ಡೆಂಟಲ್ ಕ್ರೀಮ್‌ನ ಕೊಡುಗ

ಪ್ರತಿ ಸಲ ಊಟವಾದ ಮೇಲೆ ಕೋಲ್ಗೇಟ್‌ನಿಂದ ಹಲ್ಲುಜ್ಜಿರಿ. ಇದು ಜಗತ್ತಿನಾದ್ಯಂತ ದಂತವೈದ್ಯರು ಶಿಫಾರಸು ಮಾಡುವ ರೀತಿಯಲ್ಲಿ ನಿಮ್ಮ ಹಲ್ಲುಗಳಿಗೆ ರಕ್ಷಣೆ ನೀಡುತ್ತದೆ.

ಹಲ್ಲುಗಳೆಡೆಯಲ್ಲಿ ಉಳಿಯುವ ಆಹಾರ ಕಣಗಳಲ್ಲಿ ರೋಗಾಣುಗಳು ಬೆಳೆಯುತ್ತವೆ. ಇವು ಉಸಿರಿನ ದುರ್ವಾಸನೆಗೆ ಕಾರಣವಾಗುತ್ತವೆ–ಆಮೇಲೆ ನೋಯುವ ದಂತ ಕ್ಷಯವನ್ನುಂಟುಮಾಡುತ್ತವೆ.

ಆದುದರಿಂದ ಯಾವಾಗಲೂ ಆಹಾರವನ್ನು ಸೇವಿಸಿದ ನಂತರ ಕೋಲ್ಗೇಟ್ ರೀತಿಯಲ್ಲಿ ಹಲ್ಲುಜ್ಜಿರಿ. ನಿಮ್ಮ ಶ್ವಾಸವನ್ನು ಶುಚಿಗೊಳಿಸಲು, ಹಲ್ಲುಗಳನ್ನು ಬಿಳುಪಾಗಿಸಲು ಮತ್ತು ದಂತಕ್ಷಯವನ್ನು ಎದುರಿಸಲು ಅದು ಅತ್ಯಂತ ಪರಿಣಾಮಕಾರಿ ಎಂದು ಪ್ರಮಾಣಿತವಾಗಿದೆ.

ಕೋಲ್ಗೇಟ್‌ನಲ್ಲಿ ಆಹ್ಲಾದಕರವಾದ ಪೆಪ್ಪರ್‌ಮಿಂಟ್‌ನ ರುಚಿಯಿದೆ. ಆದ್ದರಿಂದ, ಅದರಿಂದ ಹಲ್ಲುಜ್ಜುವುದು ಆನಂದದಾಯಕವಾಗುತ್ತದೆ.

**ಕೋಲ್ಗೇಟ್‌ನ ವಿಶ್ವಸನೀಯ ಸೂತ್ರವು ಕೆಲಸ ಮಾಡುವ ರೀತಿ:**



ಉಸಿರಿನ ದುರ್ವಾಸನೆಯನ್ನು ಮತ್ತು ದಂತಕ್ಷಯವನ್ನು ಉಂಟುಮಾಡುವ ರೋಗಾಣುಗಳು ನಿಮ್ಮ ಹಲ್ಲುಗಳೆಡೆಯಲ್ಲಿ ಸಿಕ್ಕಿಕೊಂಡ ಆಹಾರ ಕಣಗಳಲ್ಲಿ ಬೆಳೆಯುತ್ತವೆ..



ಕೋಲ್ಗೇಟ್‌ನ ಅಪೂರ್ವವಾದ ಕಾರ್ಯಶೀಲ ನೊರೆ ಹಲ್ಲುಗಳೆಡೆಯನ್ನು ಆಳವಾಗಿ ಪ್ರವೇಶಿಸುತ್ತದೆ ಮತ್ತು ಅಪಾಯಕರವಾದ ಆಹಾರ ಕಣಗಳನ್ನೂ ರೋಗಾಣುಗಳನ್ನೂ ಹೋಗಲಾಡಿಸುತ್ತದೆ.



ಫಲಿತಾಂಶ: ಆಕರ್ಷಕವಾದ, ಬಿಳುಪಾದ ಹಲ್ಲುಗಳು. ಆತ್ಮವಿಶ್ವಾಸವನ್ನುಂಟುಮಾಡುವ ಶುಚಿಯಾದ ಉಸಿರು ಮತ್ತು ದಂತಕ್ಷಯದ ವಿರುದ್ಧ ರಕ್ಷಣೆ.

**ಕೋಲ್ಗೇಟ್ ಡೆಂಟಲ್ ಕ್ರೀಮ್‌ನಿಂದ**
**ಉಸಿರಿನ ದುರ್ವಾಸನೆಯನ್ನು**
**ನಿವಾರಿಸಿರಿ...**
**ದಂತಕ್ಷಯವನ್ನು ಎದುರಿಸಿರಿ.**



# ಹಣ ಕೂಡಿಡಬೇಡಿ ಯೋಗಾಭ್ಯಾಸ ಮಾಡಿರಿ

ಮೂಲ ಮರಾಠಿ:

**ಗಂಗಾಧರ ಗಾಡಗೀಳ**

ಅನುವಾದ:

**ಜನಾರ್ದನ ಕುಲಕರ್ಣಿ**

ನಮ್ಮದು ಸಮಾಜವಾದಿ ರಾಷ್ಟ್ರವೆಂದು ಸಂವಿಧಾನದಲ್ಲಿ ಹೇಳಿರುವುದರಿಂದ ನಾವು ಸಂಪತ್ತು ಸಂಚಯಿಸುವ ಅಥವಾ ಶ್ರೀಮಂತರಾಗುವ ಕ್ರಮವನ್ನು ನಮ್ಮ ಸರಕಾರ ಎಂದಿಗೂ ಸಹಿಸದು. ನಮ್ಮ ರಾಷ್ಟ್ರಪಿತನನ್ನೇ ಉದಾಹರಣೆಗೆ ತೆಗೆದುಕೊಳ್ಳಿ. ತುಂಡು ಪಂಚೆಯನ್ನು ಟೊಂಕಕ್ಕೆ ಕಟ್ಟಿಕೊಂಡು– ಆ ಟೊಂಕದಲ್ಲಿ ಒಂದಿಷ್ಟು ಕಾಸಾದರೂ ಇರಲೆಂದು ಆತ ಬಯಸಲಿಲ್ಲ– ಬೆತ್ತಲೆ ಫಕೀರನಾಗಿಯೇ ಬಾಳಿದ. ಮಹಾತ್ಮಾಜಿಯನ್ನೇ ಆದರ್ಶವಾಗಿಟ್ಟುಕೊಂಡು ನಾವೆಲ್ಲ ಹಾಗೆಯೇ ಬೆತ್ತಲೆ ಫಕೀರರಾಗಿಯೇ ಇರಬೇಕೆಂದು ಸರಕಾರ ಬಯಸುತ್ತದೆ. ಅದರ ಈ ಬಯಕೆಗೆ ಅದರದೇ ಅಂಗಗಳಾದ ಜೀವವಿಮಾ ಮಹಾಮಂಡಳ, ಯೂನಿಟ್ ಟ್ರಸ್ಟ್, ಬ್ಯಾಂಕುಗಳು ಪುಟ ಕೊಡುತ್ತಲೇ ಇರುತ್ತವೆ. ಶ್ರೀಮಂತ – ಬಡವ ಭೇದವಿಲ್ಲದೆ ಸಕಲ ಭಾರತೀಯರಿಗೆ ಒಂದೇ ನ್ಯಾಯವನ್ನು ಅನ್ವಯಿಸಿವೆ ನಮ್ಮ ಸರಕಾರ ಮತ್ತು ಅದರ ಅಂಗ ಸಂಸ್ಥೆಗಳು. ನಮ್ಮ ನಾಗರಿಕನು ಬೆತ್ತಲೆ ಫಕೀರನಾಗಬೇಕೆಂಬ ಅದರ ಈ ಘನೋದ್ದೇಶವನ್ನು ನಮ್ಮ ವೃದ್ಧರು ಸ್ವಲ್ಪ ಗಮನಿಸಬೇಕು. (ವೃದ್ಧಾಪ್ಯಕ್ಕೆ ಹತ್ತಿರವಿರುವವರಂತೂ ಈ ಕಡೆ ಗಮನ ಹರಿಸಬೇಕಾದ್ದು ಅತ್ಯವಶ್ಯ.) ಯಾಕಂದರೆ ಅವರು ಮುಪ್ಪಿನ ದಿನಗಳಿಗಾಗಿ ಎಂದು ಏನಾದರೂ ಕೂಡಿಡುವ ಪ್ರಯತ್ನ ಮಾಡಿದಷ್ಟೂ ಸರಕಾರ ಅವರನ್ನು ವನವಾಸಕ್ಕೆ ಕಳಿಸುವ ವ್ಯವಸ್ಥೆಯನ್ನು ಮಾಡುತ್ತಲೇ ಇರುತ್ತದೆ.

ಈ ವ್ಯವಸ್ಥೆಗಾಗಿ ಸರಕಾರದ ಬಳಿ ಇರುವ ಒಳ್ಳೆಯ ಉಪಾಯವೆಂದರೆ ಬೆಲೆಯೇರಿಕೆ. ಈ ಕ್ರಮದ ಧಗೆ ಸ್ವಲ್ಪ ಕಡಿಮೆಯಾಗುತ್ತಲೇ ಮತ್ತೆ ನಾಗರಿಕನಿಗೆ ಥಂಡಿ ಹತ್ತತೊಡಗುತ್ತದೆ. ಅಂಥ ಸಂದರ್ಭದಲ್ಲಿ ಮತ್ತೆ ಗಾಳಿ ಬೀಸುತ್ತದೆ. ಇಲ್ಲವೆ ಕಡ್ಡಿ ಕೊರೆದು ಕಿಚ್ಚೆಬ್ಬಿಸುತ್ತದೆ ಸರಕಾರ. ಕಳೆದ ವರ್ಷವನ್ನೇ ಜ್ಞಾಪಿಸಿಕೊಳ್ಳಿ. ಆಗ ಅವಶ್ಯಕ ವಸ್ತುಗಳ ಬೆಲೆ ಸುಮಾರು ೧೮ ಪಟ್ಟು ಏರಿದವು. ಆಗ

ಮುಪ್ಪಿಗೆಂದು ೧೦ ಸಾವಿರ ರೂಪಾಯಿಗಳನ್ನು ಯಾರಾದರೂ ಕ್ಷೇಮ ನಿಧಿಯಲ್ಲಿ (ಪ್ರಾವಿಡೆಂಟ್ ಫಂಡ್) ಜಮೆಯಾಗಿಟ್ಟಿದ್ದರೆ ಹೋದ ವರುಷದ ಪ್ರಮಾಣದಲ್ಲಿ ಆ ೧೦ ಸಾವಿರ ರೂಪಾಯಿಗಳು ಮೊತ್ತದಲ್ಲಿ ಅಷ್ಟೇ ಆದರೂ ಆ ಮೊತ್ತದ ಕ್ರಯ ಮೌಲ್ಯ ಕೇವಲ ೮೫೦೦ ರೂಪಾಯಿಗಳಾದುವು. ಕ್ರಯ ಶಕ್ತಿ ಶೇಕಡಾ ೧೫ರಷ್ಟು ಕ್ಷಯಗೊಂಡಿತು. ಇದೇ ರೀತಿ ಪ್ರತಿ ವರುಷ ನಡೆದರೆ ಆ ವ್ಯಕ್ತಿ ನಿವೃತ್ತನಾಗುವ ವೇಳೆಗೆ ಆತನ ೧೦ ಸಾವಿರ ಮೊತ್ತದ ಕ್ರಯ ಮೌಲ್ಯ ಸೊನ್ನೆಯಾಗುತ್ತದೆ. ಹೀಗಾಗಿ ಸರಕಾರದ ಇಚ್ಛೆಯಂತೆ ಆತ ಬೆತ್ತಲೆ ಫಕೀರನಾಗಿ ಬಿಕ್ಕೆ ಬೇಡಬೇಕಾಗುತ್ತದೆ. ತನ್ಮೂಲಕ ಸಮಾಜವಾದದ ಸ್ವಪ್ನವೂ ಸಾಕಾರಗೊಳ್ಳುತ್ತದೆ.

ವಿಮೆಯ ಪಾಲಿಸಿಯಲ್ಲಿ ತೊಡಗಿದ ಹಣದ ಹಣೆಬರಹವೂ ಇಷ್ಟೇ. ಅಷ್ಟೇ ಅಲ್ಲ, ಬ್ಯಾಂಕು-ಅಂಚೆ ಉಳಿತಾಯ ಯೋಜನೆ ಮತ್ತು ಯೂನಿಟ್ ಟ್ರಸ್ಟುಗಳಲ್ಲಿ ಕೂಡಿಟ್ಟ ರಕಮು ಕೂಡ ಇದೇ ಗತಿ ಹೊಂದುತ್ತದೆ. ಕೂಡಿಟ್ಟವನಿಗೆ ಬೆತ್ತಲೆ ಫಕೀರನಾಗುವುದಂತೂ ತಪ್ಪಿದ್ದಲ್ಲ.

ಇಟ್ಟ ಹಣಕ್ಕೆ ಬಡ್ಡಿಯ ದರವೂ ಹೆಚ್ಚಿದೆ ಎನ್ನುತ್ತಾರೆ. ಹೆಚ್ಚಿದೆ ನಿಜ. ಹೀಗಾಗಿ ನಿಮ್ಮ ಹಣದಿಂದ ನಿಮಗಾಗುವ ಮೋಸ ಸ್ವಲ್ಪ ಮಟ್ಟಿಗೆ ಕಡಿಮೆಯಾಗುತ್ತದೆ. ಅಂದರೆ ವಸ್ತುಗಳ ಬೆಲೆ ಏರಿಕೆಯ ಕಾರಣದಿಂದಾಗಿ ಒಂದು ವರುಷದಲ್ಲಿ ಶೇಕಡಾ ೧೫ ರಷ್ಟನ್ನು ಕಳೆದುಕೊಂಡರೆ, ಶೇಕಡಾ ೧೦ ಅಥವಾ ೧೧ ರಷ್ಟು ಬಡ್ಡಿಯನ್ನು ಬ್ಯಾಂಕು ಅಥವಾ ಅಂಚೆ ಖಾತೆಗಳು ಕೊಡುತ್ತವೆ. ಅಂದರೆ ೧೦ ಸಾವಿರ ರೂಪಾಯಿಗಳು ೯೫೦೦ ರೂಪಾಯಿಗಳಾಗುತ್ತವೆ. ಆದರೂ ನೀವು ಮುಪ್ಪಿನ ಸಲುವಾಗಿ ಹಣವನ್ನು ಕೂಡಿಸುವ ಅಸಮಾಜವಾದೀ ಕಾರ್ಯಕ್ಕೆ ಕೈ ಹಾಕಿದಿರೋ ನಿಮ್ಮ ವ್ಯವಸ್ಥೆ ಅವಸ್ಥೆಗೀಡಾಗುವಂತಾಗುತ್ತದೆ.

ವಿಮಾ ಪಾಲಿಸಿಗಳ ಬಗ್ಗೆಯಂತೂ ಕೇಳುವುದೇ ಬೇಡ. ಇಲ್ಲಿ ನೀವಿಟ್ಟ ಹಣದ ಮೇಲೆಯೇ ಜೀವವಿಮಾ ಮಂಡಳಕ್ಕೆ ಶೇಕಡಾ ೭.೨೫ ರಷ್ಟು ಬಡ್ಡಿ ದೊರೆಯುತ್ತದೆ. ಅದರಲ್ಲಿ ಅರ್ಧದಷ್ಟು ಶೇಕಡಾ ೩.೫೦ ರಿಂದ ೩.೭೫ ರವರೆಗೆ ಹಣವನ್ನು ಎಲ್‌ಐಸಿ ನಿಮ್ಮ ಪವರಿನಲ್ಲಿ ಹಾಕುತ್ತದೆ. ಉಳಿದದ್ದು ಅದರ ಪಾಲಿಗೆ! ಹೇಗಿದೆ ಲೂಟಿ? ಮುಪ್ಪಿನ ಕಾಲಕ್ಕೆಂದು ನೀವು ಆಪದ್ಧನವಾಗಿ ಕೂಡಿಡುವ ಹಣ ಅವರಿಗೆ ಅನ್ನಕ್ಕೆ ಮಾರ್ಗವಾಗುತ್ತದೆ. ಹೀಗೆ ಲೂಟಿ ಮಾಡುವುದರಲ್ಲಿ ಎರಡನೆ ನಂಬರ್ ಗಳಿಸಿರುವ ಈ ಮಹಾಮಂಡಳ ತನ್ನ ಸ್ಥಾನವನ್ನೆಂದೂ ಬಿಟ್ಟುಕೊಡದಿರುವ ಪ್ರಯತ್ನದಲ್ಲೇ ಇರುತ್ತದೆ. ಅದೂ ಸಾಧ್ಯವಾಗುವ ಮಾತು. ಏಕೆಂದರೆ ಜೀವವಿಮೆಗೆ ಪರ್ಯಾಯವೇ ಇಲ್ಲವಲ್ಲ. ಮಹಾಮಂಡಳಕ್ಕೂ ಪರ್ಯಾಯವಿಲ್ಲ.

ನಿವೃತ್ತಿಯ ವಯಸ್ಸು ಸಮೀಪಿಸುತ್ತಿರುವ ನಿಮಗೆ ನಿಮ್ಮ ನಿವೃತ್ತಿ ವೇತನದ ಬಗ್ಗೆಯೂ ಇದೇ ಮಾತನ್ನು ಹೇಳಬೇಕಾಗುತ್ತದೆ. ಸರಕಾರಿ ನಿವೃತ್ತಿ ವೇತನದ ಮಾತು ಒತ್ತಟ್ಟಿಗಿರಲಿ, ಉಳಿದೆಡೆಯ ನೌಕರರ ನಿವೃತ್ತಿ ವೇತನದ ಜವಾಬ್ದಾರಿಯನ್ನು ಈ ಮಹಾಮಂಡಳಕ್ಕೆ ಒಪ್ಪಿಸಿಬಿಡುವ ಯೋಜನೆ ಇದೆಯಂತೆ. ಆದಾಯಕರ ನಿಯಮಾವಳಿಯ ೮೫ನೆಯ ನಿಯಮದಲ್ಲಿ ಹೀಗೆಯೆ ಹೇಳಲಾಗಿದೆ. ಅಂದರೆ ಒಂದು ಉದ್ಯಮದಲ್ಲಿ ಆಡಳಿತದವರು ನೌಕರರ ಸಂಬಳದ ಶೇಕಡಾ ೧೫ ರಷ್ಟನ್ನು ಪ್ರತಿ ವರುಷ ಬದಿಗಿಟ್ಟು ಅದನ್ನು ಮಹಾಮಂಡಳಕ್ಕೆ ಒಪ್ಪಿಸುವುದು. ನೌಕರನ ನಿವೃತ್ತಿಯ ನಂತರ ಮಹಾಮಂಡಳವು ಅವನಿಗೆ ಪೆನ್‌ಶನ್ ಅಥವಾ ನಿರ್ವಹಣಾ ವೇತನ ಕೊಡತೊಡಗುವುದು.

ಈ ಮಹಾಮಂಡಳ ನೀಡುವ ಪೆನ್‌ಶನ್ ಎಷ್ಟು? ಅದರಲ್ಲೂ ಮೋಸವಿದೆ. ಆ ನೌಕರನ ನಿವೃತ್ತಿಕಾಲಕ್ಕೆ ಬಡ್ಡಿ ಸಹಿತ ಜಮೆಯಾದ ಹಣದ ಶೇಕಡಾ ೬ ರಷ್ಟು ಹಣವನ್ನು ಕೊಡಲಾಗುತ್ತದೆ. ಆದರೆ ಕೇಂದ್ರ ಸರಕಾರವೂ ಪ್ರಾವಿಡೆಂಟ್ ಫಂಡಿನಲ್ಲಿ ಜಮೆಯಾದ ಹಣಕ್ಕೆ ಶೇಕಡಾ ೮॥ ದರದಲ್ಲಿ ಬಡ್ಡಿ ಕೊಡುತ್ತದೆ. ಮಹಾಮಂಡಳವು ತನ್ನ ಅಸಲಿಗೆ ಶೇಕಡಾ ೬ ರಷ್ಟು,

ಬಡ್ಡಿ ಗಳಿಸುತ್ತದೆ. ಆದರೆ ನಿವೃತ್ತರಿಗೆ ಮಾತ್ರ ಶೇಕಡಾ ೩ರ ದರದಲ್ಲಿ ವೇತನ ಕೊಡುವುದೆಂದರೇನು? ಇಲ್ಲಿ ಅಸಲು ಹಾಗೇ ಉಳಿದು ಅದಕ್ಕೆ ಬರುವ ಬಡ್ಡಿಯು ಅಥವಾ ಅದು ಗಳಿಸಿದ ಬಡ್ಡಿಯಲ್ಲಿ ಶೇಕಡಾ ೧॥ ಭಾಗ ಮಾತ್ರ ವೇತನ ರೂಪದಲ್ಲಿ ಕೊಡುತ್ತದೆ. ಹೇಗಿದೆ ಈ ಮಹಾ ಮಂಡಳದ ಮಹಾ ಕರ್ತೃತ್ವ! ಆದರೆ ಇಷ್ಟಾದರೆ ಈ ಪ್ರಕರಣ ಮುಗಿಯಿತೆಂದುಕೊಳ್ಳಬೇಡಿ. ನಿವೃತ್ತ ನೌಕರ ಗೊಟಕ್ ಎಂದರೆ ಅವನ ಪಾಲಿನ ಹಣ ಆತನ ವಾರಸುದಾರರಿಗೆ ಸಲ್ಲಬೇಕು. ಮಹಾಮಂಡಳದ ನಿಯಮಾವಳಿ ಹೀಗೆ ಹೇಳುವುದಿಲ್ಲ. ಯಾಕೆಂದರೆ ಹಣ ಕೊಡುವುದೆಂದರೇನು ಸುಲಭವೆ? ಹುಡುಗಾಟಿಕೆಯೆ? ಭಾರತೀಯ ನಾಗರಿಕನನ್ನು ಚಿತ್ತಾಲೆ ಫಕೀರನನ್ನಾಗಿ ಮಾಡುವುದು ನಮ್ಮ ರಾಷ್ಟ್ರೀಯ ಧ್ಯೇಯವಾಗಿದೆಯಲ್ಲವೆ? ಅಂತೆಯೇ ನಿವೃತ್ತ ನೌಕರರ ಸತ್ತರೆ ಅವನಿಟ್ಟ ನಿಧಿಯೂ ಅವನೊಂದಿಗೆ ಕೈಲಾಸವಾಸಿಯಾಗುವುದು. ಆಸ್ತಿ-ಪಾಸ್ತಿ-ಗಂಟು ಸಾಕಷ್ಟಿದ್ದರೆ ಮಾತ್ರ ಸರಕಾರ ಇಸ್ಟೇಟ್ ಡ್ಯೂಟಿಯನ್ನು ಆಕರಿಸುತ್ತದೆ. ಆದರೆ ಜೀವವಿಮಾ ಮಂಡಳ ಮಾತ್ರ ಆಸ್ತಿ-ಪಾಸ್ತಿ-ಗಂಟು ಎಷ್ಟಿದ್ದರೇನಂತೆ, ಬರತಕ್ಕದ್ದು ಬರಲೇಬೇಕು ಎಂಬ ಧೋರಣೆ ತಳೆದು ಪೆನ್‌ಶನ್‌ದಾರ ನಿಧನನಾದರೆ ಆತನ ಹಣವನ್ನು ನುಂಗಿ ನೀರು ಕುಡಿಯುತ್ತದೆ. ತಾನು ಹೀಗೆ ಏಕೆ ಮಾಡುತ್ತದೆನ್ನುವ ಬಗ್ಗೆ ಸುದೀರ್ಘವಾದ ಮತ್ತು ನಿಯಮಾನುಸಾರವಾದ ಕಾರಣಗಳನ್ನು ವಿವರಿಸುತ್ತದೆ. ಸರ್ವೇಸಾಮಾನ್ಯವಾಗಿ ಎಲ್ಲ ಸಹಕಾರಿ ಸಂಘಟನೆಗಳಲ್ಲಿ ಈ ರೀತಿ ನಡೆಯುತ್ತಿರುತ್ತದೆ. ಏಕೆಂದರೆ ಅವುಗಳ ಮುಖ್ಯಸ್ಥ



ರಿಗೆ ಒಳ್ಳೆಯ 'ತಲೆ'ಯಿದೆ.

ಪ್ರಾವಿಡೆಂಟ್ ಫಂಡಿನ ಮೇಲೆ ಈಗ ಶೇಕಡಾ ೮॥ ದರದ ಬಡ್ಡಿ ಕೊಡುತ್ತಲಿದ್ದಾರೆ. ಅದೇನು ಕಡಿಮೆಯೇ ಎಂದು ನೀವು ಕೇಳಬಹುದು. ಆದರೆ ಈ ಬಡ್ಡಿ ದರದ ಹೆಚ್ಚಳವಾದದ್ದು ತೀರ ಇತ್ತೀಚೆಗೆ ಸ್ವಾಮಿ. ಬೆಲೆ ಏರಿಕೆಯ ದೃಷ್ಟಿಯಿಂದ ನೋಡಿದರೆ ಈ ಹೆಚ್ಚಳವೇನೂ ಗಮನಾರ್ಹವಲ್ಲ. ಜೀವವಿಮಾ ಮಂಡಳಿ ಕೂಡ ತನ್ನ ಬಡ್ಡೀ ದರವನ್ನು ಶೇಕಡಾ ೧೧ಕ್ಕೇರಿಸಿದೆ. ಆದರೆ ಪೇಟೆ ಉರಿದೇಳುವುದೇನು ನಿಂತಿದೆಯೇ? ಅದು ಉರಿದೇ ಉರಿಯುತ್ತದೆ. ಇಂಥದರಲ್ಲಿಯೇ ನೌಕರರ, ನಾಗರಿಕರ ಲೂಟಿ ನಡೆಸಿ (ಅಂದರೆ ಉರಿಯುವ ಮನೆಗಳ ಗಳ ಹಿಡಿದುಕೊಂಡಂತೆ) ಆ ಮೇಲೆ ಬಡ್ಡೀದರ ಹೆಚ್ಚಿಸಿದ್ದೇವೆ ಎಂಬ ಘೋಷಣೆ ನಡೆಸುತ್ತದೆ. ಹೇಗಿದೆ ಮಸಲತ್ತು?

ಬಡ್ಡಿಯ ದರ ಹೆಚ್ಚಿಸುವುದರಿಂದ ಸರಕಾರಕ್ಕೆ ಆಗಬೇಕಾದ ನಷ್ಟವೇನಿಲ್ಲ. ನಷ್ಟ ಠೇವಣಿದಾರನಿಗೇ. ಅದು ಯಾವ ಯೋಚನೆ–ವಿವಂಚನೆಯಿಲ್ಲದೇ ಬ್ಯಾಂಕು ಮತ್ತು ಅಂಚೆ ಇಲಾಖೆಗಳಿಗೆ ಬಡ್ಡಿ ದರ ಹೆಚ್ಚಿಸಲು ಫರಮಾನು ಕಳಿಸುತ್ತದೆ. ಕೆಲ ದಿನಗಳ ಹಿಂದೆ ಸರಕಾರ ಕಲ್ಲಿದ್ದಲಿ ಗಣಿ ಕಾರ್ಮಿಕರಿಗೆಂದು ೧೧೫ ಕೋಟಿ ರೂಪಾಯಿಗಳನ್ನು ನೀಡಿತು. ಅದೇನು ಸ್ವಂತ ಬೊಕ್ಕಸದ್ದೆ? ಸರ್ವಥಾ ಅಲ್ಲ. ಏರುತ್ತ ನಡೆದಿರುವ ಬೆಲೆಗಳಿಂದ ನಮ್ಮ ನಿಮ್ಮೆಲ್ಲರ ಕಿಸೆಯಿಂದ ಪಡೆದ ಹಣ.

ಜನರಿಂದ ಕಡಿಮೆ ಬಡ್ಡೀದರದಲ್ಲಿ ಸರಕಾರ ಸಾಲ ಎತ್ತುತ್ತದೆ. ಆ ಹಣವನ್ನು ಲೋಕಹಿತಕ್ಕಾಗಿ ಬಳಸುತ್ತದೆ. ಅಂದ ಮೇಲೆ ತಕರಾರೇನು? ಎಂದೂ ನೀವು ಪ್ರಶ್ನಿಸಬಹುದು. ಈ ಹಣವನ್ನು ಸರಕಾರ ಉಕ್ಕು–ಯಂತ್ರೋಪಕರಣಗಳ ಕಾರಖಾನೆಯನ್ನು ತೆರೆಯುವುದಕ್ಕೆ ಬಳಸುತ್ತದೆ ಎಂದೂ ನೀವು ವಾದಿಸಬಹುದು. ಈ ಉಕ್ಕು ಯಂತ್ರೋಪಕರಣಗಳ ಅಭಾವವಂತೂ ಎಂದಿಗೂ ತಪ್ಪದ್ದು. ಅಲ್ಲದೆ ಈ ಸ್ಥಾವರಗಳಲ್ಲಿ ಕಾರ್ಯವಿಳಂಬ, ಕೆಲಸಗೇಡಿತನಗಳೂ ತಪ್ಪವು. ಭೆಲ್ (BHEL)ನ ವಿದ್ಯುತ್ ಉತ್ಪಾದಕ ಜನರೇಟರುಗಳು ಮೇಲಿಂದ ಮೇಲೆ ಮೊಂಡಾಟ ಮಾಡುತ್ತವೆ. ಹೀಗೇ ನಡೆದಿದೆ, ನಡೆಯುತ್ತದೆ. ಸಾವಿರಾರು ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ ಪ್ರಾರಂಭಿಸಲ್ಪಟ್ಟ ಈ ಉದ್ಯಮಗಳು ಕಳೆದ ವರ್ಷದಲ್ಲಿ ೧೪ ಕೋಟಿ ರೂಪಾಯಿಗಳ ಹಾನಿಗೆ ಕಾರಣವಾದವು. ಆದರೆ ನಮ್ಮ ಸರಕಾರದ ಉದ್ದೇಶ ಒಳ್ಳೆಯದಾಗಿಯೇ ಇರುವುದರಿಂದ ಈ ಬಗ್ಗೆ ಮಾತಾಡಬಾರದು. ಯಾವ ಸಂಶಯಕ್ಕೂ ಆಸ್ಪದವೀಯಬಾರದು.

ಈ ರೀತಿ ನಿಮ್ಮ ಹಣ ಪೋಲಾಗುವುದರಿಂದ ನೀವು ಮುಪ್ಪಿನ ಕಾಲಕ್ಕೆಂದು ಹಣ ಕೂಡಿಸಲು ಪ್ರಯತ್ನಿಸಬೇಡಿ. ಅದು ವ್ಯರ್ಥ ಯತ್ನವಾಗುತ್ತದೆ. ಮುಪ್ಪಿನಲ್ಲಿ ಸುಖವಾಗಿರಬೇಕೆಂದರೆ ಯೋಗಾಭ್ಯಾಸ ಮಾಡಿರಿ. ಏಕೆಂದರೆ ಯೋಗಾಭ್ಯಾಸ ಎಷ್ಟೋ ಹೊಸ ಶಕ್ತಿಗಳನ್ನು ನಿಮಗೆ ತಂದುಕೊಡುತ್ತದೆ. ಬೆತ್ತಲೆ ಫಕೀರನಾಗಲು ಗಾಳಿ ತಿಂದು ಬದುಕಲು ಯೋಗಾಭ್ಯಾಸದಿಂದ ಸಾಧ್ಯವಾಗಲೂಬಹುದಾದ್ದರಿಂದ ಯೋಗಾಭ್ಯಾಸ ಮಾಡಿರಿ. ✡



ಪ್ರತಿಯೊಬ್ಬ ವ್ಯಕ್ತಿಯ ನಿರ್ಮಾಣವೂ ಸಭ್ಯತನ, ಅಸಭ್ಯತನಗಳ ಮಿಶ್ರಣದಿಂದಾಗಿರುತ್ತದೆ. ಅಂತೆಯೇ ಆತನ ವ್ಯಕ್ತಿತ್ವ ರೂಪಿಸುವಲ್ಲಿ ಅವುಗಳ ಕೈ ಇರುತ್ತದೆ.

—ಮೈಕಾಲಾರಿನ್

# ದೇವರಲ್ಲಿ ನಾವು ನಂಬಿಕೆ ಇಡಬೇಕೆ?

ಮಾರ್ಚ್ 'ಕಸ್ತೂರಿ'ಯಲ್ಲಿ ಡಾ. ಎಂ. ಎಸ್. ಕಿರ್ಲೋಸ್ಕರರವರು ಬರೆದ ಲೇಖನ ಓದುಗರಿಂದ ತೀವ್ರ ಪ್ರತಿಕ್ರಿಯೆಗೆ ಒಳಗಾಗಿದೆ. ಕೆಲವೊಂದು ಆಯ್ದ ಪ್ರತಿಕ್ರಿಯೆಗಳನ್ನಿಲ್ಲಿ ನೋಡಬಹುದು.

ದೇವರಲ್ಲಿ ನಾವು ನಂಬಿಕೆ ಇಡಬೇಕೆ?" ಎಂಬ ಡಾ. ಎಂ. ಎಸ್. ಕಿರ್ಲೋಸ್ಕರರ ವೈಚಾರಿಕ ಲೇಖನ ಹೊತ್ತು ತಂದ ಮಾರ್ಚ್ ತಿಂಗಳಿನ 'ಕಸ್ತೂರಿ'ಗೆ ಸ್ವಾಗತ. ದೇವನ ಅಸ್ತಿತ್ವದ ಬಗ್ಗೆ 'ಇರಬಹುದು, ಆಗಿರಬಹುದು, ಸಾಧ್ಯವಿರಲೂ ಬಹುದು' ಎಂಬ, ತ್ರಿಶಂಕು ಆಂದೋಲಕದಂತೆ ಹುಯ್ದಾಡುವ ಆಸ್ತಿಕರಿಗಿಂತ, "ನೇತಿ ನೇತಿ" ಎಂಬ ಸ್ಪಷ್ಟತೆಯಲ್ಲಿ ಧೈರ್ಯವಂತಿಕೆಯಲ್ಲಿ 'ಅದು ಇಲ್ಲವೇ ಇಲ್ಲ, ಇದು ಅಲ್ಲವೇ ಅಲ್ಲ, ಅದು ಸಾಧ್ಯವೇ ಇಲ್ಲ'ವೆಂದು ಪ್ರಾಮಾಣಿಕವಾಗಿ ಘೋಷಿಸುವ ನಾಸ್ತಿಕನು ನೂರು ಪಾಲು ಮೇಲು. ಬರಿದು ಭಾವ, ಬಯಲು ಭಾವ. ಬರಿ ಭೇದ ಭಾವಗಳಿಂದ ಬಸವಳಿದು ಜನರನ್ನು ಗೊಂದಲಕ್ಕೀಡುಮಾಡುವ ಕಾಲ್ಪನಿಕ ದೇವನನ್ನು ಸೃಷ್ಟಿಸಿದ ಮಾನವನಿಗಿಂತ, ಭಾವಬಲ. ಜೀವಬಲ. ಸೃಷ್ಟಿಬಲ. ಸರ್ವ ಬಲಗಳಲ್ಲಿ ಸೃಜನಾತ್ಮಕವಾದ ನೈಸರ್ಗಿಕ ಬಲವನ್ನು ಕಂಡು, ಅದರ ಆಗು ಹೋಗುಗಳ ಆಕಸ್ಮಿಕಗಳನ್ನು ಅಳವಡಿಸಿ, ವಸ್ತುನಿಷ್ಠನೆನಿಸುವ ಕಾಲ್ಪನಿಕ ದೇವರನ್ನು ನಿರ್ಮಿಸದ ವಾಸ್ತವವಾದಿ ಮನುಷ್ಯನೇ ಮೇಲು.

ಅನಾಲೋಚಿತವಾದ, ನಿರಾಧಾರವಾದ ನಿರ್ಧಾರವಾಗದೆ. ಸಾಕ್ಷ್ಯಾಧಾರಗಳಿಲ್ಲದ, ಇಲ್ಲದಿರುವ 'ದೇವ'ರೆಂಬ ವಸ್ತುವಿಗಾಗಿ ಪರದಾಡಿ, ಬುದ್ಧಿ ಭ್ರಮೆಗೊಳಿಸಿ, ಮನದಲ್ಲಿ ಗೊಂದಲದ ಗಾಳಿ

# ದೇವರೆಂಬ ಗೊಂದಲವೇಕೆ?

ವಿಷ್ಟಿಸಿ, ವೈಚಾರಿಕ ಶಕ್ತಿಯನ್ನು ಅಂಧ ಶ್ರದ್ಧೆಯ ಮುಸುಕಿನಲ್ಲಿ ಮುಳುಗಿಸಿ, ಮಿದುಳಿನ ಶಕ್ತಿಯನ್ನು ಮೊಂಡು ಮಾಡುವ ದೇವ ಪ್ರಚಾರಕರು ಹಾಗೂ ಅವರಿಂದ ನಿರ್ಮಿತರಾದ ದೇವರುಗಳು ಅವಶ್ಯ ಲಾಗ್ರವಾಗಿ ಶಬ್ದಕೋಶಗಳಿಂದ ದೂರೀಕರಿಸಿದರೆ ಬುದ್ಧಿ ಶುಚಿ, ಬಾಳು ಶುಚಿ, ಜೀವನದ ನಿರ್ಭರತೆ ಹಾಗೂ ವಾಸ್ತವಿಕತೆಗಳಿಗೆ ಹೊಸ ರುಚಿ.

ಭಿನ್ನ ಮನ, ಭಿನ್ನ ಜನ, ವಿಭಿನ್ನವಾದ ದೇವರುಗಳನ್ನೂ ಧರ್ಮಗಳನ್ನೂ ಸೃಜಿಸಿ, ಇಡೀ ಮಾನವಕುಲವನ್ನೇ ವಿಭಿನ್ನ ಧರ್ಮ ದಾರಿಗಳಲ್ಲಿ, ಎಳೆದು, ಮೇಲು ಕೀಳುಗಳೆಂಬ ವೈಷಮ್ಯಗಳಲ್ಲಿ ನೂಕಿ, ಈರ್ಷ್ಯೆ, ದ್ವೇಷ, ಮತ್ಸರ ಸಂಘರ್ಷಗಳಲ್ಲಿ ಸುತ್ತಿ ಪರಿತಪಿಸಹಚ್ಚಿದ ದೇವಮಾನವರು ಪ್ರವಾದಿಗಳು ಸಮಾಜ ಸುಧಾರಕರಲ್ಲ ಸಮಾಜಭಾಜಕರು. ಹಿಂದು, ಮುಸ್ಲಿಮ್, ಕ್ರೈಸ್ತ, ಬೌದ್ಧ, ಜೈನ, ಪಾರ್ಸಿ, ಕನ್ಫ್ಯೂಶಿಯಸ್ ಎಂದು ನಾನಾ ವಿಭಿನ್ನ ನಾಮ ಹೊಂದಿ ಐಕ್ಯದಿಂದ ಮಾನವೀಯ ಅನೈಕ್ಯದ ದಾರಿಗೆಳೆಯುವ ಈ ಧರ್ಮಸಂಸ್ಥಾಪರಿಗೆ ಬೇರೆ ಕೆಲಸವಿರಲಿಲ್ಲವೇನೋ? ಅವರು ಬಿತ್ತಿದ ಬೇರೆ ಬೇರೆ ಬೀಜಗಳು ಅಂಕುರವಾಗಿ ಬೆಳೆದು, ಮಹಾ ವಿಷವೃಕ್ಷಗಳಾಗಿ, ಜಗತ್ತಿಂದು ಛಿದ್ರ ವಿಚ್ಛಿದ್ರವಾಗಿದೆ.

ವಿಶ್ವ, ಜಗತ್ತು, ಜೀವ ಇವೆಲ್ಲವೂ ಒಂದು ಅವಿಭಾಜ್ಯ ಪರಾಶಕ್ತಿಯ ಅಂಗಗಳಾಗಿದ್ದು ಅವುಗಳ ಸಹಜ ಕ್ರಿಯೆಯು ವಿವಿಧ ಸೃಜನಾತ್ಮಕ ಆಗುಹೋಗುಗಳ ಕೊಂಡಿಗಳು. ಆ ಕೊಂಡಿಗಳನ್ನು ಬಿಡಿಸಲಾರದಷ್ಟು ಬೆಸುಗೆ, ಗಾಳಿ, ಮಳೆ, ಭೂಕಂಪ, ವಡವಾನಲ, ಸಾಗರ ಉಕ್ಕೇರುವುದು, ಗ್ರಹಣ, ಉಲ್ಕಾಪಾತ, ಧೂಮಕೇತು, ದಿನ ರಾತ್ರಿ ಎಲ್ಲವೂ ಎಲ್ಲವೂ ಒಂದು ಶಕ್ತಿಯ ಸೂತ್ರಕ್ಕೇ (ದೇವನಿಗಲ್ಲ) ಅಳವಡಿಸಲ್ಪಟ್ಟಿವೆಯೇ ಹೊರತು, ತಂಡೋಪತಂಡವಾದ ಕಾಲ್ಪನಿಕ ದೇವತೆಗಳಿಗೆ ಸಂಬಂಧಿಸಿಲ್ಲ.

ಖಗ, ಮೃಗ, ತೃಣ, ಕಾಷ್ಟ, ಕಲ್ಲುಗಳಲ್ಲಿಯೂ ಭಾವ ಬೆರೆಸಿ, ಜೀವರನು ಕಾಣ ಹೋಗಿ, ಏನೂ ಕಾಣದೆ, 'ಏನೇನೋ ಮಹತ್ತರವಾದುದನ್ನು ಕಂಡೆನೆಂಬ' ಮಂಕು ಬೂದಿಯನ್ನೆರಚುವ ಪವಾಡ ಪುರುಷರ ಕಪಟ ಸಾಕಿನ್ನು. ಇಂಥ ಎಲ್ಲಿಯೂ ಕಾಣದ ಅಂಧತೆ ನಮ್ಮ ಭಾರತದಲ್ಲಿ ಇದ್ದುದರಿಂದ, ಬುದ್ಧಿ ಹೀನರಾಗಿ, ಕೇವಲ ನಿರ್ಮಲತೆಯ ವಿಚಾರಗಳನ್ನೇ ಹೊತ್ತು, ಆ ವಿಚಾರಗಳಿಗೆ ಆಧ್ಯಾತ್ಮಿಕತೆಯೆಂಬ ಆತ್ಮಸಂಬಂಧೀಕೃತ ಜ್ಞಾನದ ಮೃಗಜಲದ ಬೆನ್ನಡರಿ, ವಿಜ್ಞಾನ, ತಾಂತ್ರಿಕತೆ, ರಸಾಯನಶಾಸ್ತ್ರ, ಭೌತಶಾಸ್ತ್ರ ಮುಂತಾದವುಗಳಲ್ಲಿ ಹಿಂದುಳಿದು, ಭಾರತವನ್ನು ದಾರಿದ್ರ್ಯವೆಡೆಗೆ ನೂಕಿದ ಕರುಡು ದೇವ ಮಾನವರ ದಾಳಿ ಸಾಕಿನ್ನು.

ನಮಗೆ ಹಾಗೂ ಜಗತ್ತಿಗೆ ಬೇಕಾದುದು ವಾಸ್ತವಿಕ ಸರ್ವತೋಮುಖ ಚಿಂತನೆ, ಸತ್ಯ ಸದ್ವರ್ತನೆ, ಸರ್ವ ಪ್ರಗತಿ, ಸಹಬಾಳ್ವೆ, ಸಹತೇಜಸ್ವ, . ಸರ್ವಸಿದ್ಧಿ ಸಮಾಗಮ. ಇದೇ ಇಲ್ಲ ಇಲ್ಲವೆಂಬ ಸ್ಥಿತಿಯಿಂದ ಇದೆ ಇದೆ ಎಂಬ ದೃಢತೆಯ, ನಿರ್ಮಲತೆಯ, ಆಸೆಯ ಸೃಜ ಜಗತ್ತಿಗೆ ಕೊಂಡೊಯ್ವ ದಾರಿ, ದೇವರೆಂಬ ಗೊಂದಲವಿಲ್ಲದ ಪ್ರಶಾಂತ ದಾರಿ. ಗುರಿಯ ತಲುಪಿದರೇನು? ತಲುಪದಿದ್ದರೆ ಏನು? ಪ್ರಶಾಂತತೆಯ ಪ್ರಗತಿಯ ದಾರಿ ಸಾಕೆಮಗೆ. ಅದರಲ್ಲಿ ನಾವು ಸಂತೃಪ್ತರು.

# ಬದುಕಿನ ಸತ್ಯವೇ ದೇವರು

ದೇವರು– ಹಾಗೆಂದರೇನು? ಇದು ನಿಜಕ್ಕೂ ಅತ್ಯಂತ ಮಹತ್ವದ ಚಿಂತನಾತ್ಮಕವೂ ವಿಶ್ಲೇಷಣಾತ್ಮಕವೂ ಆದ ಪ್ರಶ್ನೆ; ಈ ಭೂಮಿಯ ಮೇಲೆ ಬದುಕಿರುವ ಪ್ರತಿಯೊಬ್ಬ ಮಾನವನೂ ವಿಚಾರಮಾಡಬೇಕಾದ ಪ್ರಶ್ನೆ. ದೇವರು ಎಂದರೇನು? ಮಾನವ ವಿಚಾರಮಾಡುವ ಶಕ್ತಿಯನ್ನು ಬೆಳೆಯಿಸಿಕೊಂಡಾಗಿನಿಂದ ದೇವರ ಅನ್ವೇಷಣೆಯನ್ನು ಮಾಡುತ್ತಲೇ ಬಂದಿದ್ದಾನೆ. ಭವಿಷ್ಯ ಗರ್ಭದಲ್ಲಿ ನಿಗೂಢ ರೀತಿಯಲ್ಲಿ ಅಡಗಿರುವ ದೇವರನ್ನು, ಬದುಕಿನ ಸತ್ಯವನ್ನು, ಅಷ್ಟೇ ಮುಖ್ಯವಾಗಿ ನಿರ್ವಿಕಾರವೂ ಸ್ಪಷ್ಟವೂ ಆದ ರೀತಿಯಲ್ಲಿ ಅನ್ವೇಷಣೆ ಮಾಡುವುದೇ ಜೀವನದ ಮೂಲಭೂತ ಉದ್ದೇಶವಾಗಿದೆ.

ಅತ್ಯಂತ ಪವಿತ್ರವೂ ಚಿರಂತನವೂ ಪರಮ ಮೌಲಿಕವೂ ಆದ ಧಾರ್ಮಿಕ ಇತಿಹಾಸವುಳ್ಳ ಭವ್ಯ ಭಾರತ ದೇಶದಲ್ಲಿ ದೇವರ ವಿಷಯದಲ್ಲಿ ಬದುಕಿನ ಸತ್ಯದ ವಿಷಯದಲ್ಲಿ ವಿವೇಕಶೂನ್ಯರಾಗಿ ವರ್ತಿಸುವುದನ್ನು ನಾವಿಂದು ಕಾಣುತ್ತಿದ್ದೇವೆ.

ಬದುಕು ಎಂದರೇನು ? ನಾವು ಬದುಕುತ್ತಿರುವುದು ಯಾತಕ್ಕಾಗಿ ಎಂದು ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳಬೇಕಾಗಿದೆ... ನಿಜಕ್ಕೂ ಜೀವನವೆಂದರೆ ವಿಚಾರಶೂನ್ಯರಾಗಿ ವಾದ ಮಾಡುವುದಾಗಲಿ, ತಮಗೆ ತಿಳಿದ ರೀತಿಯಲ್ಲಿ ವರ್ತಿಸುವುದಾದಲಿ ಅಲ್ಲ. ಬದುಕು ಅತ್ಯಂತ ಗಹನವಾದುದು, ಆಳವಾದುದು. ವಿಚಾರ ಮಾಡಿದಷ್ಟೂ ವಿಶಾಲವಾದುದು, ಅಷ್ಟೇ ನಿಗೂಢವಾದುದು. ಎಷ್ಟೆಷ್ಟು ತತ್ವರಹಿತ ವಾದ ಮಾಡುತ್ತ ಎಷ್ಟೆಷ್ಟು ವಿಚಾರಹೀನವಾಗಿ, ಅನೈತಿಕವಾಗಿ ವರ್ತಿಸುತ್ತೇವೆಯೋ ಅಷ್ಟಷ್ಟು ದೇವರಿಂದಲೂ ಬದುಕಿನ ಸತ್ಯದಿಂದಲೂ ದೂರ ಹೋಗುತ್ತಿದ್ದೇವೆ. ಮಾನವ ವೈಜ್ಞಾನಿಕವಾಗಿ ಮುಂದುವರಿಯುತ್ತ ನೈತಿಕವಾಗಿ ಹಿಂದೆ ಬೀಳುತ್ತಿದ್ದಾನೆ.

ದೇವರನ್ನು ಇಂದ್ರಿಯಗೋಚರವಾಗಿ ಕಾಣುವ ಸಾಹಸವನ್ನು ಮಾನವನು ಪ್ರಯತ್ನಿಸಬಾರದು!

ದೇವರು ಅಮೂರ್ತ ರೂಪದಲ್ಲಿರುವ ಬದುಕಿನ ಪರಿಪೂರ್ಣ ಸತ್ಯದ ಇನ್ನೊಂದು ಮುಖ.

ದೇವರೆಲ್ಲಿರುವನು? ನಾವು ಎಷ್ಟೆಷ್ಟು ದೈಹಿಕವಾಗಿಯೂ ಆಂತರಿಕವಾಗಿಯೂ ಪರಿಶುದ್ಧರಾಗಿ, ಅತೀಂದ್ರಿಯ ಧ್ಯಾನ, ತಪಸ್ಸಿನಲ್ಲಿ ತೊಡಗುತ್ತೇವೆಯೋ ಅಷ್ಟಷ್ಟು ದೇವರಿಗೆ ಸಮೀಪವಾಗುತ್ತ ಮುನ್ನಡೆಯುತ್ತೇವೆ.

ಆಧುನಿಕ ನಾಗರಿಕತೆ ಬೆಳೆದಂತೆಲ್ಲ ಅಷ್ಟೇ ವೇಗದಲ್ಲಿ ಜೀವಂತ ಮೌಲ್ಯಗಳ ಅವಸಾನವಾಗುತ್ತಿದೆ. ನಿಜಕ್ಕೂ ಈಗ ಉನ್ನತ ಜೀವನ ಮೌಲ್ಯಗಳ ಪುನರುತ್ಥಾನದ ಸಂಧಿಕಾಲವಾಗಿದೆ. ಮಾನವನು ಇಂದು ಸಾಮಾಜಿಕವಾಗಿಯೂ ನೈತಿಕವಾಗಿಯೂ ಭೂಮಿಯ ಮೇಲೆ ವಾಸಿಸುತ್ತಿರುವುದರ ವಾಸ್ತವಿಕ ಹಿನ್ನಲೆಯೇನು? ತನ್ನ ಅಸ್ತಿತ್ವಕ್ಕೆ ಅರ್ಥವೇನಿದೆ ಎಂಬುದನ್ನು ವಿಚಾರಮಾಡಬೇಕು. ಬದುಕು ಖಂಡಿತವಾಗಿಯೂ ಅತ್ಯಂತ ಅರ್ಥಗರ್ಭಿತವಾದದ್ದು. ಬದುಕಿನ ಸತ್ಯವೂ (ದೇವರು) ಅತ್ಯಂತ ಮೌಲ್ಯವುಳ್ಳದ್ದಾಗಿದೆ.

ಪ್ರಚಲಿತ ವಿದ್ಯಮಾನಗಳು ಮಾನವನನ್ನು ಬದುಕಿನ ಸತ್ಯದಿಂದ ಬಹಳ ದೂರ ಕೊಂಡೊಯ್ಯುತ್ತಿವೆ. ಬದುಕಿನ ಸತ್ಯದಿಂದ ವಂಚಿತನಾಗಿ ಬದುಕೇ ಮಿಥ್ಯ ಎಂದು ಭ್ರಮೆ ಪಡುತ್ತಿದ್ದಾನೆ. ಎಂತಹ ವಿಪರ್ಯಾಸ !

ಜೀವನವು ಮಾನವನ ಆಸೆ ಆಕಾಂಕ್ಷೆಗಳ ಈಡೇರಿಕೆಗಳಿಗಾಗಲಿ, ನೋವು ನಲಿವುಗಳಿಗಷ್ಟೇ ಆಗಲಿ ಸೀಮಿತವಾದುದಲ್ಲ. ಅದು ಇದಕ್ಕಿಂತಲೂ ಹೆಚ್ಚಿನ ಮಹತ್ವವುಳ್ಳದ್ದಾಗಿದೆ.

ಬದುಕಿನ ವೈಪರೀತ್ಯಗಳ ಅರ್ಥವೇನು ? ಜನನ,

ಬಾಲ್ಯ, ಯೌವನದಿಂದ ಮುಂದಕ್ಕೆ ದೇಹ ವಿಕಾರದಿಂದ ಕೂಡಿದ ವೃದ್ಧಾಪ್ಯ, ನಂತರ ವಿನಾಶ – ಸಾವು ?

ಇವೆಲ್ಲವುಗಳ ಅರ್ಥವೇನು ?

ನಿಜಕ್ಕೂ ಯಾವ ವೈಜ್ಞಾನಿಕ ಸಂಶೋಧಕನು ವಿನಾಶಕ ಸಾವಿನ ಹಾದಿಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಈ ವಿನಾಶದ ಸಾವಿನಿಂದ ದೂರವಾಗಿ ಬದುಕಿನ ಪೂರ್ಣತ್ವವನ್ನು ಪಡೆಯುವುದು ನಾವು ಬದುಕಿನ ಸತ್ಯ (ದೇವರನ್ನು)ವನ್ನು ಕಂಡುಕೊಂಡಾಗ ಮಾತ್ರ ಸಾಧ್ಯ.

**—ಎಚ್. ಎಸ್. ಚಂದ್ರಕಾಂತ**

---

# 'ನನ್ನದೊಂದು ಅನುಭವ'

---

ನಾಸ್ತಿಕತೆಯ ಬಗ್ಗೆ ಮಾರ್ಚ್ 'ಕಸ್ತೂರಿ'ಯಲ್ಲಿ ಹಲವು ವಿಚಾರಗಳು ವಾಚಕರ ಅವಗಾಹನೆಗೆ ಬಂದಿವೆ. ಈಗ ನಾನು ಆಸ್ತಿಕತೆಯ ಬಗ್ಗೆ ನನ್ನ ವೈಯಕ್ತಿಕ ಅನುಭವ ಮತ್ತು ವಿಚಾರಗಳನ್ನು ತಿಳಿಯಪಡಿಸುತ್ತೇನೆ.

ದೇವರಿದ್ದಾನೆಯೇ? ಇದ್ದಲ್ಲಿ ಗೋಚರನಾಗಿರಲು ಇಚ್ಛಿಸದೆ ಅಗೋಚರನಾಗಿರುವುದೇಕೆ ? ಎಂಬ ಸಂದೇಹ ಬರುತ್ತದೆ. ಆತನು ಅಗೋಚರನಾಗಿರುವುದರಿಂದಲೇ ನಾಸ್ತಿಕರ ಸಂಖ್ಯೆ ಅಧಿಕವಾಗುತ್ತಿದೆ. ನಾನು ನನ್ನ ಸ್ನೇಹಿತನೊಡನೆ ಪರೀಕ್ಷಾ ತಯಾರಿಗಾಗಿ ಒಂದು ತಿಂಗಳಿಂದ ವ್ಯಾಸಂಗ ಮಾಡುತ್ತಿದ್ದೆ. ಆ ದಿನಗಳಲ್ಲಿ ಆತನ ತಂದೆಯವರು ಪ್ರತಿ ದಿನವೂ ಥರ್ಮಾಸ್ ಫ್ಲಾಸ್ಕಿನಲ್ಲಿ ಗಟ್ಟಿ ಹಾಲು ಹಾಕಿರುವ ಕಾಫಿಯನ್ನು ಜಮೀನು ಕೆಲಸ ಕಾರ್ಯಗಳನ್ನು ಮಾಡಿಸಲು ತೆಗೆದುಕೊಂಡು ಹೋಗುತ್ತಿದ್ದರು. ಮನೆಗೆ ಮಧ್ಯಾಹ್ನ ಎರಡು ಘಂಟೆಗೆ ಬಂದು ಸ್ನಾನ ಮಾಧ್ಯಾಹ್ನಿಕ ಮಾಡಿ ಪಂಚಾಮೃತಾಭಿಷೇಕ ಮಾಡಿ ನಮಗೂ ಕೊಡುತ್ತಿದ್ದರು. ನನ್ನ ಮದುವೆಯಾಗಿ ೧೦ ವರ್ಷಗಳು ಕಳೆದ ಮೇಲೆ ಒಮ್ಮೆ ಮನೆಯಲ್ಲಿ ಅಕ್ಕಿ ರೊಟ್ಟಿಗೆ ಜೇನುತುಪ್ಪ ಹಾಕಿ ತಿನ್ನುತ್ತಿದ್ದೆ. ಆಗ ನನ್ನ ಸ್ನೇಹಿತನ ತಂದೆಯವರ ಜ್ಞಾಪಕ ಬಂತು. ನಮ್ಮ ಮನೆಯಲ್ಲಿ ಮನೆಯ ಹಾಲು, ಮೊಸರು, ತುಪ್ಪ ಜೇನುತುಪ್ಪ ಎಲ್ಲವೂ ಇದ್ದು ದೇವರಿಗೆ ಅರ್ಪಿತವಾಗುತ್ತಿಲ್ಲವಲ್ಲ ಎಂದು ಖೇದವಾಯ್ತು.

ಮಾರನೇ ದಿನದಿಂದಲೇ ಸಂಧ್ಯಾವಂದನೆ ಪುಸ್ತಕ ತೆಗೆದುಕೊಂಡು ದೇವತಾ ಪೂಜೆ, ಅಭಿಷೇಕವನ್ನು ಮಾಡಲು ಪ್ರಾರಂಭಿಸಿದೆ. ನಮ್ಮ ಮನೆ ದೇವರು ಶ್ರೀ ಶ್ರೀನಿವಾಸ ವಿಗ್ರಹವಿಲ್ಲದೆ, ಇದ್ದುದರಿಂದ ಸದ್ಗುರು ದತ್ತಾತ್ರೇಯನ ವಿಗ್ರಹ ಮತ್ತು ಪಾದುಕಗಳಿಗೆ ಶ್ರೀ ಶ್ರೀನಿವಾಸ ದೇವತಾಮುದ್ದಿಶ್ಯ, ಶ್ರೀ ಶ್ರೀನಿವಾಸ ದೇವತಾ ಪ್ರೀತ್ಯರ್ಥಂ ಎಂದು ಪಂಚಾಮೃತಾಭಿಷೇಕ, ಮಾಡುತ್ತಿದ್ದೆ. ಹೀಗೆ ಸುಮಾರು ಒಂದೂವರೆ ವರ್ಷಗಳು ದಿನವಹಿ ಮಾಡುತ್ತಿದ್ದೆ. ದತ್ತಾತ್ರೇಯನ ಫೋಟೋಕ್ಕೆ ಗಂಧದ ಕಡ್ಡಿ ಮತ್ತು ಮಂಗಳಾರತಿ ಮಾಡುವಾಗ ಗುರುಃ ಬ್ರಹ್ಮ, ಗುರುಃ ವಿಷ್ಣು... ಎಂದು ಹೇಳುತ್ತಿದ್ದೆ. ಮತ್ತೆ ಶ್ರೀ ಶ್ರೀನಿವಾಸ ದೇವರ ಫೋಟೋ ಮುಂದೆ ನಿಂತು, ಶ್ರೀನಿವಾಸ ನನಗೆ ಗುರುವಿಲ್ಲ. ಗುರು ಬೋಧೆಯಾಗಿಲ್ಲ. ನನಗೆ ಗುರು ಯಾರು ತೋರಿಸು ಎಂದು ವಿನಂತಿಸಿಕೊಳ್ಳುತ್ತಿದ್ದೆ. ಅಂಗಡಿಯಿಂದ ಹೂವಿನ ಹಾರ ತಂದು ಶ್ರೀ ಶ್ರೀನಿವಾಸ ದೇವರ ದೊಡ್ಡ ಫೋಟೋಕ್ಕೆ ಮಾಲಾರ್ಪಣೆ ಮಾಡುತ್ತಿದ್ದೆ. ದತ್ತಾತ್ರೇಯನ ಫೋಟೋಕ್ಕೆ ಮಾಲೆ ಉಳಿದಿದ್ದರೆ ಅರ್ಪಿಸುತ್ತಿದ್ದೆ. ಇಲ್ಲದಿದ್ದರೆ ಇಲ್ಲ. ಎಷ್ಟೋ ವೇಳೆ ಶ್ರೀನಿವಾಸ ದೇವರಿಗೆ ಮಾತ್ರ ನಮಸ್ಕಾರ ಮಾಡುತ್ತಿದ್ದೆ. ಅನೇಕ ವೇಳೆ ನನ್ನ ಪತ್ನಿಯು ದತ್ತನು ಸಂನ್ಯಾಸಿಯಾಗಿರುವುದರಿಂದ ನೀವು ತಾತ್ಸಾರ ಮಾಡುತ್ತೀರಿ ಎಂದು

ಹೇಳುತ್ತಿದ್ದಳು.

ಒಮ್ಮೆ ಅಂದರೆ ದಿನಾಂಕ ೨೦ ಏಪ್ರಿಲ್, ೧೯೭೫ ರಂದು ಒಂದು ರೂಪಾಯಿಗೆ ಏಳು ಮೊಳ ಸೇವಂತಿಗೆ ಹೂವಿನ ಹಾರವನ್ನು ಮನೆಗೆ ತಂದು ದತ್ತ, ಶ್ರೀನಿವಾಸರ ಫೋಟೋಗಳಿಗೆ ಅರ್ಪಣೆ ಮಾಡಿದೆನು. ಮಂಗಳಾರತಿ ಮಾಡುವಾಗ ದತ್ತನಿಗೆ ಹಾಕಿದ ಹಾರ ಒಂದು ಭಾಗದಿಂದ ಕಳಚಿ ನೆಟ್ಟಗೆ ಜೋತಾಡುತ್ತಿತ್ತು. ಮಂಗಳಾರತಿ ತಟ್ಟೆಯನ್ನು ಒಳಗೆ ಇಟ್ಟು ಹೂವಿನ ಹಾರವನ್ನು ದತ್ತನ ಫೋಟೋಗೆ ಬಿಗಿಯಾಗಿ ಸಿಕ್ಕಿಸಿದೆ. ನಂತರ ಶ್ರೀನಿವಾಸನ ಫೋಟೋದ ಮುಂದೆ ನಿಂತು ಮಂತ್ರಪುಷ್ಪವನ್ನು ಸಂಜೆ ಸುಮಾರು ೬॥ ಘಂಟೆಗೆ ಹೇಳುತ್ತಿದ್ದೆ. ಆಗ ನನ್ನ ಹಿಂಬದಿಯಲ್ಲಿ ಗೋಡೆಗೆ ನೇತು ಹಾಕಿದ್ದ ದತ್ತನ ಫೋಟೋವಿನ ಬಳಿ ಒಳ್ಳೆ ಗಂಭೀರ ಶಬ್ದ ಕೇಳಿ ಬಂತು. ಆದರೂ ನಾನು ವಿಚಲಿತನಾಗದೆ ಹಿಂಬದಿಗೆ ತಿರುಗಿಯೂ ನೋಡದೆ ಮಂತ್ರ ಹೇಳುತ್ತಿದ್ದೆ. ಕೆಲವೇ ಸೆಕೆಂಡುಗಳಲ್ಲಿ 'ಟಪ್' ಎಂಬ ಶಬ್ದವು ಕೇಳಿ ಬಂತು. ಆಗಲೂ ನಾನು ತಿರುಗಿ ನೋಡಲಿಲ್ಲ. ಅಲ್ಲೇ ಸೋಫಾದ ಮೇಲೆ ಕುಳಿತಿದ್ದ ನನ್ನ ಪತ್ನಿಯು "ನೋಡಿ ದತ್ತನು ನಿಮ್ಮ ಹಾರವನ್ನು ಎಸೆದು ಬಿಟ್ಟಿದ್ದಾನೆ" ಎಂದು ಹೇಳಿದಳು. ನನಗೆ ಆಶ್ಚರ್ಯವಾಗಿ ತಿರುಗಿ ನೋಡಿದೆ. ಹಾರವು ದತ್ತನ ಫೋಟೋದಲ್ಲಿಯೂ ಇಲ್ಲ, ಫೋಟೋವಿನ ಕೆಳಭಾಗದ ನೆಲದ ಮೇಲೆಯೂ ಇಲ್ಲದೆ ಇದ್ದುದರಿಂದ ದಿಗ್ಭ್ರಾಂತನಾದ ನಾನು ನನ್ನ ಪತ್ನಿಯನ್ನು "ಹಾರ ಎಲ್ಲಿ ಹೋಯ್ತು ?" ಎಂದು ಕೇಳಿದೆ. ಅವಳು ಹಾರವು ನಾಲ್ಕು ಮಡಿಕೆಗಳಾಗಿ ಮಾಡಲ್ಪಟ್ಟು ಬಾಗಿಲಿನ ಮೇಲೆ ಇರುವುದನ್ನು ತೋರಿಸಿದಳು.

ಆಗ ನಾನು ಆ ನಾಲ್ಕು ಮಡಿಕೆಯ ಹಾರವನ್ನು ಹಾಗೇ ಕಣ್ಣಿಗೆ ಒತ್ತಿಕೊಂಡೆನು. ಇದು ಸದ್ಗುರು ದತ್ತಾತ್ರೆಯ ಎಸೆದ ಹಾರವಲ್ಲ. ಅವನು ಇಂದು ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಕೊಟ್ಟಿರುವ ಪ್ರಸಾದವೆಂದು ಹೇಳಿ ಅವಳಿಗೆ ಮುಡಿಯಲು ಕೊಟ್ಟು ದತ್ತನಿಗೆ ನೀನೇ ಗುರು, ನೀನಲ್ಲದೆ ಇನ್ನಾವ ಗುರುವೂ ನನಗೆ ಬೇಡ ಎಂದು ಹೇಳಿ ಧೀರ್ಘದಂಡ ನಮಸ್ಕಾರ ಹಾಕಿದೆ. ಇದೇ ರೀತಿ ಇನ್ನು ಅನೇಕ ಅನುಭವಗಳು ನನಗೆ ಬಂದಿರುವುದರಿಂದ ಆಸ್ತಿಕತೆಯನ್ನು ನಾನು ಒಪ್ಪುತ್ತೇನೆ.

**—ಎನ್. ಡಿ. ವೆಂಕಟಸುಬ್ಬಯ್ಯ**

# ದೇವರನ್ನು ಮಂದಮತಿಗಳು ಮಾತ್ರ ನಿರಾಕರಿಸುತ್ತಾರೆ

ಈ ವಿಷಯವಾಗಿ ಚರ್ಚೆ ಅನಾದಿಯಿಂದಲೂ ನಡೆದುಬಂದಿದೆ. ಪರಿಹಾರಗಳು ಉಂಟಾದಂತೆ ಪ್ರತಿಹಾರಗಳೂ ಮೂಡಿಬರುತ್ತವೆ. ಈ ದಿಶೆಯಲ್ಲಿ 'ನಾಸ್ತಿಕ'ನೆಂದು ಹೇಳಿಕೊಳ್ಳುವ ಡಾ. ಎಂ. ಎಸ್. ಕಿರ್ಲೋಸ್ಕರ ಅವರ ಲೇಖನ ಪ್ರಸ್ತುತ ಲೇಖನಕ್ಕೆ ನಾಂದಿಯಾಗಿದೆ.

ಡಾ. ಕಿರ್ಲೋಸ್ಕರರು ಚಿಕಿತ್ಸಕರು, ವಿಚಾರವಾದಿಗಳು, ಆದರೆ ಹಟವಾದಿಗಳು. ತಮ್ಮ ನಿಲುವನ್ನು ಸಮರ್ಥಿಸಲು ಅನೇಕ ಉದಾಹರಣೆಗಳನ್ನು ಆಯ್ದುಕೊಂಡಿದ್ದಾರೆ. ಈ ಉದಾಹರಣೆಗಳಲ್ಲಿಯೇ ದೇವರ ಅಂಶವಿದೆ ಎಂಬುದನ್ನು ಗುರುತಿಸದೇ ಹೋದವರಲ್ಲಿ ಅವರೂ ಒಬ್ಬರು.

ಏನೇ ಇರಲಿ. ಪ್ರಸ್ತುತ ಲೇಖನದಲ್ಲಿ ಡಾ. ಕಿರ್ಲೋಸ್ಕರರ ವಿಚಾರಧಾರೆಯ ವಿವೇಚನೆಯನ್ನು ಮಾಡೋಣ ಮತ್ತು [illegible]ಸ್ವರೂಪವನ್ನು ಕಾಣಲು ಯತ್ನಿಸೋಣ.

ದೇವರು, ದಾನವರು ಮಾನಸಿಕ ಕಲ್ಪನೆಯೇ ಹೊರತು ವಾಸ್ತವವಾದುದಲ್ಲ. ಪ್ರತಿ

ಯೊರ್ವ ಮಾನವನಲ್ಲಿ ಒಳ್ಳೆಯ ಗುಣಗಳಿದ್ದಂತೆ ದುರ್ಗುಣಗಳೂ ಕೂಡಿಕೊಂಡಿವೆ. ಈ ಗುಣಗಳು ಅಗೋಚರವಾಗಿದ್ದರೂ ಕಾರ್ಯರೂಪದಲ್ಲಿ ಅವು ಗಳ ವಾಸ್ತವತೆ ತಿಳಿದುಬರುತ್ತದೆ.

ದೇವರನ್ನು ಮಾನವನು ಪ್ರತಿ ಕ್ಷಣದಲ್ಲಿಯೂ ಅನುಭವಿಸುತ್ತಾನೆ. ಜೀವನದಲ್ಲಿ ದುಃಖದಾರುಣ ಗಳೇ ದಾನವರ ವರದಾನಗಳು. ಪ್ರತಿ ಮಾನವನಲ್ಲಿ, ಅದೇಕೆ ಪ್ರತಿಯೊಂದು ಸಜೀವ ಪ್ರಾಣಿಯಲ್ಲಿ ದೇವರಿದ್ದಾನೆ. ದಾನವನಿದ್ದಾನೆ. ಯಾರಲ್ಲಿ ಯಾವ ಗುಣಗಳು ಹೆಚ್ಚಾಗಿವೆಯೋ ಅಲ್ಲಿ ಆ ವಾಸ್ತವಿ

## ದುರ್ಬಲರಿಗಿದು ದಾರಿಯೆ ?

ಕಸ್ತೂರಿಯ ವಿಚಾರವೇದಿಕೆ (ಪುಟ ೯೯, ಮಾರ್ಚ್ ೧೯೮೧)ಯಲ್ಲಿ ಮೂಡಿ ಬಂದ "ದುರ್ಬಲರ ವಿಕಾಸಕ್ಕೊಂದು ದಾರಿ" ಎಂಬ ತಿಪ್ಪಣ್ಣ ಬೂದಪ್ಪ ಅಸೂಟಿಯವರ ಲೇಖನ ನೋಡಿದ ಮೇಲೆ ಅದಕ್ಕೆ ಪ್ರತಿಕ್ರಿಯೆಯಾಗಿ ಇದನ್ನು ಬರೆಯಬೇಕಾಯಿತು.

'ಹೌದು! ದುರ್ಬಲರನ್ನು ಏನು ಮಾಡ ಬೇಕು? ಪ್ರತ್ಯೇಕವಾಗಿ ಇಟ್ಟು ಅವರ ಓಟನ್ನು ಗಳಿಸಿ ನಾವು ದೊಡ್ಡೋಕ್ಕಲಾಗು ವುದನ್ನೇ ಮುಂದುವರಿಸಬೇಕೆ? ಜಾತೀಯ ತೆಯ ಅಜ್ಯಕ್ಕೆ ತುಪ್ಪ ಹೊಯ್ಯುತ್ತಾ ಇನ್ನೊಂದು 'ದಲಿತಸ್ತಾನ'ನ್ನು ಪಾಕಿ-ಸ್ತಾನ, ಬಾಂಗ್ಲಾದೇಶಗಳಂತೆ ಭಾರತದಿಂದ ಸಿಡಿಸುವ ಅಪಾಯಕಾರೀ ಘಟನೆಯೊಂದಕ್ಕೆ ನಾಂದಿಹಾಡಬೇಕೆ?

ಈ ಮೇಲಿನ ಸಮಸ್ಯೆಗೆ ಶ್ರೀಯುತರು ಉತ್ತರ ಕೊಟ್ಟಿಲ್ಲ. ಆದುದರಿಂದಲೇ ಸಮಸ್ಯೆಯ ತಳಬುಡ ಶೋಧಿಸದ ಅವರ ಲೇಖನ ಇದುವರೆಗಿನ ಗತಾನುಗತಿಕ ರಾಜಕೀಯದ ಸುಳಿಗೆ ಸಿಲುಕಿ **ಚರ್ವಿತಚರ್ವಣ**ದ ಗಿಣಿಪಾಠ ಒಪ್ಪಿಸಿದಂತಿದೆ.

"ಒಡೆದು ಆಳುವ ನೀತಿ"ಯನ್ನು ಬಿತ್ತಿದ ಬ್ರಿಟಿಷರು ಅದರ ವಿಷಫಲವನ್ನುಣ್ಣಲು ನಮ್ಮನ್ನು ಬಿಟ್ಟು ತೆಪ್ಪಗೆ ತಮ್ಮ ದೇಶದಲ್ಲಿ ಕುಳಿತರು! ಆದರೆ ಅದನ್ನು ಚೆನ್ನಾಗಿ ಕರಗತ ಮಾಡಿಕೊಂಡ ಇಂದಿನ ರಾಜಕಾರಣಿಗಳು ದೇಶವನ್ನೇ ಪರಿಶಿಷ್ಟ ಜಾತಿ, ಪರಿಶಿಷ್ಟ ಜನಾಂಗ, ಗಿರಿಜನ ಮುಂತಾಗಿ ನಾನಾ ಜಾತಿ ವರ್ಗಗಳನ್ನು ದಿನೇ ದಿನೇ ಹುಟ್ಟು ಹಾಕುತ್ತಾ ಮತಾತೀತವೂ ವಿಶುದ್ಧ ಹೃದಯದ ಮಾನವೀಯಾಂತಃಕರಣದ್ದೂ ಆದ ಭಾರತೀಯ ಸನಾತನ ಪರಂಪರೆಯನ್ನೇ ಭಂಗಿಸಿ ಭಾರತವನ್ನು ಹರಿದು ಹಂಚಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದಾರೆ!" ಜಾತಿ ಇಲ್ಲ" ಎಂದು ಹೇಳಿಕೊಂಡು ಪ್ರಚ್ಛನ್ನ ಜಾತೀಯತೆಯ ಭೈರವಲೀಲೆ ಆಡುತ್ತಿರುವ ಇಂದಿನ ಸ್ವಾರ್ಥಸಾಧಕ ಕುಟಿಲ ರಾಜಕಾರಣಿಗಳು ಏನನ್ನು ತಾನೆ ಮಾಡಲಾರರು? ಮೂರೂ ಬಿಟ್ಟವರಿಗೆ ಯಾರೇನು ಹೇಳಿಯಾರು?

'ಈ ಸಮಸ್ಯೆಗೆ ಉತ್ತರ ಇಲ್ಲವೆ? ಇದೆ! ಹಾಗಾದರೆ ದುರ್ಬಲರನ್ನು ಏನು ಮಾಡಬೇಕು? ಅವರನ್ನು ಸಮಾಜದಲ್ಲಿ ಸಮ್ಮಿಳಿತವಾಗಿಸಿ ಅವರ ಕನಸು ಮನಸ್ಸಿನಲ್ಲೂ "ನಾವು ಹಿಂದುಳಿದವರು, ಹರಿಜನ, ಗಿರಿಜನ" ಎಂಬ ಭಾವನೆಯು ಸುಳಿಯದಂತೆ ಮಾಡುವುದೇ ಈ ಸಮಸ್ಯೆಗೆ ಸೂಕ್ತ ಸಮಾಧಾನ! 'ಜಾತಿ' ಎಂಬ ಭೂತವನ್ನು ಸಂಪೂರ್ಣವಾಗಿ ಕಿತ್ತೊಗೆದು ಓಟುಗಳಿಸುವ ಕ್ಷುಲ್ಲಕ ರಾಜಕೀಯವನ್ನು ನಿಲ್ಲಿಸಿ ಆರ್ಥಿಕ ಪರಿಗಣನೆಯಿಂದ ಸಮಾಜದಲ್ಲಿ ಯಾರು ನಿಜವಾದ ಹಿಂದುಳಿದವರು ಎಂದು ಗುರ್ತಿಸಿ ಅವರನ್ನು ಮುಂದೆ ತರಬೇಕು.

—**ಆರ್. ವೆಂಕಟೇಶ**

ಕಾಂಶ ಎದ್ದು ಕಾಣುತ್ತದೆ. ದೇವರ ವಾಸ್ತವಿಕತೆಯು ಅನುಭವ ಪ್ರತಿಯೋರ್ವನಿಗೂ ವಿವಿಧ ರೀತಿಯಲ್ಲಿ ಆಗುವದರಿಂದ ದೇವರ ವಿಷಯ ವೈವಿಧ್ಯಮಯವಾಗಿದೆ. ಇದಕ್ಕೂ ಹೆಚ್ಚಿನ ಪ್ರಮಾಣ ಏಕೆ ಬೇಕು?

ಎರಡನೆಯದಾಗಿ, ಡಾ. ಕಿರ್ಲೋಸ್ಕರರ ಉದಾಹರಣೆ ಕತ್ತಲೆಯಲ್ಲಿ ಕತ್ತಲೆಯನ್ನು ಹುಡುಕಿದಂತಾಗಿದೆ. ಕತ್ತಲೆಯಲ್ಲಿ ಬೆಳಕಿನ ಛಾಯೆ ಬಿದ್ದಾಗ ಮಾತ್ರ ವಸ್ತುಗಳು ಕಾಣುತ್ತವೆ. ಇದಕ್ಕೆ ನಂಬಿಕೆ, ವಿಶ್ವಾಸ ಮುಖ್ಯ. ದೇವರ ಅಸ್ತಿತ್ವದ ಸುಳುವು ಸಿಗಬೇಕಾದರೆ ಮೂರು ವಸ್ತುಗಳ ಅವಶ್ಯಕತೆಯಿದೆ. ಒಂದು ಅವರೇ ಹೇಳಿದಂತೆ ವಿಶ್ವಾಸ, ನಂಬಿಕೆ, ಶ್ರದ್ಧೆಗಳು ಪ್ರತಿಯೊಬ್ಬನಲ್ಲೂ ಇರಬೇಕು. ಇವು ಅತ್ಯವಶ್ಯಕ ಗುಣಗಳು. ನಂತರ ದೇವರ ಅಸ್ತಿತ್ವವನ್ನು, ಮನಗಾಣಲು ಸಾಧನೆ ಬೇಕು. ಮೂರನೆಯದಾಗಿ, ಅವನ ಮನೋಧರ್ಮವನ್ನು ಗುರುತಿಸುವ ಮನೋಧರ್ಮ ಬೇಕು.

ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ಡಾ. ಕಿರ್ಲೋಸ್ಕರರು ರೋಗ ರುಜಿನಗಳಿಗೆ ಮದ್ದು ಕೊಡುವ ಡಾಕ್ಟರರು. ಇವರಲ್ಲಿ ಔಷಧ ಪಡೆದರೆ ತಮಗೆ ಗುಣವಾಗುತ್ತದೆ ಎಂಬ ನಂಬಿಕೆ ಇಲ್ಲದಿದ್ದರೆ ರೋಗಿಗಳು ಇವರ ಹತ್ತಿರ ಬರುವದಿಲ್ಲ. ಮುಖ್ಯವಾಗಿ ಅವರಿಗೇ ತಮ್ಮಲ್ಲಿ, ಆತ್ಮವಿಶ್ವಾಸವಿರಬೇಕು. ಹಾಗೂ ರೋಗಿಗಳಲ್ಲಿ ನಂಬಿಕೆ ಬರುವ ಹಾಗೆ ಸಾಧನೆ ಮುಖ್ಯವಾದದ್ದು. ಇದಕ್ಕಾಗಿ, ಅವರು ಸತತವಾಗಿ ಅಭ್ಯಾಸದಲ್ಲಿ ನಿರತರಾಗಬೇಕಾಗುತ್ತದೆ. ಹೊಸತನ್ನು ಅರಿತು ಅಳವಡಿಸಿಕೊಳ್ಳಬೇಕಾಗುತ್ತದೆ. ಔಷಧಿಗಳಲ್ಲಿಯೂ ವಿಶ್ವಾಸವಿರಬೇಕು. ರೋಗ ರುಜಿನಗಳ ಅರಿವೂ ಕೂಡ ಬೇಕು. ಇದು ತೀರ ಅವಶ್ಯ. ಆಗಲೇ ಅವರಿಗೆ ಅವರವರ ಅಸ್ತಿತ್ವದ ಅರಿವಾಗುತ್ತದೆ. ಇನ್ನು ದೇವರ ವಿಷಯದಲ್ಲಿ ಹೇಳಬೇಕಾದರೆ, ದೇವನಿದ್ದಾನೆ. ಅವನ ಅಸ್ತಿತ್ವ ಪ್ರಪಂಚದ ಚರಾಚರ ವಸ್ತುಗಳಲ್ಲಿದೆ ಎಂಬ ಶ್ರದ್ಧೆ, ನಂಬಿಕೆ ಬೇಕು. ಅದನ್ನು ಅರಿಯಲು ಸಾಧನ ಬೇಕೇ ಬೇಕು. ಓರ್ವ ವಿದ್ಯಾರ್ಥಿಯು ಸರ್ವೇಸಾಧಾರಣ ಡಾಕ್ಟರನಾಗಬೇಕಾದರೆ ಕನಿಷ್ಠ ೧೭–೧೮ ವರುಷ ಅಭ್ಯಾಸ ಬೇಕು. ಅದೇ ರೀತಿಯಲ್ಲಿ ದೇವರ ಅಸ್ತಿತ್ವವನ್ನು ಗುರುತಿಸಲು ಅಭ್ಯಾಸ ಬೇಕು. ಬರಿ ಒಂದೆರಡು ಇಂಗ್ಲೀಷ್ ಪುಸ್ತಕಗಳನ್ನು ಓದಿ, ಲಘುವಾಗಿ ದೇವರಿದ್ದಾನೆಯೇ? ಎಂದರೆ ದೇವರಿಲ್ಲ ಎಂದು ಸಾಧಿಸಿದಂತಾಗುತ್ತದೆಯೇ ? ಈ ಅಪರಿಪಕ್ವ ತಿಳುವಳಿಕೆಯಿಂದಲೇ ಮಾನವನಲ್ಲಿ ನಾಸ್ತಿಕವಾದ ಮೂಡಿಬರುತ್ತದೆ.

ಈ ವಿಶ್ವಾಸವು ನಮಗೆ ಗೊತ್ತಿದ್ದ ಮಹಾ ವಿಶ್ವಾಸಗಳಲ್ಲೊಂದು. ವಿಜ್ಞಾನಿಗಳು ತಿಳಿಸುವಂತೆ, ಇದಕ್ಕೂ ಬೃಹದಾಕಾರವಾದ ವಿಶ್ವಾಸಗಳಿವೆ. ಲೇಖಕರೇ ಒಪ್ಪಿಕೊಂಡಂತೆ ಈ ವಿಶ್ವವು ಸದಾಕಾಲ ಅಸ್ತಿತ್ವದಲ್ಲಿದ್ದೇ ಇದೆ; ಅದರಂತೆ ವಿಶ್ವತೋಮುಖನಾದ ದೇವರೂ ಅಸ್ತಿತ್ವದಲ್ಲಿದ್ದಾನೆ. ಉದಾಹರಣೆಗೆ, ವಿಜ್ಞಾನಿ ನ್ಯೂಟನ್ನನು ಕಂಡುಹಿಡಿದ ಗುರುತ್ವಾಕರ್ಷಣ ಶಕ್ತಿಯು ಅಸ್ತಿತ್ವದಲ್ಲಿದ್ದೇ ಇತ್ತು. ಆದರೆ ಈ ವಿಜ್ಞಾನಿ ಅದನ್ನು ಗುರುತಿಸಿದನು, ಅಷ್ಟೇ. ಹಾಗೆಯೇ ವೈಜ್ಞಾನಿಕ ಸಂಶೋಧನೆಗೆ ಕಾಣುವ ಸಕಲವೂ ಈ ವಿಶ್ವದ ಅಸ್ತಿತ್ವದಲ್ಲಿದೆ. ಮಾನವನ ಜ್ಞಾನ ಬೆಳೆದಂತೆ ಅವನಿಗೆ ಅದು ಗೋಚರವಾಗುತ್ತದೆ. ಇದೇ ರೀತಿಯಲ್ಲಿ ಪರಮಾತ್ಮನ ಅಸ್ತಿತ್ವವನ್ನು ಕಂಡುಕೊಂಡ ಮಹಾನುಭಾವರು ಸಂಶೋಧನೆ, ಸಾಧನೆ, ಶ್ರದ್ಧೆ, ವಿಶ್ವಾಸಗಳಿಂದ ದೇವರನ್ನು ಕಂಡಿದ್ದಾರೆ. ನಾಸ್ತಿಕರೂ ಈ ರೀತಿಯಲ್ಲಿ ಕಾರ್ಯ ಮಾಡಿದರೆ, ಅವರಿಗೂ ದೇವರು ಕಾಣುತ್ತಾನೆ. ಇದು ನಿಃಸಂಶಯ.

ಮಾನವನು ಎಲ್ಲವನ್ನೂ ಸ್ಥಾಪಿಸಲು ಅಸಾಧ್ಯ. ಅವನ ಪ್ರಗತಿ ಕೆಲವೊಂದು ಮಾರ್ಗದಲ್ಲಿ, ಕೆಲವೇ ದೃಷ್ಟಿಯಲ್ಲಿ. ಆದರೆ ಅವನು ಉಳಿದದ್ದನ್ನು ನಂಬಬೇಕಾಗುತ್ತದೆ. ಉಳಿದವರು ಕಂಡು ಹಿಡಿದ ದೃಷ್ಟಾಂತಗಳಲ್ಲಿ ಶ್ರದ್ಧೆ ಇರಬೇಕು. ಎಲ್ಲವನ್ನೂ ನಾನೇ ಬಲ್ಲೆ ಎಂಬುದು ಹುಚ್ಚುತನದ ಮಾತು.

ನಿಸರ್ಗದ ಪರಿಸರದಲ್ಲಿ ಮಾನವನು ಆನಂದಪಟ್ಟು ಆ ಆನಂದದಲ್ಲಿ ಪರಮಾತ್ಮನನ್ನು ಅತಿ ಸುಂದರವಾಗಿ ಕಂಡು ಕವನಗಳನ್ನು ಹಾಡಿ ನಲಿದ. ಹಾಗೆಯೇ ಕ್ಷೋಭೆ ರುದ್ರ ಸನ್ನಿವೇಶಗಳಲ್ಲಿಯೂ ದೇವರನ್ನು ರೌದ್ರ ರೂಪದಲ್ಲಿ

ಕಂಡ. ಆದರೆ, ಈಗ ಪರಿಸರ ಮಲಿನವಾಗಿದೆ. ಮಾನವನ ಜೀವನ ಮೌಲ್ಯಗಳು ಕಡಿಮೆಯಾಗಿವೆ, ಆಗುತ್ತಲಿವೆ. ಇದಕ್ಕೆ ಮೂಲತಃ ಪರಿಸರ ಮಾಲಿನ್ಯವೇ ಕಾರಣ. ಈ ಮಲಿನ ವಾತಾವರಣದಲ್ಲಿ ಸಚ್ಚಿದಾನಂದರೂಪಿ ದೇವರನ್ನು ಕಾಣಲು ಅಪೇಕ್ಷಿಸುವುದು ಶುದ್ಧ ತಪ್ಪು. ಈಗ ಪರಮಾತ್ಮನನ್ನು ಕಾಣಬೇಕಾದರೆ ದರಿದ್ರನಾದ ಮಾನವನಲ್ಲಿಯೇ ಕಾಣಬೇಕೇ ಹೊರತು ಕತ್ತಲೆಯಲ್ಲಿ ಕಾಣಲಾಗದು.

ಕೊನೆಯದಾಗಿ, ಲೇಖಕರ ಮನಸ್ಸಿನಲ್ಲಿಯ ಇನ್ನೊಂದು ವಿಚಾರವನ್ನೇ ತೆಗೆದುಕೊಳ್ಳೋಣ. “ದೇವರು ಸಣ್ಣ ಹುಡುಗರ ಹಾಗೆ ಕಣ್ಣುಮುಚ್ಚಾಲೆ ಏಕೆ ಆಡುತ್ತಾನೆ? ತಾನು ಇರುವೆನೆಂದು ಸ್ಪಷ್ಟವಾಗಿ ಮತ್ತು ಸುಲಭವಾಗಿ ತೋರಿಸಿಕೊಳ್ಳುವದಿಲ್ಲವೇಕೆ?” ಈ ವಿಚಾರ ಪ್ರಣಾಲಿಯಲ್ಲಿ ಅವರು ಅವಿಶ್ವಾಸವನ್ನು ತೋರಿಸಿದ್ದಾರೆಯೇ ವಿನಾ, ಜಾಣ್ಮೆಯನ್ನು ತಿಳಿಸಲಿಲ್ಲ. ಉಷ್ಣತೆ, ವಿದ್ಯುಚ್ಛಕ್ತಿ, ಪ್ರಕಾಶ, ಭಾವನೆ ಇತ್ಯಾದಿಗಳು ತಮ್ಮ ಅಸ್ತಿತ್ವವನ್ನು ಮಾನವನು ತಿಳಿದು ತನ್ನ ಒಳಿತಿಗಾಗಿ ಉಪಯೋಗಿಸುತ್ತಾನೆ. ಹಾಗೆಯೇ ಮಾನವನಲ್ಲಿಯ ದಾನವನು, ಅದನ್ನೇ ಪ್ರಪಂಚದ ಕೇಡಿಗಾಗಿ ಉಪಯೋಗಿಸುತ್ತಾನೆ. ಇದೇ ರೀತಿ ಈ ಪ್ರಪಂಚದಲ್ಲಿಯ ಅಸಂಖ್ಯ ನಿಗೂಢ ವಸ್ತುಗಳು ತಾವೇ ತಾವಾಗಿ ಗೋಚರವಾಗಲಿಲ್ಲ. ಅವುಗಳ ಬಗ್ಗೆ ಶೋಧನೆ ನಡೆಯಿತು, ತಪ್ಪಸ್ಸಾಯಿತು. ಅದೇ ರೀತಿಯಲ್ಲಿ ದೇವರೇಕೆ ಪ್ರತ್ಯಕ್ಷನಾಗಬೇಕು? ಅವನ ಅಸ್ತಿತ್ವ ಪ್ರಪಂಚದಲ್ಲಿ ಅಣು ಅಣುವಿನಲ್ಲಿದೆ. ಅದನ್ನು ಗುರುತಿಸುವ ಪ್ರಜ್ಞೆ ಬೇಕಷ್ಟೇ. ಈ ದಿಶೆಯಲ್ಲಿ ಮಾನವನು ತನ್ನ ಜ್ಞಾನವನ್ನು ಬೆಳೆಯಿಸಿಕೊಳ್ಳಬೇಕು,ಅಂಧತ್ವವನ್ನು ಕಳೆದು, ದೇವರನ್ನು ಪ್ರತ್ಯಕ್ಷಿಸಿಕೊಳ್ಳಲು ಯತ್ನಿಸಬೇಕು. ದೇವರನ್ನು ಕಾಣುವ ಶಕ್ತಿ ಬೇಕು ಅಷ್ಟೆ.

ಹಾಗೆಯೇ ನಾಸ್ತಿಕನೆಂದರೆ ದೇವರ ಅಸ್ತಿತ್ವವನ್ನು ಅರಿತೂ ಒಪ್ಪಿಕೊಳ್ಳದ ಮಂದಮತಿ ಅಜ್ಞಾನಿಯೇ ಹೊರತು, 'ದೇವರಿದ್ದಾನೆ' ಎಂಬ ವಾಕ್ಯದ ಅರ್ಥಹೀನತೆಯನ್ನು ಪ್ರತಿಪಾದಿಸುವ ವ್ಯಕ್ತಿ ಅಲ್ಲ. ದೇವರಿದ್ದಾನೆ ಎಂಬುದು ಅರ್ಥಹೀನವಾದ ಮಾತಲ್ಲ. ಅದನ್ನು ಕಾಣದವನು, ಗುರುತಿಸುವ ಶಕ್ತಿಯಿಲ್ಲದವನು ತನ್ನ ಅಲ್ಪಜ್ಞಾನದ ಪ್ರದರ್ಶನ ಮಾಡಿದಂತೆ. ದೇವರು, ವಿಶ್ವದ ಪ್ರತಿಯೊಂದು ಅಣುವಿನಲ್ಲಿದ್ದಾನೆ, ಮಾನವನ ರೋಮ ರೋಮಗಳಲ್ಲಿದ್ದಾನೆ. ಅದನ್ನು ಗುರುತಿಸುವ ಶಕ್ತಿ ನಮಗೆಲ್ಲ ಬೇಕು ಅಷ್ಟೇ!

**—ಮುರುಂದೇವ**

# ಕಾಲಪುರುಷನೆ ದೇವರು

ದೇವರಲ್ಲಿ ನಾವು ನಂಬಿಕೆ ಇಡಬೇಕೆ? ಎಂಬ ಪ್ರಶ್ನೆಗೆ ದೇವರಲ್ಲಿ ನಂಬಿಕೆ ಇಡಬಾರದೇಕೆ? ಎಂಬ ಒಬ್ಬ ಆಸ್ತಿಕನ ಉತ್ತರ ನಾಸ್ತಿಕರನ್ನು ಕೆರಳಿಸುವುದಾದರೂ ಮಾರ್ಚ್ 'ಕಸ್ತೂರಿ'ಯಲ್ಲಿ ಬಂದ ಡಾ. ಎಂ. ಎಸ್. ಕಿರ್ಲೋಸ್ಕರರ ದೇವರಲ್ಲಿ ನಾವು ನಂಬಿಕೆ ಇಡಬೇಕೆ? ಎಂಬ ಲೇಖನ ಓದಿದ ಮೇಲೆ ದೇವರಲ್ಲಿ ನಂಬಿಕೆ ಇಡಬಾರದೇಕೆ? ಎಂಬ ಈ ಲೇಖನವನ್ನು ಬರೆಯಬೇಕೆನಿಸಿತು.

ಒಂದು ವಸ್ತುವಿನ ಅಥವಾ ಜೀವದ ಅಸ್ತಿತ್ವ ಅಥವಾ ಇರುವಿಕೆಯನ್ನು ರುಜುವಾತುಪಡಿಸಬೇಕಾದರೆ ಸಾಕಷ್ಟು ಸಾಕ್ಷ್ಯ ಪುರಾವೆ ಬೇಕು, ನಿಜ. ಆದರೆ ದೇವರ ಬಗ್ಗೆ ನಾವು ಹೇಳಹೊರಟಷ್ಟು ಸಾಕ್ಷ್ಯ, ಪುರಾವೆ ಕೊಟ್ಟಷ್ಟೂ ನಾವು ಎಡವಿ ಬೇರೆ ದಾರಿ ಹಿಡಿದು ಮೂರ್ಖರೆನಿಸಿಕೊಳ್ಳುತ್ತೇವೆ. ಅವರ ಅನುಭವ ಸ್ವಯಂವೇದ್ಯವಾಗಬೇಕು ಅಷ್ಟೆ. ಅದಕ್ಕಿಂತ ಹೆಚ್ಚಾಗಿ ವಿಶ್ವದ ಧರ್ಮಗ್ರಂಥಗಳಲ್ಲಿ ಬರುವ ಘಟನೆಗಳ ಸತ್ಯಾಸತ್ಯತೆಯನ್ನು ಸಮಕಾಲೀನ ವಿಜ್ಞಾನದ ಓರೆಗಲ್ಲಿಗೆ ಹಚ್ಚ

ಅನುತ್ತೀರ್ಣಗೊಂಡ ಮಾತ್ರಕ್ಕೆ ದೇವರಿಲ್ಲ ಎಂದು ಹೇಳಿದರೆ ಕುರುಡ ಜಗತ್ತೆಲ್ಲಾ ಕತ್ತಲು ಎಂದಂತಾಗದೆ? ಎಂದೋ, ಯಾರೋ ಬರೆದ ಅವರವರ ಅನಿಸಿಕೆಗಳನ್ನು ಅನೂಚಾನವಾಗಿ ಅನುಸರಿಸಿಕೊಂಡು ಬಂದ ಹಿಂದಿನ ತಲೆಮಾರಿನವರಿಂದ ಕಾಲಕ್ರಮದಲ್ಲಿ ಅವು ಧರ್ಮಗ್ರಂಥಗಳೆನಿಸಿಕೊಂಡಿವೆ ಅಷ್ಟೇ. ಅದು ದೈವ ಬರಹವೂ ಅಲ್ಲ. ಅದರಲ್ಲಿರುವುದು ದೈವವಾಣಿಯೂ ಅಲ್ಲ. ಆದರೂ ಅವುಗಳಲ್ಲಿರುವುದೆಲ್ಲಾ ಸುಳ್ಳು ಅಲ್ಲ. ಒಂದೇ ಬೆರಳಲ್ಲಿ ಸಂಜೀವಿನಿ ಪರ್ವತವನ್ನು ಹೊತ್ತು ತಂದ ಹನುಮಂತ, ಎರಡೇ ಹೆಜ್ಜೆಯಲ್ಲಿ ಭೂಮ್ಯಾಕಾಶಗಳನ್ನೆಲ್ಲಾ ಅಳೆದ ವಾಮನ ವಿಷ್ಣು, ಸುದರ್ಶನ ಚಕ್ರದಿಂದ ರವಿಯನ್ನೇ ಮರೆಮಾಡಿ ಹಗಲನ್ನೇ ರಾತ್ರಿಮಾಡಿದ ಕೃಷ್ಣ; ಈ ಎಲ್ಲ ಘಟನೆಗಳು, ಅಸಹಜವಾಗಿ, ಕಲ್ಪನಾತೀತವಾಗಿ ಕಾಣುವಂತೆ ವರ್ಣಿಸಿರುವ ಮತ್ತು ಜೀವವಿಕಾಸದ ಡಾರ್ವಿನ್ನನ ಉತ್ಕ್ರಾಂತಿ ಸಿದ್ಧಾಂತಕ್ಕೆ ಯಾವ ವಿಧದಲ್ಲೂ ಸಮಂಜಸವೆನಿಸದ ಬೈಬಲ್ ವರ್ಣಿತ ವಿಶ್ವ; ಮಾನವ ಸೃಷ್ಟಿಗೊಂಡಿರುವ ಕತೆಯನ್ನೊಳಗೊಂಡ ಧರ್ಮಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು, ಅವೆಲ್ಲಾ ಸುಳ್ಳಾದ್ದರಿಂದ ದೇವರ ಅಸ್ತಿತ್ವವು ಸುಳ್ಳು ಎನ್ನಬಹುದೆ?

ನಮ್ಮ ಧರ್ಮಗ್ರಂಥಗಳು ಕಂಡಂತೆ ದೇವರನ್ನು ಮನುಷ್ಯ ರೂಪದಲ್ಲೇ ಹುಡುಕುವವರು ಕುರುಡು ಭಕ್ತರು ಅಷ್ಟೇ. ಹಾಗೆ ನೋಡುವ ಆಸ್ತಿಕರನ್ನು ಕಂಡು ಪರಿಹಾಸ್ಯಮಾಡುವ ನಾಸ್ತಿಕರದು ಸಲ್ಲದ ಕುಚೇಷ್ಟೆ. ಏಕಾಣುಜೀವಿ ಅಮೀಬಾಕ್ಕಿಂತ ಅಧಿಕ ಬಲಿಷ್ಠ ಬುದ್ಧಿವಂತ ಜಲಚರಗಳು ಮೇಲು. ಜಲಚರಗಳಿಗಿಂತ ಮಾನಸಿಕವಾಗಿ ಮುಂದುವರೆದ ಮಂಗ, ಅದಕ್ಕಿಂತ ಅತಿ ಮುಂದುವರೆದ ಮಾನವ, ಹಾಗೆ ಜೀವಿಗಳಲ್ಲೂ ಮಾನಸಿಕವಾಗಿ ವಿವಿಧ ಮಟ್ಟಗಳಲ್ಲಿ ಮುಂದುವರೆದ ಜೀವಿಗಳಿವೆ ಈ ಜೀವಿಗಳಲ್ಲಿ ಅತಿ ಮುಂದುವರೆದ ಪ್ರಾಣಿ ತನಗಿಂತ ಮಾನಸಿಕವಾಗಿ ಹಿಂದುಳಿದ, ಕೆಳಮಟ್ಟದ ಎಲ್ಲ ಪ್ರಾಣಿಗಳನ್ನು ತನ್ನ ಅಂಕೆಯಲ್ಲಿ ಇಟ್ಟುಕೊಳ್ಳುವ ಸಾಮರ್ಥ್ಯವನ್ನು ಹೊಂದಿದ್ದಾನೆ. ಹೀಗೆ, ಅಮೀಬಾದ ಭಾಗಕ್ಕೆ ಮಂಗ, ಮಂಗನ ಪಾಲಿಗೆ ಮಾನವ ದೇವರೆನಿಸಿಕೊಳ್ಳುತ್ತಾರೆ. ಮನುಷ್ಯ ಈ ಸೃಷ್ಟಿಯ ಅನರ್ಘ್ಯ ರತ್ನ; ಅವನು ತನ್ನ ಅಮೂಲ್ಯ ಬುದ್ಧಿ ಸಂಪತ್ತಿನಿಂದ ಈ ಭೂಮಿಯ ಎಲ್ಲದರ ಮತ್ತು ಎಲ್ಲವುಗಳ ಮೇಲೆ ಹೇಗೆ ಸಾರ್ವಭೌಮತ್ವವನ್ನು ಸ್ಥಾಪಿಸಿರುವನೋ ಹಾಗೆಯೇ ಕೋಟ್ಯಂತರ ಜ್ಯೋತಿರ್ವರ್ಷಗಳವರೆಗೆ ಹರಡಿಕೊಂಡಿರುವ ಈ ಬ್ರಹ್ಮಾಂಡದ ವಿವಿಧ ವಿಶ್ವಗಳಲ್ಲಿ ನಮಗಿಂತ ಮುಂದುವರೆದ ಜೀವಿಗಳಿರಬಹುದು. ಮತ್ತೊಂದು ಕಡೆ ಅದಕ್ಕಿಂತಲೂ ಮಿಗಿಲಾದ ಅಸ್ಯರೂಪಿ ಜೀವಿಗಳಿದ್ದು, ನಮ್ಮ ವಿಶ್ವದ ಎಲ್ಲ ಚಲನೆಯನ್ನೂ ತಮ್ಮ ಅಂಕೆಯಲ್ಲಿಟ್ಟುಕೊಂಡಿರುವಷ್ಟು ಮಾನಸಿಕವಾಗಿ ಮುಂದುವರಿದ ಜೀವಿಗಳಿರಬಹುದು. ಈ ಜೀವಿಗಳೇ ನಮ್ಮ ಪಾಲಿನ ದೇವರಲ್ಲವೆ? ಬ್ರಹ್ಮಾಂಡದಲ್ಲಿ ವಿವಿಧ ಜೀವಂತ ವಿಶ್ವಗಳಿರುವುದನ್ನು ಅವುಗಳಲ್ಲಿ ಅತಿ ಮುಂದುವರಿದ ಜೀವಿಗಳಿರಬಹುದಾದುದನ್ನು ಯಾವ ವಿಜ್ಞಾನವೂ ಅಲ್ಲಗಳೆಯದೆ ಇರುವಾಗ ನಾವೇಕೆ ದೇವರನ್ನು ನಂಬಬಾರದು?

ಮಾನಸಿಕವಾಗಿ ವಿವಿಧ ಮಟ್ಟದಲ್ಲಿ ಬೆಳವಣಿಗೆ ಹೊಂದಿರುವ ಬೇರೆ ಬೇರೆ ಜೀವಿಗಳ ರೂಪ, ಗಾತ್ರ, ಜೀವಿತ ಅವಧಿಗಳು ವ್ಯತ್ಯಾಸಹೊಂದಿರುವಂತೆ ಈ ಬ್ರಹ್ಮಾಂಡದಲ್ಲಿ ಅತಿ ಮುಂದುವರಿದ ಜೀವಿಯ ರೂಪ ರಚನೆ ಬೇರೆಯೇ ಇರಬೇಕಲ್ಲವೆ? ಹಾಗೆ ರೂಪುಗೊಂಡಿರುವ ಒಂದು ಜೀವಿಯು ರೂಪಪ್ರಭೆಯ ತರಂಗ ನಮ್ಮ ದೃಷ್ಟಿಗೆ ಅತೀತವಾಗಿರಬಹುದು. ಹಾಗಿಲ್ಲದಿದ್ದಲ್ಲಿ ಕೆಲವೊಮ್ಮೆ ರಾತ್ರಿ ವೇಳೆಯಲ್ಲಿ ನಮಗೆ ಏನೂ ಕಾಣಿಸದಿದ್ದರೂ ನಾಯಿಗಳು ಬೊಗಳುವ ಮತ್ತು ಅಟ್ಟಿಸಿಕೊಂಡು ಹೋಗುವುದು ಏನನ್ನು ಮತ್ತು ಯಾತಕ್ಕಾಗಿ? ನಮ್ಮ ದೃಷ್ಟಿಯ ಅರಿವಿಗೆ ನಿಲುಕದ ಯಾವುದೋ ಒಂದು ಜೀವಿ ಇದಕ್ಕೆ ಗೋಚರಿಸಬಹುದಲ್ಲವೆ? ಮನುಷ್ಯನ ಶರೀರದ ಸುತ್ತ ಪ್ರಭೆಯೊಂದು ಇರುವುದೆಂದು ಕಿರ್ಲಿಯನ್ ಫೋಟೋಗ್ರಫಿ ತೋರಿಸಿರುವಾಗ, ಅಂತಹ ಪ್ರಭೆಯೇ ನಮಗೆ ಕಾಣದಿರುವಂತೆಯೇ ದೇವರೆಂಬ ಜೀವಿ ನಮಗೆ ಅಗೋಚರ ರೂಪದಲ್ಲಿರು

ಶಕ್ತಿ ರೂಪದಲ್ಲಿರಲೂಬಹುದು. ಶಕ್ತಿಗೆ ಸ್ವತಂತ್ರ ಅಸ್ತಿತ್ವವಿಲ್ಲವೆಂದ ಮಾತ್ರಕ್ಕೆ ಅದರ ಇರುವಿಕೆ ಸುಳ್ಳಾಗದು. ಅದು ನಮಗೆ ಮೇಲೆ ಹೇಳಿದಂತೆ ಅಗೋಚರವಾಗಿರಬಹುದು. ಮೇಲಾಗಿ ಈ ಶತಮಾನದ ಮಹಾಮೇಧಾವಿ ಐನ್‌ಸ್ಟೈನ್ ಹೇಳುವಂತೆ ಶಕ್ತಿ ಇಲ್ಲದ ವಸ್ತುವಿಲ್ಲ, ವಸ್ತುವಿಲ್ಲದ ಶಕ್ತಿ ಇಲ್ಲ, ವಸ್ತು ಮತ್ತು ಶಕ್ತಿ ಬೇರೆ ಬೇರೆ ಅಲ್ಲ. ಜಡ ವಸ್ತುಗಳ ಅಣುಗರ್ಭದ ಸುತ್ತ ಕಣದಂತೆಯೂ ಅಲ್ಲದೆ, ಅಲೆಯಂತೆಯೂ ಅಲ್ಲದೆ ಅಥವಾ ಎರಡು ರೀತಿಯಲ್ಲೂ ವರ್ತಿಸಿ ಮಾಯಾ ಸ್ವರೂಪದೊಡನೆ ಸುತ್ತಾಡುವಂತೆ ಎಲೆಕ್ಟ್ರಾನನ್ನು ಯಾವ ಶಕ್ತಿ ನಿಯಂತ್ರಿಸಿ ಜಡ ಜೀವಿಗಳಿಗೆ ಸಂಬಂಧ ಕಲ್ಪಿಸಿದೆಯೋ; ಅನಂತಾಲ್ಪ ಅಣುವಿನ ಅಂತರಂಗದಲ್ಲಿ ಅಗಾಧ ಶಕ್ತಿಯನ್ನು ಯಾರು ತುಂಬಿರುವರೊ; ಆಕಾಶದ ಎಲ್ಲ ಸ್ತರಗಳಲ್ಲೂ ಗ್ರಹೋಪಗ್ರಹಗಳನ್ನೆರಚಿರುವಂತೆ ಕಂಡರೂ ಅವುಗಳು ಒಂದು ಸುವ್ಯವಸ್ಥಿತ, ನಿಯಮಬದ್ಧ ರೀತಿಯಲ್ಲ ಸಂಚರಿಸುವಂತೆ ಮಾಡಿರುವ ಸೃಷ್ಟಿಯ ಸುಂದರ ಜೋಡಣೆಯ ಹಿಂದೆ ಯಾವ ಶಕ್ತಿಯ ಕೈವಾಡ ಇದೆಯೋ ಅದೇ ದೇವರು. ಅದು ಕಾಲ ರೂಪಾತೀತ. ಅವನ ಪ್ರತಿಯೊಂದು ಕಾರ್ಯದ ಹಿಂದೆ ಒಂದು ನಿಯಮಿತ ಸುಸಂಬಂಧಿತ. ಅರ್ಥವತ್ತಾದ ಸುವ್ಯವಸ್ಥೆ ಇದೆ. ಎಲ್ಲವೂ ಒಂದು ನೀತಿಯ ಆಧಾರದ ಮೇಲೆ ನಿಂತಿದೆ. ಹರಿಯುವಲ್ಲಿ ನೀರು ಇಳಿಜಾರಿನ ಕಡೆಗೆ ಓಡುತ್ತದೆ. ಕಾಯಿಸಿದ ಒಂದು ವಸ್ತುವಿನಿಂದ ಶಾಖ ಮತ್ತೊಂದು ಕಡಿಮೆ ಶಾಖ ಇರುವೆಡೆಗೆ ಹರಿಯುವಲ್ಲಿ ಸೃಷ್ಟಿಯ ಸಮಾನತೆ ಇದೆ. ಮತ್ತೊಂದಕ್ಕೆ ಜೀವ ಕೊಟ್ಟು ಎಲ್ಲ ಜೀವಿಗಳೂ ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತಿವೆ. ಶತಶತಮಾನಗಳಿಂದ ಸಮೃದ್ಧವಾಗಿ ಫಲ ನೀಡಿ ಜೀವಿಗಳಿಗುಣಿಸಿದ ಭೂಮಿ ಬಂಜೆಯಾಗುವ ಕಾಲವೂ ದೂರವಿಲ್ಲ. ಒಂದು ಶಕ್ತಿಯು ಸೃಷ್ಟಿಗೆ ಮತ್ತೊಂದರ ಅಷ್ಟೇ ಶಕ್ತಿಯ ಕ್ಷಯ ಅವಶ್ಯ. ಒಂದರ ಹುಟ್ಟು ಮತ್ತೊಂದರ ನಾಶಕ್ಕೆ ಮೂಲ. ಹೇಗೆ ಸೃಷ್ಟಿಯು ಕೊಡಕೊಳ್ಳುವ ವ್ಯಾಪಾರವನ್ನು ಒಂದು ನ್ಯಾಯ ರೀತಿಯಲ್ಲಿ ಸರಿದೂಗಿಸುತ್ತಿ

ಮೇಲಿನ ಎಲ್ಲ ಕ್ರಿಯೆಗಳು ಪ್ರಕೃತಿಯ ಸಹಜ ಕೆಲಸಗಳೆಂದು ದೈವತ್ವವನ್ನು ಅಲ್ಲಗಳೆಯಬಹುದು. ಆದರೆ ವಿಜ್ಞಾನ ಸೃಷ್ಟಿಯ ಸುಂದರ ಕಲಾಪೂರ್ಣ ರಹಸ್ಯವನ್ನು ಎಳೆ ಎಳೆಯಾಗಿ ಬಿಡಿಸಿ ತಾನು ಬೆಳೆದು ಬಂದದ್ದು ಸೃಷ್ಟಿಯ ಸ್ಥಿತಿಗತಿಗಳನ್ನು ಅಭ್ಯಸಿಸಿ ಅದರ ಬೌದ್ಧಿಕ ಸಿದ್ಧಾಂತಗಳನ್ನು ವಿಜ್ಞಾನ ಕಂಡುಕೊಂಡಿದೆ. ಹಾಗಲ್ಲದೆ ಯಾವ ವಿಜ್ಞಾನವೂ ಯಾವ ಸಿದ್ಧಾಂತವನ್ನೂ ಇದು ಹೀಗೇ ಇರಬೇಕೆಂದು ಭವಿಷ್ಯ ನುಡಿದಿಲ್ಲ. ಸೃಷ್ಟಿಯ ರಹಸ್ಯಮಯವಾದ ಹಾದಿಯನ್ನು ಹಣೆದು ತೆಗೆಯುತ್ತಾ ವಿಜ್ಞಾನ ಅದರಲ್ಲಿ ನಡೆದಿದೆ. ದೇವರ ಎಲ್ಲ ಕಾರ್ಯದ ಹಿಂದೆ ಒಂದು ಅರ್ಥವತ್ತಾದ ಉದ್ದೇಶವಿಲ್ಲದಿದ್ದರೆ, ಶಬ್ದವು ಬೆಳಕಿನಂತೆ ಯಾವ ಪ್ರಸಾರ ಮಾಧ್ಯಮವೂ ಇಲ್ಲದೆ ಏಕೆ ಪ್ರಸಾರಗೊಳ್ಳಬಾರದಿತ್ತು? ಹಾಗಿದ್ದರೆ ಈ ಬ್ರಹ್ಮಾಂಡದ ಎಲ್ಲ ಘರ್ಷಣೆ ಆಸ್ಫೋಟಗಳ ಕರ್ಕಶವನ್ನು ಕೇಳಬೇಕಾಗಿ ಬಂದು ಮನುಷ್ಯನ ಬದುಕು ಈ ಜಗತ್ತಿನಲ್ಲಿ ಎಷ್ಟು ಅಸಹನೀಯವಾಗುತ್ತಿತ್ತು! ಭೂಮಿಯನ್ನು ವಿದ್ಯುದ್ವಾಹಕವನ್ನಾಗಿ ಮಾಡಿ ಮಹದುಪಕಾರ ಮಾಡಿರುವಂತೆ ವಾತಾವರಣವನ್ನು ವಿದ್ಯುದ್ವಾಹಕವನ್ನಾಗಿ ಮಾಡಿದ್ದರೆ ವಿಜ್ಞಾನ ಬೆಳೆಯುತ್ತಿತ್ತೆ? ಅಥವಾ ಜೀವಿಗಳು ಬದುಕಲಾಗುತ್ತಿತ್ತೆ! ಒಂದು ವೇಳೆ ಶಬ್ದದ ಮತ್ತು ಬೆಳಕಿನ ವೇಗ ಅದಲುಬದಲಾಗಿದ್ದರೆ ಎಂತಹ ವೈಚಿತ್ರ್ಯವನ್ನು ನಾವು ಕಾಣುತ್ತಿದ್ದೆವು! ಹಾಗಿಲ್ಲದೆ ದೇವರು ಈ ಲೋಕಕ್ಕೆ ಮಾನವ ಕುಲಕ್ಕೆ ಒಳಿತನ್ನೇ ಮಾಡಿದ್ದಾನೆ. ಈ ಒಳಿತಿನ ಹಿಂದೆ ಒಂದು ಅರ್ಥವತ್ತಾದ ಉದ್ದೇಶ ಇರಲೇಬೇಕಲ್ಲವೆ? ಉದ್ದೇಶ ಇರುವುದರಿಂದ ಉದ್ದೇಶಕನೂ ಇದ್ದಾನಲ್ಲವೆ?

'ಭೌತ ವಸ್ತುವು ವಸ್ತುವಿನ ಮೂಲ ಪರಮಾಣುವಿನ ವರೆಗೂ ಮುಟ್ಟಿದ್ದರೂ ಅವರಿಗೆ ದೇವರು ಅಥವಾ ಯಾವುದೇ ಅಧಿಭೌತಿಕ ಶಕ್ತಿ ಅದರಲ್ಲಿ ಕಂಡುಬಂದಿಲ್ಲ' ಎಂದಿರುವ ಭೌತಿಕರಿಗೆ ಅಣುವಿನ ಅಂತರಂಗ ಗರ್ಭದಲ್ಲಿ ಹುದುಗಿಸಿಟ್ಟಿರುವ ಶಕ್ತಿಯು ಅಧಿಭೌತಿಕ ಶಕ್ತಿ

ಶಕ್ತಿ ಚೈತನ್ಯವನ್ನು ಹುದುಗಿಸಿಡುವ ಅವಶ್ಯಕತೆ ಏನಿತ್ತು? ಅತಿ ವೇಗದ ಜೀವನ ನಡೆಸುತ್ತಿರುವ ಇಂದಿನ ಮನುಷ್ಯನ ವಿಶ್ವವನ್ನು ವಿಜ್ಞಾನ ತೀರಾ ಸಂಕುಚಿತಗೊಳಿಸಿರುವ ಈ ಯುಗದಲ್ಲಿ ಅಣುಶಕ್ತಿಯ ಆಧಾರ ಎಷ್ಟಿದೆ ಎಂದು ಎಲ್ಲರೂ ಮನಗಂಡಿರುವ ವಿಷಯವಲ್ಲವೆ? ಹಾಗೆಯೆ ಚಿಕ್ಕಂದಿನಲ್ಲಿ ಮನುಷ್ಯನ ಮನಸ್ಸನ್ನು ಯಾವ ರೀತಿ ಬೇಕೋ ಆ ರೀತಿ ರೂಪಿಸಬಹುದು' ಎಂದಿರುವ ಲೇಖಕರು ಮಾನವ ಅರಿವು ಪಡೆದಿಂದಿನಿಂದ ದೇವರ ಬಗ್ಗೆ ನಂಬಿಕೆ ಇಟ್ಟು ಬಂದ ಸಮಾಜವಲ್ಲೇ ಹುಟ್ಟಿ ಬೆಳೆದು ಬಂದರೂ ದೇವರಿಲ್ಲ ಎನ್ನುವುದೇಕೆ? ಮನುಷ್ಯನನ್ನು ಚಿಕ್ಕಂದಿನಲ್ಲೇ ಹೇಗೆ ಬೇಕೋ ಹಾಗೆ ರೂಪಿಸಲಾಗದು. ವಿವಿಧ ವೃತ್ತಗಳಲ್ಲಿ ನಿರ್ದಿಷ್ಟ ಸಂಖ್ಯೆಯ ಏಕ ಗುಣ ರೂಪಿ ಎಲೆಕ್ಟ್ರಾನುಗಳು ಸುತ್ತಿ ಅಣುವಿನಲ್ಲಿರುವ ಅವುಗಳ ಒಟ್ಟು ಸಂಖ್ಯೆಯ ಮಾತ್ರದಿಂದಲೇ ವಿವಿಧ ರೂಪ ಗುಣಗಳುಳ್ಳ ವಿವಿಧ ಮೂಲವಸ್ತುಗಳು ಹೇಗೆ ಆವಿರ್ಭವಿಸಿವೆಯೋ ಹಾಗೆ ಮಾನವನು ಸಹ ವಿಧ ವಿಧವಾದ ಜೀವಕಣಗಳ ಸಂಖ್ಯೆ ಮಾತ್ರದಿಂದಲೇ ಅವನ ರೂಪ ಗುಣ, ಬುದ್ಧಿಯ ಹುಟ್ಟಿ ಬೆಳೆದು ಬರುತ್ತಿವೆ. ಅವುಗಳನ್ನು ಅಷ್ಟಾಗಿ ಬದಲಾವಣೆ ಮಾಡಲಾಗದು. ಆಕಾರವಿಲ್ಲದ ಒಂದು ವಸ್ತುವಿ ಆಕಾರ ಕೊಡಬಹುದು. ಆದರೆ ಅದರ ಗುಣಗೆ ರೂಪವನ್ನೇ ಬದಲಾವಣೆ ಮಾಡಲಾಗದು. ಹಾಗಿಲ್ಲದಿದ್ದರೆ ಎಳೆಯ ವಯಸ್ಸಿನಲ್ಲೇ ಅತಿ ಪ್ರತಿಭೆಯನ್ನು ಹೊಂದಿದ್ದ ಕಾರ್ಲ್ ಫ್ರೆಡ್ರಿಕ್ ಗೌಸನಂತಹ ಮೇಧಾವಿಗಳು ಎಲ್ಲರೂ ಏಕೆ ಹುಟ್ಟಬಾರದು?

ದೇವರಲ್ಲಿ ವಿಶ್ವಾಸವಿಟ್ಟು ಹೋದ ಎಷ್ಟೋ ಯಾತ್ರಿಕರು ಅಪಘಾತಕ್ಕೆ ಈಡಾಗುತ್ತಾರಲ್ಲ ಏಕೆ? ದೇವರಿದ್ದ ಪಕ್ಷದಲ್ಲಿ ತನ್ನ ಆಶ್ರಯಕ್ಕೆ ಬಂದ ಭಕ್ತರನ್ನು ಆತ ಕಾಪಾಡಲಾರನೆ ಎಂಬ ಈ ಪ್ರಶ್ನೆ ಅತಿ ಹೊದ್ದುತನದ್ದು. ಒಂದು ವೇಳೆ ದೇವರು ಪೂಜೆಯಿಂದಲೇ ಫಲವನ್ನು ಕೊಡುವುದಿದ್ದರೆ ಈ ದೇಶದ ಟಾಟಾ, ಬಿರ್ಲಾಗಳೇ ಬೇಕಷ್ಟು ಪೂಜೆ ಸಲ್ಲಿಸಿ ದೇವರು ನೀಡುವ ಎಲ್ಲ ಫಲವನ್ನು ತಮ್ಮದನ್ನಾಗಿಸಿಕೊಂಡು ಬೇರೆಯವರಿಗೆ ಏನೂ ದೊರೆಯದಂತೆ ಮಾಡಿಬಿಡುತ್ತಿದ್ದರು. ಆದರೆ ಸ್ವಾರ್ಥ, ಸ್ವಹಿತಗಳಿಗಾಗಿ ಮಾಡುವ ಯಾವ ಪೂಜೆಯಲ್ಲೂ ಭಕ್ತಿ ಇರದು, ಅಂಥವರು ಭಕ್ತರೂ ಅಲ್ಲ. ದೇವರು ಯಾವ ಪೂಜೆಯ ಅಪೇಕ್ಷಿತನೂ ಅಲ್ಲ; ಅವನ ಅಪೇಕ್ಷೆ ನಿಷ್ಕಾಮ ಕರ್ಮ ಮಾತ್ರ. ಲಂಚ ಪಡೆವವರು ಕೊಡಲು ದೇವರೇನು ತಾಲ್ಲೂಕು ಕಚೇರಿಯ ಗುಮಾಸ್ತನೆ ಅಥವಾ ಆರ್. ಟಿ. ಓ. ಅಧಿಕಾರಿಯೆ? ದೇವರನ್ನು ಬೇಡಿಕೊಳ್ಳಲು ಹೋದವರೂ ಸಾಯುತ್ತಾರೆ, ನಿಷ್ಕಾಮಕರ್ಮ ಮಾಡುವವರೂ ಸಾಯುತ್ತಾರೆ. ಈ ಬ್ರಹ್ಮಾಂಡದ ಎಲ್ಲರದೂ ಒಂದು ಪೂರ್ವನಿರ್ಧರಿತವಾದ ಬದುಕು, ಅದರಂತೆ ಎಲ್ಲರೂ ತಮ್ಮ ತಮ್ಮ ಹಾದಿ ಹಿಡಿದು ತಮ್ಮ ಕೊನೆ ಕಂಡುಕೊಳ್ಳುತ್ತಾರೆ. ಏಕೆಂದರೆ ಕಾಲ ಏಕಮುಖವಾದದ್ದು. ಅದು ದ್ವಿಮುಖವಲ್ಲ. ಅದು ಅವಿರತವಾಗಿ, ಎಡೆತಡೆ ಇಲ್ಲದೆ, ಎಲ್ಲರನ್ನೂ ಎಲ್ಲವನ್ನೂ ನುಂಗಿಕೊಂಡು ಪ್ರವಹಿಸುತ್ತದೆ, ಇವರಲ್ಲಿ ಅದಕ್ಕೆ ಯಾವ ಭೇದವೂ ತಾರತಮ್ಯವೂ ಇಲ್ಲ. ಇಂಥ ಕಾಲಪುರುಷನೇ ದೇವರು.

**— ಸಿ. ಕೆ. ನಾಗಲಿಂಗಮೂರ್ತಿ**

---

## ಗಾಳಿ ಎಲ್ಲಿದೆ ತೋರಿಸಿ?!

---

ಮಾರ್ಚ್ 'ಕಸ್ತೂರಿ'ಯಲ್ಲಿ ಪ್ರಕಟವಾದ ಡಾ.ಎಂ. ಎಸ್. ಕಿರ್ಲೋಸ್ಕರರು 'ದೇವರಲ್ಲಿ ನಾವು

ದ್ದಾನೆ; ಆತನಲ್ಲಿ ನಾವು ನಂಬಿಕೆ ಇಡಬೇಕೆ ಬೇಡವೇ ಎಂದಾಗುತ್ತದೆ. ಆದರೆ ಲೇಖನ ಈ ಲೇಖನದಲ್ಲಿ

ಸ್ನಲ್ಲ. ದೇವರ ಅಸ್ತಿತ್ವವನ್ನೇ ಪ್ರಶ್ನಿಸಿದ್ದಾರೆ. ಅವರ ದೃಷ್ಟಿಯಲ್ಲಿ ದೇವರೇ ಇಲ್ಲವಾದ ಮೇಲೆ ಇನ್ನು ನಂಬಿಕೆಯ ಪ್ರಶ್ನೆಯಲ್ಲಿಯದು ?

ನಮ್ಮ ಜ್ಞಾನದ ಕ್ಷೇತ್ರವನ್ನು ನಾವು ಎರಡು ವಿಭಾಗಗಳಲ್ಲಿ ವಿಂಗಡಿಸಬಹುದು. (೧) ಭೌತಿಕ ಜ್ಞಾನ. (೨) ಅಧ್ಯಾತ್ಮಿಕ ಜ್ಞಾನ. ಭೌತಿಕ ಜ್ಞಾನ ಜೀವಿ, ವಸ್ತು ಇತ್ಯಾದಿ ಗೋಚರ ವಸ್ತುಗಳ ಮೇಲೆ ಪ್ರಯೋಗ ನಡೆಸಿದರೆ, ಅಧ್ಯಾತ್ಮಿಕ ವಿಜ್ಞಾನ ಅಗೋಚರವಾದ ಆತ್ಮ, ಪರಮಾತ್ಮ ಇತ್ಯಾದಿಗಳ ಮೇಲೆ ಪ್ರಯೋಗ ನಡೆಸುತ್ತದೆ.

ಭೌತಿಕ ವಿಜ್ಞಾನ ಉಪಕರಣಗಳನ್ನು ಮಾಧ್ಯಮವಾಗಿ ಪೊಂದಿರುವುದರಿಂದ ಇಲ್ಲಿ ಫಲಿಸಿದ ಜ್ಞಾನವನ್ನು ಎಲ್ಲರಿಗೂ ಪ್ರತ್ಯಕ್ಷವಾಗಿ ತೋರ್ಪಡಿಸಲು ಸಾಧ್ಯ; ಆದರೆ ಅಧ್ಯಾತಿಕ ವಿಜ್ಞಾನದ ಕ್ಷೇತ್ರ ಆತ್ಮಜ್ಞಾನಕ್ಕೆ ಸಂಬಂಧಪಟ್ಟದ್ದು ಇಲ್ಲಿ ಮನಸ್ಸು ಮಾಧ್ಯಮವಾಗಿದ್ದು ಉಪಕರಣಗಳ ಬಳಕೆ ಇಲ್ಲವಾದ ಕಾರಣ ಇಲ್ಲಿ ಪಡೆಯತಕ್ಕ ಜ್ಞಾನವನ್ನು ವ್ಯಕ್ತಿ ಸ್ವತಃ ಅನುಭವಿಸಬೇಕೇ ವಿನಾ ಅದನ್ನು ಸಾರ್ವಜನಿಕವಾಗಿ ಪ್ರದರ್ಶನಕ್ಕಿಟ್ಟು ತೋರಿಸಲಾಗದು. ಇದೆಲ್ಲ ಭೌತಿಕ ವಿಜ್ಞಾನಕ್ಕೂ ಅಧ್ಯಾತ್ಮಿಕ ವಿಜ್ಞಾನಕ್ಕೂ ಇರುವ ಮೂಲಭೂತ ವ್ಯತ್ಯಾಸ.

ಲೇಖಕರು ದೇವರನ್ನು ಬೆಕ್ಕನ್ನು ತೋರಿಸುವಂತೆ ತೋರಿಸಿ ಎನ್ನುವುದು ಅರ್ಥವಿಲ್ಲದ್ದು. ಒಂದು ಉದಾಹರಣೆ ನೋಡೋಣ: ನಾನು ಮತ್ತು ಲೇಖಕ ಒಂದು ಬೆಟ್ಟದ ಮೇಲೆ ಕುಳಿತಿದ್ದೇವೆ. ಆಗ ರಭಸವಾಗಿ ಬಂದ ಗಾಳಿಯಿಂದಾಗಿ ನಾವು ದೂಡಲ್ಪಡುತ್ತೇವೆ. ಆಗ ಲೇಖಕರು ಯಾರು ನಮ್ಮನ್ನು ದೂಡಿದರು ಎನ್ನುತ್ತಾರೆ. ನಾನು ಗಾಳಿ ಎನ್ನುತ್ತೇನೆ. ಹಾಗಾದರೆ ಅದನ್ನು ನನಗೆ ತೋರಿಸಿ ಎಂದರೆ ನಾನು ಹೇಗೆ ತಾನೆ ಗಾಳಿಯನ್ನು ಅವರಿಗೆ ತೋರಿಸಲು ಸಾಧ್ಯ ? ಗಾಳಿಯನ್ನು ಪ್ರತ್ಯಕ್ಷವಾಗಿ ತೋರಿಸಲಾಗದ ಮಾತ್ರಕ್ಕೆ ಗಾಳಿ ಇರುವುದೇ ಸುಳ್ಳೆ? ಅದರ ಅಸ್ತಿತ್ವವನ್ನು ತಳ್ಳಿ ಹಾಕಲು ಸಾಧ್ಯವೇ? ಗಾಳಿಯ ಇರುವಿಕೆಯಿಂದ ಮರಗಿಡಗಳು ಅಲುಗಾಡುತ್ತಿವೆ, ನಮ್ಮ ಶ್ವಾಸಕೋಶಗಳು ಕಾರ್ಯಾಚರಣೆಯಲ್ಲಿವೆ. ಇಂತಹ

ಪಡಿಸುತ್ತವೆ. ಗಾಳಿ ನಮ್ಮ ಕಣ್ಣಿಗೆ ನೇರವಾಗಿ ಕಾಣಿಸದಿದ್ದರೂ ಅದು ಇರುವುದಂತೂ ಸತ್ಯ. ಗಾಳಿಯನ್ನು ಹೇಗೆ ಉಪಕರಣಗಳನ್ನು ಬಿಟ್ಟು ಮಾದಿತೋರಿಸುವಂತೆ ತೋರಿಸಲು ಸಾಧ್ಯವಿಲ್ಲವೋ ಅದೇ ರೀತಿ ದೇವರನ್ನೂ ತೋರಿಸಲು ಸಾಧ್ಯವಿಲ್ಲ. ಎಲೆಗಳ ಅದುರುವಿಕೆ, ಹೃದಯದ ಬಡಿತಗಳ ಹಿನ್ನೆಲೆಯಲ್ಲಿ ಗಾಳಿಯ ಇರುವಿಕೆ ಎಷ್ಟು ಸತ್ಯವೋ ಹಾಗೆಯೇ ಈ ಪ್ರಪಂಚದ ವ್ಯವಸ್ಥಿತ ರೀತಿಯ ಎಲ್ಲ ಆಗು-ಹೋಗುಗಳ ಹಿನ್ನೆಲೆಯಲ್ಲಿ ದೇವರ ಇರುವಿಕೆಯೂ ಸತ್ಯ.

ದೇವರನ್ನು ಅರಿತುಕೊಳ್ಳಲು ಇರುವ ಮಾರ್ಗಗಳಾದ ಭಕ್ತಿ, ಶ್ರದ್ಧೆ, ಚಿಂತನೆ, ಪ್ರಾರ್ಥನೆಗಳು ಜ್ಞಾನ ಸಂಪಾದನೆಗೆ ಅಡ್ಡಿ ಎನ್ನುವ ಕಿರ್ಲೋಸ್ಕರರ ಮಾತು ಸರ್ವಥಾ ಸರಿಯಲ್ಲ. ಈ ಮಾರ್ಗಗಳಿಂದ ಜ್ಞಾನಗಂಗೆಯನ್ನು ಪಡೆದ ಅನೇಕ ಮಹನೀಯರು ಈ ಭೂಮಿಯಲ್ಲಿ ಬಂದು ಹೋಗಿದ್ದಾರೆ. ಕಿರ್ಲೋಸ್ಕರರವರ ಅಭಿಪ್ರಾಯವನ್ನು ಸುಳ್ಳಾಗಿಸಲು ರಾಮಕೃಷ್ಣ ಪರಮಹಂಸರೊಬ್ಬರ ಉದಾಹರಣೆಯೇ ಸಾಕು. ಪರಮಹಂಸರು ಯಾವ ಶಾಲಾ ಕಾಲೇಜುಗಳಿಗೂ ಹೋಗಿ ಕಲಿತವರಲ್ಲ. ಆದರೂ ಅವರ ಆತ್ಮಶಕ್ತಿಗೆ ಕಲಿತ ಮಹಾನ ವ್ಯಕ್ತಿಗಳೂ ವಿಜ್ಞಾನಿಗಳೂ ತಲೆಬಾಗಿದರು. ಕಿರ್ಲೋಸ್ಕರರಿಗಿಂತಲೂ ಜಟಿಲ ಹಾಗೂ ಕ್ಲಿಷ್ಟ ಪ್ರಶ್ನೆಗಳನ್ನು ಹೊತ್ತು ಪರಮಹಂಸರಲ್ಲಿ ಹೋದ ವಿವೇಕಾನಂದರಂಥವರೇ ಪರಮಹಂಸ ಸ್ಪರ್ಶಮಾತ್ರದಿಂದಲೇ ತಮ್ಮೆಲ್ಲ ಶಕ್ತಿಯನ್ನು ಕಳೆದುಕೊಂಡು ಕಡೆಗೆ ಅವರಿಗೆ ಶರಣಾದರು.

'ವಿಶ್ವವನ್ನು ಸೃಷ್ಟಿಸಿದ ಈ ದೇವರನ್ನು ಸೃಷ್ಟಿಸಿದವರು ಯಾರು?' ಎಂದು ಪ್ರಶ್ನಿಸಿ ಆಸ್ತಿಕರ ಬಾಯಿ ಕಟ್ಟಲು ಪ್ರಯತ್ನಿಸುವ ಲೇಖಕರಲ್ಲಿ ಒಂದು ಬಿನ್ನಹ. ಉದಾಹರಣೆಗೆ: ಕೋಳಿಯಿಂದ ಮೊಟ್ಟೆ ಬಂತೊ ಅಥವಾ ಮೊಟ್ಟೆಯಿಂದ ಕೋಳಿ ಬಂತೊ ಎಂದು ಕೇಳಿದರೆ ಲೇಖಕರು ಏನು ಹೇಳಬಹುದು? ನಮಗೆ ಪ್ರತ್ಯಕ್ಷವಾಗಿ ಕಾಣುವ ಈ ವಸ್ತುಗಳ ಮೂಲ ಸೃಷ್ಟಿಯೇ ನಮಗೆ ಗೋಚರಿಸದಿರುವಾಗ ಇನ್ನು ಅಗೋಚರ ಶಕ್ತಿಯ

ಧರ್ಮಗಳ ಅಸ್ತಿತ್ವದಿಂದಾಗಿ ಲಕ್ಷಾಂತರ ಜನರ ಕಗ್ಗೊಲೆ ನಡೆದಿದೆ ಎನ್ನುವ ಲೇಖಕರ ಅಭಿಪ್ರಾಯವನ್ನು ಒಪ್ಪಬಹುದಾದರೂ ಭೌತಿಕ ಜ್ಞಾನದಿಂದ ಕೇವಲ ಒಳ್ಳೆಯದೇ ಆಗಿದೆಯೆಂದು ಹೇಳಬರುವುದಿಲ್ಲ. ಭೌತಿಕ ವಿಜ್ಞಾನದ ಆವಿಷ್ಕಾರವಾದ ಅಣುಬಾಂಬಿನಿಂದ ಜಪಾನಿನಲ್ಲಿ ಉಂಟಾದ ಪ್ರಾಣಹಾನಿ, ನಗರಗಳ ನಾಶ ವಾತಾವರಣದ ಮಲಿನತೆ ಎಂದಿಗೂ ನಾವು ಮರೆಯಲು ಸಾಧ್ಯವೇ ಇಲ್ಲ. ಇಂದಿಗೂ ಅಲ್ಲಿ ಹುಟ್ಟುತ್ತಿರುವ ಕುಂಟ ಕುರುಡ ಮಕ್ಕಳೆ ಅದಕ್ಕೆ ಸಾಕ್ಷಿ.

ಭೌತಶಾಸ್ತ್ರವು ವಸ್ತುವಿನ ಮೂಲ ಪರಮಾಣುವಿನ ವರೆಗೂ ಮುಟ್ಟಿದರೂ ಅಲ್ಲಿ ಅದರಿಗೆ ದೇವರು ಅಥವಾ ಅಧಿಭೌತಿಕ ಶಕ್ತಿ ಯಾವುದೂ ಗೋಚರವಾಗಿಲ್ಲ ಎನ್ನುವ ಲೇಖಕರ ಮಾತು ಕುಹಕವಾದುದು. ಎಲೆಯು ಗಾಳಿಯಿಂದ ಅಲುಗಾಡುತ್ತದೆ ನಿಜ. ಆದರೆ ಗಾಳಿಯನ್ನು ನೋಡಲು ಎಲೆಯನ್ನು ಛಿದ್ರ ಛಿದ್ರ ಮಾಡುತ್ತ ಅಂತ್ಯದ ವರೆವಿಗೂ ವಿಭಜಿಸಿದರೆ ಅದರೊಳಗೆ ಗಾಳಿ ನಮಗೆ ಕಾಣಸುತ್ತದೆಯೇ? ಪರಮಾತ್ಮ ಎಲ್ಲೆಲ್ಲೂ ಇದ್ದಾನೆ ನಿಜ; ಆದರೆ ಅದಕ್ಕಾಗಿ ವಸ್ತುಗಳನ್ನು ವಿಭಜಿಸಿದರೆ ಆತ ಕಾಣಲಾರ. ಅಥವಾ ಆ ಶಕ್ತಿ ಗೋಚರಿಸಲಾರದು. ಅದಕ್ಕಿರುವ ಮಾರ್ಗವೇ ಬೇರೆ. ಭಕ್ತಿ, ಶ್ರದ್ಧೆ, ತಪಸ್ಸು ಚಿಂತನೆ, ಇಂದ್ರಿಯ ನಿಗ್ರಹ ಇಂತಹ ಮಾರ್ಗದಿಂದ ಮಾತ್ರ ಆತ್ಮಜ್ಞಾನ ಪಡೆಯಲು ಸಾಧ್ಯ.

**—ಮೂಡಲಹಿಪ್ಪೆಯ ಜಗದೀಶ**

## ತಾ ರ್ಕಿ ಕ ಕೌ ಶ ಲ

ಡಾ. ಕಿರ್ಲೋಸ್ಕರರು ನಿಮ್ಮ ಮಾರ್ಚ್ ಸಂಚಿಕೆಯಲ್ಲಿ ಬರೆದ ಲೇಖನವನ್ನು ಓದಿದ ನಂತರ ಅವರ ತರ್ಕ ಕೌಶಲವನ್ನು ಮೆಚ್ಚಿದೆನಾದರೂ ಮನುಷ್ಯನ ತಾರ್ಕಿಕ ಸಾಮರ್ಥ್ಯದ ಪರಿಮಿತಿಯನ್ನು ಅಲ್ಲಿಯೇ ಗುರುತಿಸಲು ನನಗೆ ಶಕ್ಯವಾಯಿತು. ಅವರ ಪ್ರಕಾರ ಮನುಷ್ಯನ ಬಾಹ್ಯೇಂದ್ರಿಯಗಳಿಗೆ ಗೋಚರವಾಗುವುದರಲ್ಲಿ ಮಾತ್ರ ಆತ ನಂಬಬೇಕು; ಅಂತೆಯೇ ಇಂದ್ರಿಯ ಗೋಚರವಲ್ಲದ ದೇವರನ್ನು ನಂಬಕೂಡದು.

ಆದರೆ ಈ ವಿಶ್ವವು ಡಾ. ಕಿರ್ಲೋಸ್ಕರರು ಭಾವಿಸಿರಬಹುದಾದಷ್ಟು ಸರಳ ತರ್ಕಕ್ಕೆ ಮಾತ್ರ ನಿಲುಕುವಂಥದೇನಲ್ಲ. ಬಾಹ್ಯೇಂದ್ರಿಯಗಳಿಗೆ ಗೋಚರವಾಗದಂತಹ– ಅಂದರೆ ಕಣ್ಣಿಗೆ ಕಾಣದ, ಕಿವಿಗೆ ಕೇಳದ, ಮೂಗಿಗೆ ಆಘ್ರಾಣಿಸಲಾಗದ, ನಾಲಿಗೆಯಿಂದ ರುಚಿ ನೋಡಲಾಗದ, ತ್ವಚೆಯಿಂದ ಸ್ಪರ್ಶಿಸಲಾಗದಂತಹ ಅನೇಕಾನೇಕ ಶಕ್ತಿಗಳು ಇವೆ. ಅಯಸ್ಕಾಂತ, ವಿದ್ಯುಚ್ಛಕ್ತಿ ಮುಂತಾದವುಗಳನ್ನು ಅವುಗಳು ಮಾಡುವ ಕಾರ್ಯದಿಂದ ಪರ್ಯಾಯವಾಗಿ ಮನದಂದು ನಾವು ನಂಬುತ್ತೇವಲ್ಲ. ಇದೇ ರೀತಿ ಪ್ರೇಮ, ದ್ವೇಷ ಮುಂತಾದವುಗಳು ತೀರ ವೈಯಕ್ತಿಕ ಅಂಶಗಳನ್ನು ಯಾರಾದರೂ ಸ್ಪರ್ಶಿಸಿದ ರುಚಿ ನೋಡಿದ ಉದಾಹರಣೆ ಇದೆಯೆ ?

ದೇವರು ಎಂಬ ಶಕ್ತಿಯು ಇಡೀ ಬ್ರಹ್ಮಾಂಡಕ್ಕೆ ಮೂಲವೆಂದು ಹಲವಾರು ಪ್ರವಾದಿಗಳು ಕಾಲ ಕಾಲಕ್ಕೆ ಹೇಳುತ್ತಲೇ ಬಂದಿದ್ದಾರೆ. ಅವನ್ನು ಅದು ಅಗೋಚರವೆಂಬ ಮಾತ್ರಕ್ಕೇ ನಿರಾಕರಿಸಲು ಸಾಧ್ಯವೆ ? ಆದರೆ ದೇವರು ಎಂದೊಡನೆಯೇ ಆ ಶಕ್ತಿಗೆ ವ್ಯಕ್ತ ರೂಪವನ್ನು ಕೊಟ್ಟು, ವಿಶಿಷ್ಟ ಹೆಸರುಗಳನ್ನು ಕೊಟ್ಟು, ಆ ಶಕ್ತಿಯ ಮಹತಿ ಇಲ್ಲವೆ ಪರಿಮಿತಿಗೆ ಒಂದು ಗೆರೆ ಎಳೆದು ನೋಡಿದಾಗ ಮಾತ್ರ ಡಾ. ಕಿರ್ಲೋಸ್ಕರರಂಥ ನಾಸ್ತಿಕರ ಮಾತಿಗೆ ಬೆಲೆ ಬರಬಹುದು. ಆದರೆ ನನ್ನ ದೃಷ್ಟಿಯಲ್ಲಿ ದೇವರ ಕಲ್ಪನೆ ಇಷ್ಟು ಸಂಕುಚಿತವಾದುದಲ್ಲ. ದೇವರು ಎಂದರೆ ಅವನು ನಿರ್ಗುಣ, ನಿರಾಕಾರ, ನಿರಂಕುಶ ಬ್ರಹ್ಮ.

**—ಬಶೀರ ಅಹ್ಮದ್ ಮಂಜೇಶ್ವರ**



# ಪದಾರ್ಥ ಚಿಂತಾಮಣಿ

**- ೨೮ -**

**ಚೀಟ** ಅರಿವೆ ಇಂದು ಹೆಣ್ಣುಮಕ್ಕಳ ಡ್ರೆಸ್ಸಿಗೆ ಮಾತ್ರವಲ್ಲ, ಗಂಡಸರ ಅಂಗಿಗಳಿಗೂ ಜನ ಪ್ರಿಯವಾಗಿ ಉಪಯೋಗಿಸಲ್ಪಡುತ್ತಿದೆ. ಇದು ಎಲ್ಲಿಂದ ಬಂದ ಶಬ್ದ? ಎಂದು ಕೇಳಿದರೆ ಇಂಗ್ಲೀಷ್ ಬಲ್ಲವರು ತತ್‌ಕ್ಷಣ ಇಂಗ್ಲೀಷಿನ Chintz ಶಬ್ದದತ್ತ ಬೆರಳು ತೋರಿಸಬಹುದು. ಅದು ತಪ್ಪು. **ಚಿಂಟ್ಸ್** ಎಂಬ ಇಂಗ್ಲೀಷ್ ಪದವೇ ಹಿಂದಿಯ **ಛೀಂಟ್** (= ಬೊಟ್ಟು ಬೊಟ್ಟಾಗಿ ಮುದ್ರಿಸಿದ ಬಟ್ಟೆ)ನಿಂದ ಹುಟ್ಟಿದ್ದು. ಈ **ಛೀಂಟ್** ಸಂಸ್ಕೃತದ **ಚಿತ್ರ**ದ ಅಪಭ್ರಂಶ ರೂಪ. ಋಗ್ವೇದದಲ್ಲಿ **ಚಿತ್ರ** ಶಬ್ದಕ್ಕೆ ಹೊಳೆಯುವ, ಎದ್ದು ಕಾಣುವ ಎಂದು ಅರ್ಥವಿದ್ದರೂ ಮಹಾಭಾರತ ಕಾಲದಲ್ಲಿ ಆಗಲೆ ಅದಕ್ಕೆ ಬೊಟ್ಟು ಬೊಟ್ಟಾದ, ಹಂಡಬಂಡ (ಬಣ್ಣ ಬಣ್ಣದ) ಎಂದು ಅರ್ಥವಿತ್ತು. ಹಿಂದಿ **ಚೀಟಾ,** ಕನ್ನಡ **ಚಿಟ್ಟೆ ಹುಲಿ**ಯಲ್ಲಿರುವ **ಚಿಟ್ಟೆ** ಇದೇ. ತುಳುವಿನಲ್ಲಿ **ಚಿಟ್ಟೆ** ಎನ್ನುವುದಕ್ಕೆ ಬೊಟ್ಟು, ಚುಕ್ಕಿ ಎಂಬ ಅರ್ಥವೂ ಇದೆ. ಹೀಗೆ **ಚಿತ್ರಪಟ** ಅಥವಾ **ಚಿತ್ರ ವಸ್ತ್ರ** ಎಂಬುದು ಹಿಂದೀ **ಛೀಂಟ್** ಆಗಿ ಅಲ್ಲಿಂದ ಆ ಬಟ್ಟೆಯೊಡನೆ ಇಂಗ್ಲೀಷಿಗೂ ರಫ್ತಾಯಿತು.

ಪಾಶ್ಚಾತ್ಯ ಮಾದಕ ಪಾನೀಯಗಳ ರುಚಿ ಹತ್ತಿದವರಿಗೆಲ್ಲ (ಈಗವರ ಸಂಖ್ಯೆ ವಿಪುಲವಾಗಿದೆ.) **ಜಿಂಜರ್ ಬೀರ್** (Ginger Beer) ಗೊತ್ತಿರಬೇಕು. ಅದಲ್ಲದಿದ್ದರೂ **ಜಿಂಜರ್ ಸೋಡಾ** ಆದರೂ ನಗರವಾಸಿಗಳಿಗೆ ಪರಿಚಿತ. ಜಿಂಜರ್ ಎಂದರೆ **ಶುಂಠಿ** ಅಥವಾ **ಅಲ್ಲ** (ಹಸಿ ಶುಂಠಿ). ಬಾಯಿ ಚುರುಕಿಗಾಗಿ ಅದನ್ನು ಬೆರಸಿ ತಯಾರಿಸಿದ್ದು ಜಿಂಜರ್ ಬೀರ್. ಈ ಜಿಂಜರ್ ಭಾರತದಿಂದಲೇ ಅನ್ಯ ದೇಶಗಳಿಗೆ ಹೋದದ್ದು. ಅದು ಸಂಸ್ಕೃತ **ಶೃಂಗವೇರ,** ಪ್ರಾಕೃತ **ಸಿಂಗಬೇರ**ದಿಂದ ಹುಟ್ಟಿದ ಪದವೆಂದೂ ಕೊಂಬಿನ (ಶೃಂಗ) ಹಾಗಿರುವ ಮೈಯುಳ್ಳದ್ದೆಂದು ಅದರ ಅರ್ಥವೆಂದೂ ಹೇಳಲಾಗುತ್ತದೆ. ಆದರೆ ಕೆಲ ತಜ್ಞರ ಅಭಿಪ್ರಾಯದಲ್ಲಿ ಅದು ನಿಜವಾಗಿ ಮಲೆಯಾಳಿ **ಇಂಚಿವೇರ್** (ಇಂಚಿ ಬೇರು) ಪದದಿಂದಲೇ ಸಂಸ್ಕೃತ ಪ್ರಾಕೃತಗಳಿಗೂ ಹೋಗಿರಬೇಕು. ಅದು ಹೇಗೇ ಇರಲಿ, ಬಹಳ ಪುರಾತನದಲ್ಲೇ ಈ ಖಾರ ಗೆಣಸು ಪರದೇಶಗಳಿಗೆ ರಫ್ತಾಗುತ್ತಿತ್ತು. ಪವಿತ್ರ ಕುರಾನಿನಲ್ಲಿ ಅದು **ಝಂಜಬೀಲ್** ಎಂಬ ಹೆಸರಿನಿಂದ ಕಾಣಿಸಿಕೊಂಡಿದೆ (ಕ್ರಿ. ಶ. ೭ನೇ ಶತಮಾನ). ಅದಕ್ಕೂ ಮುಂಚೆ ಲ್ಯಾಟಿನ್ನಿನಲ್ಲಿ **ಝಿಂಗಿ ಬೇರಿ** ಎಂದು ಲಭ್ಯವಾಗುತ್ತದೆ; ಇಂಗ್ಲೀಷಿನಲ್ಲಿ **ಝಿಂಗಿ ಬೇರ್** ಇತ್ಯಾದಿ ರೂಪಗಳಿಂದ ಕ್ರಿ. ಶ. ೧೦೦೦ ದಿಂದಲೇ ಸಿಗುತ್ತದೆ. ಹೆಚ್ಚು ಕಡಿಮೆ ಎಲ್ಲ ಯುರೋಪಿಯನ್ ಭಾಷೆಗಳಲ್ಲಿ ಸ್ವಲ್ಪ ರೂಪ ವ್ಯತ್ಯಾಸದೊಡನೆ ಅದೇ ಶಬ್ದ ಇದೆ.

ಶುಂಠಿ ಅಥವಾ ಖಾರ ಗೆಣಸಿನ ಹೆಸರು ಬರೀ ಮಸಾಲೆಯಾಗಿ ಪಾನೀಯಗಳಲ್ಲಿ ಸೇರಿರದೆ ಇಂಗ್ಲೀಷ್ ಭಾಷೆಯಲ್ಲಿ ಹೆಚ್ಚು ಆಳಕ್ಕೆ ಇಳಿದಿದೆ. ರಾಜಕಾರಣದ ಪರಿಭಾಷೆಯಲ್ಲಿ **ಜಿಂಜರ್ ಗ್ರೂಪ್** (Ginger group) ಎಂಬ ಪದಪುಂಜ ಬಳಕೆಯಲ್ಲಿದೆ. ಯಾವುದಾದರೂ ಪಕ್ಷ ಅಥವಾ ಪಂಗಡದಲ್ಲಿ ಅದರ ತತ್ವ ಅಥವಾ ಕಾರ್ಯಕ್ರಮವನ್ನು ತೀವ್ರವಾಗಿ ಜಾರಿಗೆ ತರುವಂತೆ ಒತ್ತಾಯಿಸುವ ಗುಂಪನ್ನು 'ಶುಂಠಿ ಗುಂಪು' ಎಂದು ಕರೆಯುತ್ತಾರೆ. **ಜಿಂಜ್‌ರಿಂಗ್ ಅಪ್** ಎಂಬ ಇನ್ನೊಂದು ಪದಪುಂಜ ಒಂದು ಸಂಸ್ಥೆ ಅಥವಾ ಸರಕಾರದ ಆಡಳಿತವನ್ನು ಹೆಚ್ಚು ಚುರುಕುಗೊಳಿಸುವ ತೀವ್ರ ಕ್ರಮ ತೆಗೆದುಕೊಳ್ಳುವುದು ಎಂದರ್ಥ ಕೊಡುತ್ತದೆ.

**— ಪಾವೆಂ.**

# ಮದುವೆ— ಅಲ್ಲಮಾಲಪುರದಲ್ಲೊಂದು ಕ್ರಾಂತಿ

**ಎ. ಚಿದಂಬರಯ್ಯ**

ಅಲ್ಲಮಾಲಪುರ ದೆಹಲಿಯಿಂದ ಅರವತ್ತೆಂಟು ಕಿಲೋಮೀಟರ್ ದೂರದಲ್ಲಿರುವ ಹರಿಯಾಣದ ಒಂದು ಹಳ್ಳಿ. ರವೀಂದ್ರಸಿಂಗ್ ಆ ಹಳ್ಳಿಯ ಒಬ್ಬ ಸಾಮಾನ್ಯ ರೈತ. ತುಂಬಿದ ಸಂಸಾರ. ಮಾಸಿಕ ಆದಾಯ ಸುಮಾರು ಇನ್ನೂರ ಐವತ್ತು ರೂಪಾಯಿ. ಮೊದಲ ಮಗಳಿಗೆ ಮದುವೆಯಾಗಬೇಕು. ದೇಶದ ಎಲ್ಲೆಡೆ ಇರುವ ವರದಕ್ಷಿಣೆಯ ಅಪಾಂತರ ಹರಿಯಾಣದಲ್ಲಿ ಇನ್ನೂ ಹೆಚ್ಚು. ವರೋಪಚಾರದ ಮೊತ್ತ ಕೆಲವು ನೂರು ರೂಪಾಯಿಗಳಿಂದ ಹಲವಾರು ಲಕ್ಷಗಳವರೆಗೂ ಉಂಟು. ಕೆಲವರು ಸ್ಕೂಟರ್, ಕಾರು, ರೆಫ್ರಿಜರೇಟರ್ ಮುಂತಾದುವುಗಳನ್ನು ಕೊಟ್ಟರೆ ಒಬ್ಬರು ಅಳಿಯನ ತೂಕದ ಚಿನ್ನವನ್ನೇ ಕೊಟ್ಟರಂತೆ. ಮತ್ತೊಬ್ಬರು ಮದುವೆಗೆ ಆಗಮಿಸಿದ ಆಹ್ವಾನಿತರಿಗೆಲ್ಲ ಬೈಸಿಕಲ್‌ಗಳನ್ನು ಕೊಟ್ಟರಂತೆ. ಉಳ್ಳವರ ಈ ಅಟ್ಟಹಾಸದ ಬಿಸಿ ಸಾಮಾನ್ಯರನ್ನೂ ಬಿಡಲಿಲ್ಲ. ಈ ವಿಷವರ್ತುಲದಲ್ಲಿ ರವೀಂದ್ರಸಿಂಗನೂ ಸಿಕ್ಕಿಬಿದ. ತನ್ನದಾದ ಕೇವಲ ಅರ್ಧ ಎಕ್ಕೇರ್ ಜಮೀನನ್ನು ಅಡಮಾನು ಹಾಕಿದ. ಚರಸ್ವತ್ತುಗಳ ವಿಲೇ ಮಾಡಿದ. ಸರ್ವಸ್ವವನ್ನೂ ಕಳೆದುಕೊಳ್ಳುವ ಮೂಲಕ ಮೊದಲ ಮಗಳ ಮದುವೆ ಮಾಡಿದ. ಜೀವನಕ್ಕಾಗಿ ತಿಂಗಳಿಗೆ ಒಂದುನೂರು ರೂಪಾಯಿ ಸಂಬಳದ ನೌಕರಿ ಹಿಡಿದ. ಒಪ್ಪೊತ್ತಿನ ರೊಟ್ಟಿಗೂ ಸಾಲದ ಈ ಆದಾಯದಲ್ಲಿ ತೊಳಲಾಡಿದ. ನಾಲ್ಕು ವರ್ಷಗಳು ಕಳೆಯುವುದರೊಳಗಾಗಿ ಎರಡನೆಯ ಮಗಳೂ ಮದುವೆಗೆ ಬೆಳೆದು ನಿಂತಳು. ರವೀಂದ್ರನಿಗೆ ಇದು ದಿಕ್ಕು ತೋಚದ ನಿರಂತರ ವ್ಯಥೆ. ಕೆಲವರು ಮಗಳ ಮದುವೆಯಲ್ಲಿ ಕಳೆದುಕೊಂಡಿದ್ದನ್ನು ಸೊಸೆಯನ್ನು ಬರಮಾಡಿಕೊಳ್ಳುವಾಗ ತುಂಬಿಕೊಂಡರೆ, ಗಂಡು ಮಕ್ಕಳೇ ಇಲ್ಲದವರು ಸಾಮಾನ್ಯವಾಗಿ ನಿರ್ಗತಿಕರಾಗುವುದೇ ಹೆಚ್ಚು. ಕಬ್ಬಿನ ತುದಿಯನ್ನು ಹಿಡಿದ ಗಾಣ ಬುಡದವರೆಗೂ ನುಂಗುವಂತೆ ವರದಕ್ಷಿಣೆಯ ಪಿಡುಗು ಇಡೀ ಸಮಾಜವನ್ನೇ ನುಂಗುತ್ತಿತ್ತು. ಇದರಿಂದ ಹೇಗಾದರೂ ತಪ್ಪಿಸಿಕೊಳ್ಳಬೇಕೆಂದು ಎಲ್ಲರಿಗೂ ತವಕ. ಆದರೆ ದಾರಿ ಮಾತ್ರ ತಿಳಿಯದು.

೧೯೭೪ರ ಮಾರ್ಚ್ ಮೊದಲನೇ ವಾರದ ಒಂದು ಮುಂಜಾನೆ, ಅಲ್ಲಾವಾಲಪುರದ ಚಹಾ ಅಂಗಡಿಯೊಂದರಲ್ಲಿ ಗಿರಾಕಿಗಳು ತುಂಬಿದ್ದರು. ಎಲ್ಲರೂ ಪರಸ್ಪರ ಪರಿಚಿತರೇ. ಕೊರೆಯುವ ಚಳಿಯಲ್ಲಿ ಹೊರಬರುವ ಮುಸುಕಿಲ್ಲದೆ ಬಿಸಿ ಬಿಸಿ ಚಹಾ ಕುಡಿಯುತ್ತಾ ಕ್ಷೇಮ ಸಮಾಚಾರ, ಮಳೆ ಬೆಳೆ, ಧಾರಣೆವಾಸಿಗಳು ಮುಂತಾದ ಮಾತು ನಡೆದಿತ್ತು. ಆಕಸ್ಮಿಕವಾಗಿ ವರದಕ್ಷಿಣೆಯ ಮಾತೂ ಬಂತು. ಚರ್ಚೆಗೂ ಬಿಸಿ ಬಂತು. ಭೂಪಸಿಂಗ್ ವರದಕ್ಷಿಣೆಯ ಅನಾಹುತದ ಬಗ್ಗೆ ಉದಾಹರಣೆ ಸಹಿತವಾಗಿ ಮನ ಮುಟ್ಟುವಂತೆ ಮಾತನಾಡಿದ. ಅದನ್ನು ಅಳಿಸಿಹಾಕಲು ಕಾರ್ಯೋನ್ಮುಖವಾಗುವಂತೆ ಕರೆಯಿತ್ತ. ತಂದೆಯ ಮರಣಾನಂತರದ ಉತ್ತರ ಕ್ರಿಯೆಗಳಲ್ಲಿ ತನ್ನ ಸರ್ವಸ್ವವನ್ನೂ ಕಳೆದುಕೊಂಡಿದ್ದ ಖಿಜಾಸಿಂಗ್, ಭೂಪಸಿಂಗನ ಮಾತಿನಿಂದ ಪ್ರಭಾವಿತನಾದ, ಮೆಚ್ಚಿದ, ಪ್ರೋತ್ಸಾಹ ನೀಡಿದ, ಜೊತೆಗೂಡಿದ. ಹಳ್ಳಿಯ ಪ್ರಮುಖರನ್ನು ಸೇರಿಸಿ ಚರ್ಚಿಸುವುದೆಂದು ತೀರ್ಮಾನವಾಯಿತು. ಮಾರ್ಚ್ ಏಳರಂದು ಅಲ್ಲಾವಾಲ-ಪುರದ ಬನಿವಾಲ್ ದೇವಸ್ಥಾನದಲ್ಲಿ ನಲವತ್ತೇಳು ಹಳ್ಳಿಗಳ ಪ್ರಮುಖರ ಸಭೆ ನಡೆಯಿತು. ಮಾರ್ಚ್ ೩೧ರಂದು ಎರಡನೆಯ ಸಮಾವೇಶ. ಅಂದು ಉತ್ಸಾಹಭರಿತವಾದ ಚರ್ಚೆ ತೀರ್ಮಾನಗಳ ನಂತರ ನೆರೆದಿದ್ದವರೆಲ್ಲ ತಮ್ಮ ಗಂಡು ಮಕ್ಕಳು ವರದಕ್ಷಿಣೆ ಪಡೆಯುವುದಿಲ್ಲ ಎಂದು ಪ್ರಮಾಣ ವಚನ ನೀಡಿದರು. ಪ್ರಯತ್ನ ಅಲ್ಲಿಗೇ ನಿಲ್ಲಲಿಲ್ಲ. ಇಂದ್ರಜ್‌ಸಿಂಗ್ ಹಳ್ಳಿಯಿಂದ ಪಟ್ಟಣಕ್ಕೆ ಬಂದು ಕಾನೂನು ಪದವಿ ಪಡೆದ ಯುವಕ. ಪಲ್ವಾಲ್ ಜಿಲ್ಲೆಯ ವಕೀಲರ ಸಂಘದ ಸದಸ್ಯ. ಸಮಾಜ ಸುಧಾರಣೆಯ ಆಸೆ ಹೊತ್ತ ಉತ್ಸಾಹಿ ತರುಣ. ಹಳ್ಳಿಗರ ಪ್ರಯತ್ನಕ್ಕೆ ಚಾಲನೆ ಕೊಟ್ಟ. ಮುಂದಾಳತ್ವ ವಹಿಸಿದ.

ಅನೇಕ ಹಳ್ಳಿಗಳ ಪ್ರಮುಖರಿಂದ ಕೂಡಿದ ಎಂಭತ್ತೆರಡು ಜನರ ಪಟ್ಟಿ ತಯಾರಿಸಲಾಯಿತು. ಉದ್ದಿಶ್ಯವನ್ನು ವಿವರಿಸುವ ಕೈಬರಹದ ಕರೆಯೋಲೆಗಳು ಸಿದ್ಧವಾದವು. ಹರಿಯಾಣ ಸಾರಿಗೆ ಕೆಲಸಗಾರರ ಸಂಘದ ಅಧ್ಯಕ್ಷ ಹಟಲಾಲ್‌ಸಿಂಗ್ ಪತ್ರಗಳ ವಿತರಣೆ ಮತ್ತು ಸಂಪರ್ಕದ ಜವಾಬ್ದಾರಿ ಹೊತ್ತ. ಹದಿನೈದು ದಿನಗಳಲ್ಲಿ ನಾಲ್ಕು ಸಾವಿರ ಕಿಲೋಮೀಟರುಗಳಿಗೂ ಹೆಚ್ಚು ಸಂಚರಿಸಿ, ಹಳ್ಳಿಯ ಪ್ರಮುಖರನ್ನು ಸಂದರ್ಶಿಸಿ, ವಿಷಯದ ಮಹತ್ವವನ್ನು ಮನ ಮುಟ್ಟುವಂತೆ ವಿವರಿಸಿ, ಕರೆಯೋಲೆಗಳನ್ನು ಕೊಟ್ಟ. ಅಕ್ಟೋಬರ್ ಹತ್ತೊಂಬತ್ತರಂದು ಪಲ್ವಾಲ್ ಹೈಯರ್ ಸೆಕೆಂಡರಿ ಶಾಲಾ ಮೈದಾನದಲ್ಲಿ ಭಾರಿ ಬಹಿರಂಗ ಸಭೆ ಏರ್ಪಾಡಾಯಿತು. ಮೂರು ದಿನ ಮುಂಚಿನಿಂದಲೇ ಹಳ್ಳಿಗಳಿಂದ ಸಾವಿರ ಸಹಸ್ರ ಸಂಖ್ಯೆಗಳಲ್ಲಿ ಜನ ಬರಲಾರಂಭಿಸಿದರು. ಧೋತಿ ಉಟ್ಟು ಮುಂಡಾಸು ಕಟ್ಟಿದವರು, ವಿವಿಧವಾದ ಶಾಲು ಹೊದ್ದವರು, ಬಣ್ಣ ಬಣ್ಣದ ಬಟ್ಟೆ ತೊಟ್ಟವರು, ಹೀಗೆ ಅನೇಕ ಬಗೆಯ ಜನರ ಗುಂಪು ಸೇರಿತು. ಅಂದು ಪಲ್ವಾಲ್ ಪಟ್ಟಣದಲ್ಲಿ ಒಂದು ದೊಡ್ಡ ಹಬ್ಬದ ವಾತಾವರಣ, ಜಾತ್ರೆಯ ನೋಟ. ಆಯ್ದ ಎಂಭತ್ತೆರಡು ಜನರ ಸಭೆ ಶಾಲಾ ಮೈದಾನದಲ್ಲಿ ನಿರ್ಮಿಸಿದ ವಿಶೇಷ ಗುಡಾರದಲ್ಲಿ ಆರಂಭವಾಯಿತು. ಎಲ್ಲರೂ ಚರ್ಚೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ವರದಕ್ಷಿಣೆಗೆ ಮಿತಿ ಹಾಕುವ ವಿಚಾರದಲ್ಲಿ ಯಾರಿಂದಲೂ ವಿರೋಧ ಬರಲಿಲ್ಲ. ಮದುವೆಯ ಪ್ರತಿ ಹಂತವನ್ನೂ ವಿಮರ್ಶಿಸಲಾಯಿತು.

ಮದುವೆಗಳಲ್ಲಿ ಸಾಮಾನ್ಯವಾಗಿ ನಾಲ್ಕು ಹಂತಗಳು.

೧) ಸಗಾಯ್–ನಿಶ್ಚಿತಾರ್ಥ. ೨) ಲಗನ್–ಮದುವೆಯ ದಿನವನ್ನು ಗೊತ್ತುಪಡಿಸುವುದು. ೩) ಬರೋತಿ– ಮದುವಣಗನು ಮದುವಣಗಿತ್ತಿಯ ಮನೆಗೆ ಆಗಮಿಸುವ ದಿನ. ೪) ಬಿದಾ–ವಧುವು ವರನೊಡನೆ ಪ್ರಯಾಣ ಮಾಡುವ ದಿನ. ಸಾಮಾನ್ಯವಾಗಿ ವಧುವಿನ ತಂದೆ ವರನಿಗೆ 'ಸಗಾಯ್'ನಲ್ಲಿ ಕೊಟ್ಟ ಕೊಡುಗೆಯು

ಐದರಷ್ಟನ್ನು 'ಲಗನ್'ನಲ್ಲೂ, 'ಲಗನ್'ನಲ್ಲಿ ಕೊಟ್ಟ ಒಂದೂವರೆಯಷ್ಟನ್ನು 'ಬರೋತಿ'ಯಲ್ಲೂ, 'ಬರೋತಿ'ಯಲ್ಲಿ ಕೊಟ್ಟ ಎರಡರಷ್ಟನ್ನು 'ಬಿದಾ'ದಲ್ಲೂ ಕೊಡುವುದು ವಾಡಿಕೆ. ಈ ಎಲ್ಲ ಹಂತಗಳನ್ನೂ ವಿಮರ್ಶಿಸಿ ಹೊಸ ಕಟ್ಟಳೆಗಳನ್ನು ಮಾಡುವ ಸಲುವಾಗಿ ಇಪ್ಪತ್ತಾರು ಜನರ ಉಪಸಮಿತಿಯೊಂದನ್ನು ರಚಿಸಲಾಯಿತು. ಆ ದಿನ ಸಂಜೆ ತರಗತಿಯ ಕೊಠಡಿಯೊಂದರಲ್ಲಿ ಉಪಸಮಿತಿಯು ಸಭೆ ಸೇರಿ, ಸುದೀರ್ಘವಾದ ಚರ್ಚೆಯ ನಂತರ ಕಟ್ಟಳೆಗಳನ್ನು ಗೊತ್ತುಪಡಿಸಿತು. ಅವುಗಳಲ್ಲಿ ಮುಖ್ಯವಾಗಿ ಮದುವೆಯ ಮೊದಲ ಮೂರು ಹಂತಗಳಲ್ಲಿ ವಧುವಿನ ತಂದೆ ವರನಿಗೆ ಸಾಂಪ್ರದಾಯಿಕವಾಗಿ ಒಂದೊಂದು ರೂಪಾಯಿ ಮಾತ್ರ ಕೊಡತಕ್ಕದ್ದು. 'ಬಿದಾ'ದಲ್ಲಿ ಒಂದು ನೂರು ಒಂದು ರೂಪಾಯಿಗಳನ್ನೂ ಹನ್ನೊಂದು ಹಿತ್ತಾಳೆ ಪಾತ್ರೆ ಮತ್ತು ಕೆಲವು ಸಾಮಾನ್ಯ ಬಟ್ಟೆಗಳನ್ನೂ ಕೊಡತಕ್ಕದ್ದು. ಆಹ್ವಾನಿತರು ಯಾರೂ ವಧೂವರರಿಗೆ ಒಂದು ರೂಪಾಯಿಗಿಂತ ಹೆಚ್ಚಿಗೆ ಕೊಡಬಾರದು. ವೈಭವದ ಅಲಂಕಾರಗಳೂ ಬಾಜಾ ಬಜಂತ್ರಿಗಳೂ ನಿಷಿದ್ಧ. 'ಬರೋತಿ'ಯಲ್ಲಿ ಹನ್ನೊಂದು ಜನರಿಗಿಂತ ಹೆಚ್ಚಿಗೆ ಸೇರುವಂತಿಲ್ಲ. ಈ ಕಟ್ಟಳೆಗಳನ್ನು ಪಾಲಿಸದವರಿಗೆ ಜನಾಂಗದವರಿಂದ ಬಹಿಷ್ಕಾರ. ಅಂಥವರ ಮನೆಗಳಿಗೆ ಹೋಗಿಬರುವುದು, ಮಾತನಾಡಿಸುವುದು, ಆಪತ್ಸಮಯಗಳಲ್ಲಿ ಸಹಾಯ ಮಾಡುವುದು ಎಲ್ಲವೂ ವರ್ಜ್ಯ. ಅಕ್ರಮಗಳನ್ನು ಕಂಡುಹಿಡಿದು ವಿಚಾರಣೆ ನಡೆಸಲು ಪ್ರಾಥಮಿಕವಾಗಿ ಹಳ್ಳಿಯ ಪಂಚಾಯಿತಿಯ ಸಭೆ. ಎರಡನೆಯದಾಗಿ ಉಪಸಮಿತಿಯ ಸಭೆ. ಮೂರನೆಯದಾಗಿ ಎಂಭತ್ತೆರಡು ಜನರ ಉಚ್ಚ ಸಭೆಗಳನ್ನು ಗೊತ್ತುಪಡಿಸಲಾಯಿತು. ಅಕ್ಟೋಬರ್ ಇಪ್ಪತ್ತೆರಡು ಪಲ್ವಾಲಿನಲ್ಲಿ ಭಾರಿ ಮೆರವಣಿಗೆ ಮತ್ತು ಬಹಿರಂಗ ಸಭೆಯನ್ನು ನಡೆಸಲಾಯಿತು. ಸಭೆಯಲ್ಲಿ ಹೊಸ ಕಟ್ಟಳೆಗಳನ್ನು ತಿಳಿಯ ಪಡಿಸಿ ಪ್ರಚಾರಮಾಡಲಾಯಿತು. ನೆರೆದವರಿಗೆಲ್ಲಾ ಅಮಿತ ಸಂತೋಷ, ತುಂಬ ತೃಪ್ತಿ. ಇದಾದ ಕೆಲವೇ ತಿಂಗಳುಗಳಲ್ಲಿ ಸಭೆಯ ನಿರ್ಣಯಗಳನ್ನು ಉಲ್ಲಂಘಿಸಿದ ಕೆಲವು ಅಪರೂಪದ ಪ್ರಕರಣಗಳೂ ವರದಿಯಾದುವು. ಬಹಾಂಗುರಿ ಹಳ್ಳಿಯಲ್ಲಿ ಒಬ್ಬ ವರ ವಧುವಿನ ತಂದೆಯಿಂದ ಇನ್ನೂರ ಐವತ್ತು ರೂಪಾಯಿ ಪಡೆದಿದ್ದ. ಮದುವೆಯ ನಂತರ ತನ್ನ ಹಳ್ಳಿ ಸಿಹಿಗೆ ವಾಪಸಾದಾಗ ಪಂಚಾಯಿತಿಯಿಂದ ವಿಚಾರಣೆ ನಡೆಯಿತು. ಹಳ್ಳಿಗರು ಸಾಕ್ಷಿ ನೀಡಿದರು. ವರ ತಪ್ಪೊಪ್ಪಿಕೊಂಡು ಕ್ಷಮಾಪಣೆ ಬೇಡಿದ. ವಧುವಿನ ತಂದೆಗೆ ಹೆಚ್ಚುವರಿ ಮೊಬಲಗನ್ನು ವಾಪಸು ಮಾಡಿದ. ಈ ಚಳುವಳಿಯಿಂದ ಸಾಧಿಸುವುದು ಅಪಾರ. ಅಪವಾದಗಳು ಅಪರೂಪ. ರವೀಂದ್ರಸಿಂಗನಂತಹ ಸಾವಿರಾರು ಜನರಿಗೆ ವರದಕ್ಷಿಣೆಯ ಕಪಿ ಮುಷ್ಟಿಯಿಂದ ಬಿಡುಗಡೆ, ನೆಮ್ಮದಿಯ ನಿಟ್ಟುಸಿರು. ಇಷ್ಟೆಲ್ಲಾ ಸಾಧನೆಗಳಲ್ಲೂ ಯಾವುದೇ ರಾಜಕೀಯ ವ್ಯಕ್ತಿಯ ಅಥವಾ ಸರ್ಕಾರಿ ಅಧಿಕಾರಿಗಳ ಪ್ರವೇಶವಿಲ್ಲದಿರುವುದು ಒಂದು ಹೆಗ್ಗಳಿಕೆ. ಇದೆಲ್ಲಾ ಜನರಿಂದ ಜನರಿಗಾಗಿ. ಅಲ್ಲವಾಲಪುರದ ಈ ಚಳುವಳಿ ಇಡೀ ದೇಶಕ್ಕೆ ಒಂದು ಮಾದರಿ. ದೇಶದ ಪ್ರತಿಯೊಂದು ಜನಾಂಗದಲ್ಲೂ ಶಕ್ತರೂ ನಿಷ್ಠಾವಂತರೂ ಆದ ಮುಂದಾಳುಗಳು ಕಾರ್ಯೋನ್ಮುಖರಾದರೆ ಪುಸ್ತಕದಲ್ಲಿ ನಿದ್ರಿಸುವ ಕಾಯಿದೆಗಳಿಗಿಂತ ನೂರಾರು ಪಾಲು ಹೆಚ್ಚು ಉಪಕಾರವಾದೀತು. ಸಮಾಜದಲ್ಲೊಂದು ಸುಧಾರಣೆಯಾದೀತು.

( ಸಾಧಾರ )

# ಮೀನು ಹಿಡಿಯಲೆಂದು ಹೊರಟ ಮಿತ್ರರ ವಿಧಿ



ಮೂಲ: **ಗಾಯ್ ದ ಮೊಪಾಸಾ** ಕನ್ನಡಕ್ಕೆ: **ಸಿ. ಆರ್. ಮಂಜುನಾಥ**

ಪ್ರಷ್ಯನ್ ಸೇನೆ ಪ್ಯಾರಿಸ್ ನಗರಕ್ಕೆ ಮುತ್ತಿಗೆ ಹಾಕಿದೆ. ಈ ದಾಳಿಯಿಂದ ಇಡೀ ಪ್ಯಾರಿಸ್ ಬಿಕೊ ಎನ್ನುತ್ತಾ ಪಾಳು ಬಿದ್ದಿದೆ. ಜನಜೀವನ ಸ್ತಬ್ಧ. ಎಲ್ಲೋ ಅಲ್ಲೊಂದು ಇಲ್ಲೊಂದು ಗುಬ್ಬಿಗಳು ಕಾಣುತ್ತಿವೆ. ಈ ಸಮಯದಲ್ಲಿ ಸೇನೆಯ ಕಣ್ಣಿಗೆ ಬಿದ್ದರೆ ಅವು ಕೂಡ ಉಳಿಯುವಂತಿಲ್ಲ. ಗಡಿಯಾರದ ವ್ಯಾಪಾರಿ ಮಾರಿಸಾಟ್ ಇಂಥ ಪರಿಸ್ಥಿತಿಯಲ್ಲಿ ಕಾಲೆಳೆದುಕೊಂಡು ಹೋಗುತ್ತಿದ್ದ. ಪರಿಸ್ಥಿತಿಯ ವಿಕೋಪಕ್ಕೆ ಗುರಿಯಾಗಿ ಕೆಲಸವಿಲ್ಲದೆ ಕಾಲ ಕಳೆಯುತ್ತಿದ್ದ. ಕೋಟಿನ ಜೇಬಿನಲ್ಲಿ ಕೈಗಳನ್ನು ಇಳಿಬಿಟ್ಟು ಹೋಗುತ್ತಿದ್ದಾಗ ಅಕಸ್ಮಾತ್ ಬಾಲ್ಯದ ಗೆಳೆಯ ಸಾವೇಜನನ್ನು ಸಂಧಿಸಿದ.

ಯುದ್ಧಕ್ಕೆ ಮುಂಚೆ ಇಬ್ಬರೂ ರಜಾ ದಿನಗಳಲ್ಲಿ ಮೀನು ಹಿಡಿಯಲು ಹೋಗುತ್ತಿದ್ದರು. ಈ ಹವ್ಯಾಸದಿಂದಾಗಿ ಸಮಯವನ್ನು ಸಲೀಸಾಗಿ ಕಳೆಯುತ್ತಿದ್ದರು. ಬೆಳಿಗ್ಗೆ ಎದ್ದ ತಕ್ಷಣ ಒಂದು ಕೈಯಲ್ಲಿ ಗಾಳ, ಭುಜಕ್ಕೆ ಒಂದು ಡಬ್ಬಿಯನ್ನು ತಗುಲಿಸಿಕೊಂಡು ಕೊಲಂಬಸ್‌ವರೆಗೆ ರೈಲಿನಲ್ಲಿ ಹೋಗಿ ಅಲ್ಲಿಂದ ಮಾರಾಂಟ್ ದ್ವೀಪಕ್ಕೆ ಹೋಗಿ ಕತ್ತಲಾಗುವವರೆಗೂ ಮೀನು ಹಿಡಿಯುವರು



ಬಹಳ ದಿನಗಳ ನಂತರ ಮಾರಿಸಾಟ್ ಸಾವೇಜನನ್ನು ಭೆಟ್ಟಿಯಾಗಿದ್ದಾನೆ. ರೂ ನಾಟ್ ರೇಡೇವ್ ಮೊರೆಟ್‌ನಲ್ಲಿ ಒಂದು ಚಿಲ್ಲರೆ ಅಂಗಡಿಯನ್ನು ನಡೆಸುತ್ತಿದ್ದ ಸಾವೇಜ್ ಯಾವಾಗಲೂ ಹಸನ್ಮುಖಿ. ಮಾರಿಸಾಟನಿಗೆ ಮೀನು ಹಿಡಿಯುವುದರಲ್ಲಿ ಅತಿಯಾದ ಆಸಕ್ತಿ. ಇದರಿಂದಾಗಿಯೇ ಇಬ್ಬರ ನಡುವೆ ಗಾಢ ಮೈತ್ರಿ ಬೆಳೆಯಿತು. ಸರಿ, ಇಬ್ಬರೂ ಹಿಂದಿನ ದಿನಗಳನ್ನು ನೆನಪಿಸಿಕೊಳ್ಳುತ್ತಾ ಒಂದು ಹೋಟೆಲಿನಲ್ಲಿ ನೆತ್ತಿಗೇರುವವರೆಗೂ ದ್ರಾಕ್ಷಾರಸವನ್ನು ಹೀರಿದರು. ಸಾವೇಜ್ ಕೊನೆಗೆ ನಿಟ್ಟುಸಿರು ಬಿಡುತ್ತಾ, "ಎಂಥಾ ಭೀಕರ ದಿನಗಳನ್ನು ನಾವು ಎದುರಿಸುತ್ತಿದ್ದೇವಲ್ಲ!" ಎಂದ.

"ಇದ್ದುದರಲ್ಲಿ ಇವತ್ತು ವಾತಾವರಣ ಚೆನ್ನಾಗಿದೆ. ಅಂದ ಹಾಗೆ ನಾವು ಕಳೆದ ಹಳೆಯ ದಿನಗಳು, ಅದರಲ್ಲೂ ಮೀನು ಹಿಡಿಯುವುದರಲ್ಲಿ ಕಳೆದಷ್ಟಂತೂ ನಿನ್ನ ಮನಸ್ಸಿನಲ್ಲಿ ಇನ್ನೂ ಹಸಿರಾಗಿರಬೇಕಲ್ಲವೆ?" ಎಂದು ಮಾರಿಸಾಟ್ ಕೇಳಿದ.

"ನಿಜ ಮಾರಿಸಾಟ್, ಅಂಥ ದಿನಗಳನ್ನು ಮರೆಯುವುದು ಸಾಧ್ಯವೆ? ಮತ್ತೆ ಯಾವಾಗ ಮೀನು ಹಿಡಿಯಲು ಹೋಗೋಣ?"

"ಎಂದಿಗಂದರೆ ಅಂದೇ."

"ಧಾರಾಳವಾಗಿ ಹೋಗೋಣ ಸಾವೇಜ್. ಅಲ್ಲಿ ನನಗೆ ಕರ್ನಲ್ ಡಾ ಮೊಲಿನರ ಪರಿಚಯವಿದೆ. ಅವರು ನಮಗೆ ರಹದಾರಿ ಪತ್ರವನ್ನು ಕೊಡು

ವುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ."

ಸ್ವಲ್ಪ ಸಮಯದ ನಂತರ ಇಬ್ಬರೂ ತಮ್ಮ ತಮ್ಮ ಮೀನು ಹಿಡಿಯುವ ಸಾಧನಗಳನ್ನು ಹೊಂದಿಸಿಕೊಂಡು ಕರ್ನಲ್ ಡಾ ಪೊಲಿಸರ ನಿವಾಸಕ್ಕೆ ಹೋದರು. ಕರ್ನಲ್ ಕಿರುನಗೆ ಸೂಸುತ್ತ ಇಬ್ಬರಿಗೂ ರಹದಾರಿ ಪತ್ರವನ್ನು ಕೊಟ್ಟು ನಿಮಗೆ ಶುಭವಾಗಲಿ ಎಂದು ಹಾರೈಸಿ ಕಳುಹಿಸಿದ. ಸುಮಾರು ಹನ್ನೊಂದು ಗಂಟೆಯ ಹೊತ್ತಿಗೆ, ಇಬ್ಬರೂ ಅರ್ಜೆಂಟಿರ್ ಮತ್ತು ನಿಂಟೆರ್ ಕಡೆಗೆ ಹೆಜ್ಜೆ ಹಾಕತೊಡಗಿದರು. ಸಾವೇಜ್ ಕೂಗಿದ:

"ಏ ಮಾರಿಸಾಟ್, ಅಲ್ಲಿ ನೋಡು ಪ್ರಶ್ಯನ್ ಸೈನಿಕರು ಆ ಪರ್ವತವನ್ನು ಸುತ್ತುವರಿದಿದ್ದಾರೆ."

ಮಾರಿಸಾಟ್ ಅತ್ತ ನೋಡುತ್ತ ಗಾಬರಿಯಾಗಿ ಕೇಳಿದ: "ಯಾರಾದರೂ ಸೈನಿಕರು ನಮಗೆ ಭೇಟಿಯಾದರೆ ಏನು ಮಾಡುವುದು?" "ನೀವು ನಮ್ಮೊಡನೆ ಮೀನು ಹಿಡಿಯಲು ಬನ್ನಿ ಎಂದು ಕರೆದರಾಯಿತು" ಎಂದು ನಗುತ್ತಾ ಸಾವೇಜ್ ಉತ್ತರಿಸಿದ.

ಇಬ್ಬರೂ ಅನುಮಾನಿಸುತ್ತಾ ಹೆಜ್ಜೆ ಹಾಕತೊಡಗಿದರು. ಈ ನೀರವತೆ ಅವರಲ್ಲಿ ಸ್ವಲ್ಪ ಆತಂಕವನ್ನುಂಟುಮಾಡಿತು. ಒಬ್ಬರು ಇನ್ನೊಬ್ಬರಿಗೆ ಧೈರ್ಯ ಹೇಳುತ್ತಾ ನಡೆಯತೊಡಗಿದರು. ಪ್ರತಿಯೊಂದು ಶಬ್ದವನ್ನೂ ಗಮನವಿಟ್ಟು ಕೇಳುತ್ತಾ ದೊಡ್ಡ ಪೊದೆಗಳ ಹಿಂದೆ ಅಡಗಿಕೊಳ್ಳುತ್ತಾ ಮುಂದುವರಿದರು. ಇನ್ನೇನು ನದಿಯನ್ನು ದಾಟಲು ಸ್ವಲ್ಪ ಕಿರಿದಾದ ಪ್ರದೇಶವನ್ನು ದಾಟಬೇಕಾಗಿತ್ತು. ಬೂಟುಗಾಲಿನ ಭಾರವಾದ ಸಪ್ಪಳ ಆಗಾಗ ಅವರ ಕಿವಿಗಳಿಗೆ ಬೀಳುತ್ತಿತ್ತು. ದಡವನ್ನು ಕಂಡಕೂಡಲೇ ಅವರು ಹರುಷದಿಂದ ಓಡಿ ಪೊದೆಯಲ್ಲಿ ಅಡಗಿ ಕುಳಿತರು. ಅಲ್ಲಿದ್ದ ಹಳೆಯ ಕಾಫಿ ಬಾರ್ ಕೂಡ ಈಗ ಇಲ್ಲ. ತಮ್ಮನ್ನು ಯಾರೂ ಗಮನಿಸಿಯೇ ಇಲ್ಲ ಎಂಬಂತೆ ತಮ್ಮ ಪಾಡಿಗೆ ತಾವು ಮೀನು ಹಿಡಿಯುವ ಕೆಲಸ ಆರಂಭಿಸಿದರು. ಕೆಲವು ಮೀನುಗಳನ್ನು ಡಬ್ಬಿಗೆ ಹಾಕಿಕೊಂಡರು. ಮತ್ತೆ ಗಾಳ ಹಾಕಿದರು. ಹಾಗೆಯೇ ಈ ಪ್ರಪಂಚವನ್ನು ಮರೆತವರಂತೆ ಹಾಯಾಗಿ ಮೀನು ಹಿಡಿಯುವುದರಲ್ಲಿ ತಲ್ಲೀನರಾದರು.

ಇದ್ದಕ್ಕಿದ್ದಂತೆ ಭೂಮಿಯೇ ಅದುರುವಂತೆ ಗುಂಡಿನ ಮಳೆ ಸುರಿಯಲಾರಂಭಿಸಿತು. ಮಾರಿಸಾಟ್ ಎದ್ದು ನಿಂತು ನೋಡುತ್ತಾನೆ. ಮೌಂಟ್ ವೆಲೇರಿಯನ್‌ನಿಂದ ಒಂದೇ ಸಮನೆ ಗುಂಡು ಸಿಡಿಯುತ್ತಿವೆ. "ಇವರಿಗೆ ಗುಂಡು ಹಾರಿಸುವುದನ್ನು ಬಿಟ್ಟರೆ ಬೇರೆ ಏನು ತಾನೆ ಗೊತ್ತು?" ಎಂದು ಗೊಣಗುತ್ತಾ ಸಾವೇಜ್ ತನ್ನ ಭುಜವನ್ನು ಸರಿಪಡಿಸಿಕೊಂಡು ಎದ್ದು ನಿಂತ. ಸ್ವಭಾವತಃ ಶಾಂತಚಿತ್ತನಾದ ಮಾರಿಸಾಟ್ ಕೋಪಗೊಂಡು,

"ಅವರೆಲ್ಲಾ ಶತಮೂರ್ಖರು. ಒಬ್ಬರನ್ನೊಬ್ಬರು ಕೊಂದರೆ ಅದೇನು ಸುಖ ಸಿಗುತ್ತೊ? ಈ ಪ್ರಪಂಚದಲ್ಲಿ ಒಂದು ದಿನವಾದರೂ ಸುಖ ಅನುಭವಿಸಲು ಬಿಡುವುದಿಲ್ಲ ಈ ಜನ," ಎಂದ.

"ಅವರು ಕಾಡುಮೃಗಗಳಿಗಿಂತ ಅತ್ತತ್ತ, ನಮ್ಮಲ್ಲಿ ಎಲ್ಲಿವರೆಗೆ ಈ ಸರ್ವಾಧಿಕಾರಿ ಸರ್ಕಾರ ಇರುತ್ತದೋ ಅಲ್ಲಿಯವರೆಗೂ ಯುದ್ಧ ಪಿತೂರಿ ಕೊಲೆ ದರೋಡೆ ಇವುಗಳೆಲ್ಲಾ ಸರ್ವೇಸಾಮಾನ್ಯ. ಒಟ್ಟಿನಲ್ಲಿ ರೂಸೋ ಹೇಳುವುದೇ ಸರಿ. ಮಾನವ ಹುಟ್ಟುವಾಗ ಮಾತ್ರ ಸ್ವತಂತ್ರ; ಉಳಿದಂತೆ ಅವನ ಜೀವನವೆಲ್ಲಾ ಇನ್ನೊಬ್ಬರ ಕೈಕೆಳಗೆ ತಾನೇ" ಎಂದು ಸಾವೇಜ್ ಪುಟ್ಟ ಭಾಷಣವನ್ನೇ ಬಿಗಿಯತೊಡಗಿದ.

ಆ ಕಡೆಯಿಂದ ಫಿರಂಗಿಯ ಶಬ್ದಗಳು ಇಬ್ಬರ ಎದೆ ನಡುಗಿಸಿ ಸಾವಿನತ್ತ ತಳ್ಳುತ್ತಿದ್ದರೂ ಅವರು ನಿರಾತಂಕವಾಗಿ ಬೇಟೆಯನ್ನು ಮುಂದುವರಿಸಿದರು. ಇದ್ದಕ್ಕಿದ್ದಂತೆ ಬೂಟುಗಾಲಿನ ಸಪ್ಪಳ ಇಬ್ಬರ ಕಿವಿಯ ಸನಿಹವೇ ಬಂದು ಅಪ್ಪಳಿಸಿತು. ತಿರುಗಿ ನೋಡಿದರೆ ನಾಲ್ಕು ಜನ ಕರಿಯ ಸಮವಸ್ತ್ರ ಧರಿಸಿದ ಯೋಧರು ತಮ್ಮ ಕಡೆಗೆ ಓಡಿ ಬರುತ್ತಿದ್ದಾರೆ. ತಕ್ಷಣವೇ ಇಬ್ಬರೂ ತಮ್ಮ ತಮ್ಮ ಗಾಳವನ್ನು ನದಿಯಲ್ಲಿ ಹಾಕಿ ಕಾಲಿಗೆ ಬುದ್ಧಿ ಹೇಳಿದರು. ಆದರೆ ಎಷ್ಟು ದೂರ ತಾನೆ ಓಡಲು ಸಾಧ್ಯ? ಇಬ್ಬರನ್ನೂ ಸೈನಿಕರು ಹಿಡಿದು ಕಟ್ಟಿ ಹೊಳೆಯ ಆಚೆಗೆ ಇರುವ ವಸತಿಗೃಹಕ್ಕೆ ಎಳೆದುಕೊಂಡು ಹೋದರು. ಅಲ್ಲಿ ಸುಮಾರು ಇಪ್ಪತ್ತು ಜನ ಸೈನಿಕರು ಇದ್ದರು. ಇಬ್ಬರನ್ನೂ ಅಲ್ಲಿದ್ದ ಅಧಿಕಾರಿಯ ಮುಂದೆ ಹಾಜರು ಪಡಿಸಿದರು. ಧೃಢಕಾಯನಾಗಿದ್ದ ಅಧಿಕಾರಿ ಇವರನ್ನು ನೋಡಿ ವಿಕಟವಾಗಿ ನಕ್ಕು,

"ಭಲೆ ! ಎಷ್ಟೊಂದು ಮೀನುಗಳನ್ನು ಹಿಡಿದಿ

ದ್ದೀರಿ!" ಎಂದು ಫ್ರೆಂಚಿನಲ್ಲಿ ಕೇಳಿದ.

ಅಲ್ಲೇ ನಿಂತಿದ್ದ ಒಬ್ಬ ಸೈನಿಕ ಇವರು ಹಿಡಿದ ಮೀನುಗಳನ್ನು ನೆಲಕ್ಕೆ ಸುರಿದ. ಅಧಿಕಾರಿ ಕೆಟ್ಟದಾಗಿ ನಗುತ್ತಾ, "ನಿಮ್ಮ ಕೆಲಸವನ್ನು ಬಹಳ ಚೆನ್ನಾಗಿ ನಿಭಾಯಿಸಿದ್ದೀರಿ. ಆದರೆ ನಿಮ್ಮ ವೇಷ ನೋಡಿದರೆ ನಿಮ್ಮನ್ನು ಗೂಢಚರ್ಯೆ ಮಾಡಲು ಕಳುಹಿಸಿದ್ದಾರೆ ಎಂದೇ ತೋರುತ್ತದೆ. ಮೀನುಗಾರರ ಸೋಗಿನಲ್ಲಿ ನಮ್ಮನ್ನು ಮೋಸಗೊಳಿಸಲು ಸಾಧ್ಯವಿಲ್ಲ. ನೀವು ನಿಮ್ಮ ದೇಶದ ಗಡಿಯನ್ನು ದಾಟಿದ್ದೀರಿ. ತಿಳಿದು ಮಾಡಿದ ಅಪರಾಧವೇ ಇರಬೇಕು. ಎಲ್ಲಿ ನಿಮ್ಮ ಪರವಾನಗಿ ಪತ್ರ? ನಿಮ್ಮ ಸಂಕೇತ ಪದವೇನು?" ಎಂದು ಒಮ್ಮೆಲೇ ನೂರೆಂಟು ಪ್ರಶ್ನೆಗಳನ್ನು ಹಾಕಿದ.

ಇಬ್ಬರ ಮುಖಗಳೂ ನಿಸ್ತೇಜಗೊಂಡವು. ಏನು ಉತ್ತರ ಕೊಡಬೇಕೆಂದು ಅವರಿಗೆ ಹೊಳೆಯಲೇ ಇಲ್ಲ. ತಲೆ ತಗ್ಗಿಸಿ ನಿಂತಿದ್ದರು.

"ನಿಮಗೆ ಬೇಗ ಮನೆಗೆ ಹೋಗಬೇಕೆಂಬ ಆಸೆಯಿದ್ದರೆ ಸಂಕೇತ ಪದವನ್ನು ತಿಳಿಸಿ. ಇಲ್ಲದಿದ್ದರೆ ಇನ್ನೆರಡು ನಿಮಿಷದಲ್ಲಿ ನೀವೂ ಆ ನದಿಯ ತಳವನ್ನು ಸೇರಿ ಮೀನುಗಳಿಗೆ ಆಹಾರವಾಗುತ್ತೀರಿ. ನಿಮಗೆ ಮನೆ, ಮಡದಿ, ಮಿತ್ರರು ಯಾರೂ ಇಲ್ಲವೇ? ಅವರು ನಿಮ್ಮನ್ನು ಕಾಯುವುದಿಲ್ಲವೇ? ಈ ಎರಡರಲ್ಲಿ ಯಾವುದಾದರೂ ಒಂದನ್ನು ಬೇಗ ಆರಿಸಿಕೊಳ್ಳಿ. ಬೇಕೆಂದರೆ ಇನ್ನು ಒಂದು ನಿಮಿಷ ಕಾಲಾವಕಾಶ ಕೊಡುತ್ತೇನೆ."

ಇಬ್ಬರೂ ಅದೇ ಸ್ಥಿತಿಯಲ್ಲಿ ನಿಂತಿದ್ದರು. ಹೊರಗೆ ಫಿರಂಗಿ ಒಂದೇ ಸಮನೆ ಗುಡುಗುತ್ತಿತ್ತು. ಅಧಿಕಾರಿ ಸಂಜ್ಞೆ ಮಾಡಿದ. ಯೋಧನೊಬ್ಬ ಮಾರಿಸಾಟನ ಕಿವಿಯಲ್ಲಿ ಉಸುರಿದ. "ಬೇಗ ಹೇಳು, ಮನೆಗೆ ಹೋಗುವೆಯಂತೆ."

ಅಧಿಕಾರಿ ತನ್ನ ಆಜ್ಞೆಯನ್ನು ಕೊಟ್ಟ. ಆ ಕ್ಷಣವೇ ಮಾರಿಸಾಟನ ದೃಷ್ಟಿ ತಾವು ಹಿಡಿದಿದ್ದ ಮೀನಿನ ರಾಶಿಯ ಮೇಲೆ ಬಿತ್ತು. ಅವನ ಮುಖ ಕಳಾಹೀನವಾಗಿ ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯತೊಡಗಿತ್ತು. "ಈ ಮೀನುಗಳಿಗೆ ಆದ ಗತಿಯೇ ನಮಗೂ ಬಂದಿತಲ್ಲಾ!" ಇಬ್ಬರೂ ಕಡೆಯದಾಗಿ ಒಬ್ಬರನ್ನೊಬ್ಬರು ನೋಡಿಕೊಂಡರು. ಅವರ ಕಣ್ಣುಗಳು ಮಾತಾಡಿಕೊಂಡವು.

"ಹೋಗಿ ಬಾ ಮಾರಿಸಾಟ್."

"ಹೋಗಿ ಬಾ ಸಾವೇಜ್."

"ಮುಂದಿನ ಜನ್ಮದಲ್ಲಾದರೂ ಭೇಟಿಯಾಗೋಣ" ಇಬ್ಬರೂ ಪರಸ್ಪರ ಕೈಗಳನ್ನು ಅದುಮಿದರು. ಫಿರಂಗಿ ಢಮಾರೆಂದು ಹಾರಿತು. ಸಾವೇಜ್ ನೆಲಕ್ಕುರುಳಿ ನೆತ್ತರ ಮಡುವಿನಲ್ಲಿ ಬಿದ್ದ. ಸ್ವಲ್ಪ ಎತ್ತರದ ಮಾರಿಸಾಟ್ ಸಾವೇಜನ ಮೇಲೆ ಬಿದ್ದ. ಇಬ್ಬರ ರಕ್ತವೂ ಒಂದಾಯಿತು.

ಅಧಿಕಾರಿ ಬಂದವನೇ ಏನೋ ಒಂದಿಷ್ಟು ಸನ್ನೆ ಮಾಡಿ ಹೇಳಿದ. ಸೈನಿಕರಿಬ್ಬರು ಆ ದೇಹಗಳಿಗೆ ಕಲ್ಲು ಕಟ್ಟಿದರು. ನಾಲ್ಕು ಜನ ದೇಹಗಳನ್ನು ಹೊಳೆಯವರೆಗೆ ಎಳೆದುಕೊಂಡೊಯ್ದು ಎತ್ತಿ ಗಿರ್ರನೆ ತಿರುಗಿಸಿ ಕವಣೆಯಂತೆ ಎಸೆದರು. ಕಲ್ಲು ಕಟ್ಟಿದ್ದರಿಂದ ಶವಗಳು ನೀರಿನಲ್ಲಿ ಮುಳುಗಿ ನದಿಯಲ್ಲಿ ಭಾರಿ ಅಲೆಗಳನ್ನು ಎಬ್ಬಿಸಿದವು. ಎಷ್ಟೋ ಹೊತ್ತಿನವರೆಗೆ ನೀರಿನ ಮೇಲೆ ರಕ್ತ ತೇಲುತ್ತಿತ್ತು. ಗಮನಿಸುತ್ತ ನಿಂತಿದ್ದ ಅಧಿಕಾರಿ, "ಇವತ್ತಿನ ದಿನ ಮೀನುಗಳಿಗೆ ಮೃಷ್ಟಾನ್ನ ಭೋಜನ" ಎಂದು ಗಹಗಹಿಸಿ ನಕ್ಕ. ಆಮೇಲೆ "ಏ ವಿಲ್‌ಹೆಲ್ಮ್, ಈ ಮೀನುಗಳು ಹಸಿಯಾಗಿರುವಾಗಲೇ ಏನಾದರೂ ತಯಾರಿಸು. ಬಹಳ ರುಚಿಯಾಗಿರುತ್ತೆ" ಎಂದು ಅಡುಗೆಯವನಿಗೆ ಆಜ್ಞಾಪಿಸಿದ. ನಂತರ ಅಧಿಕಾರಿ ತನ್ನ ಕುರ್ಚಿಯಲ್ಲಿ ಒರಗಿ ಪೈಪ್ ಸೇದತೊಡಗಿದ. ★

**ನಮಗೆ ವರ್ಷಕ್ಕೆ ಹತ್ತು (ರವಿವಾರಗಳನ್ನು ಬಿಟ್ಟು) ರಜಾ ದಿನಗಳು. ನಮ್ಮ ಕಾರಖಾನೆಯ ಕೆಲಸಗಾರನೊಬ್ಬ ವ್ಯವಸ್ಥಾಪಕರ ಬಳಿ ಹೋಗಿ ಇನ್ನೊಂದು ದಿನ ತನಗೆ ಪಗಾರಿ ಸೂಟಿ ಕೊಡಬೇಕೆಂದು ಕೇಳಿದ—ಕಾರಣ ವರ್ಷದಲ್ಲಿಯ ಹತ್ತೂ ರಜಾ ದಿನಗಳಂದು ತಾನು ಕಳೆದುಕೊಂಡಿದ್ದ ಚಹಾ ವಿರಾಮ ಒಟ್ಟು ಎಂಟು ತಾಸಿಗೇ (ದಿನದ ಕೆಲಸದ ಅವಧಿ) ಬರುತ್ತದೆಂಬುದು.**

—ಪಿಕ್ಕಾ ಮಿತ್ರ



ಕವೀಂದ್ರ ರವೀಂದ್ರ

# ಬರಲಿದೆ ಬುದ್ಧಿಶಾಲಿಗಳ ಸುಗ್ಗಿ

ರಾಧಾಕೃಷ್ಣ ರಾವ್

ಇಂದಿನ ಜಗತ್ತಿನಲ್ಲಿ ಬುದ್ಧಿಶಕ್ತಿಗೆ ಬಹಳ ಮಹತ್ವ ಬಂದಿದೆ. ವಿಜ್ಞಾನ ಮತ್ತು ತಂತ್ರಜ್ಞಾನ ಜೀವನದ ಪಚ್ಚೆ ಪಚ್ಚೆ ಕ್ಷೇತ್ರವನ್ನು ವ್ಯಾಪಿಸಿದಂತೆ ಬುದ್ಧಿವಂತರು ಪ್ರತಿಯೊಂದು ಕ್ಷೇತ್ರದಲ್ಲಿಯೂ ಅಗತ್ಯವಾಗುತ್ತಿದ್ದಾರೆ.

ನಾವೆಲ್ಲರೂ ಎಷ್ಟೇ ನಮ್ಮ ಬುದ್ಧಿಶಕ್ತಿಯನ್ನು ಕುರಿತು ಹೆಮ್ಮೆ ಪಟ್ಟುಕೊಂಡರೂ ಬುದ್ಧಿಶಕ್ತಿಯಲ್ಲಿ ಸಮಾನರಲ್ಲ ಎಂಬುದು ಅಪ್ರಿಯವಾದರೂ ಸತ್ಯ. ಸಾಮಾನ್ಯ ಮಾನವ ಬುದ್ಧಿಶಕ್ತಿಯನ್ನು ೧೦೦ ಎಂದು ಇಟ್ಟುಕೊಂಡರೆ ಚಿಂಪಾಂಜಿ ಕೋತಿಯ ಬುದ್ಧಿಶಕ್ತಿಯ ಅಂಕೆ ೪೦ ಆಗಬಹುದು. ಸುಮಾರು ಆರು ವರ್ಷ ವಯಸ್ಸಿನ ಸಾಮಾನ್ಯ ಮಗುವಿನ ಬುದ್ಧ್ಯಂಕವೂ ಇದೇ. ಆಜನ್ಮ ಪೆದ್ದನ ಬುದ್ಧ್ಯಂಕ ೭೦ಕ್ಕೆ ನಿಂತುಹೋಗುತ್ತದೆ. ವಿದೇಶಗಳಲ್ಲಿ ಮಾಡಿದ ಅಂದಾಜುಗಳಿಂದ ಪಿಎಚ್.ಡಿ. ಪದವಿ ಪಡೆಯುವ ವಿದ್ವಾಂಸರ ಬುದ್ಧ್ಯಂಕ ಸರಾಸರಿ ೧೪೦ ಎಂದು ಹಿಡಿಯಬಹುದು. ವಿಜ್ಞಾನಿ ಐನ್‌ಸ್ಟೈನನ ಬುದ್ಧ್ಯಂಕ ೧೮೦ಕ್ಕೂ ಮಿಕ್ಕಿ ಇದ್ದಿರಬೇಕೆಂದು ಊಹಿಸಲ್ಪಟ್ಟಿದೆ.

ಅಂದಾಕ್ಷಣ ಎಲ್ಲ ಶ್ರೇಷ್ಠ ಬುದ್ಧಿಶಾಲಿಗಳೂ ವಿಜ್ಞಾನ ಅಥವಾ ಗಣಿತದಲ್ಲೇ ಮಹತ್ಸಾಧನೆಗಳನ್ನು ಮಾಡುವವರೆಂದಲ್ಲ. ಯಾವುದೇ ರಂಗದಲ್ಲಿ ಅಪ್ರತಿಮ ಸ್ಥಾನ ಬರಬೇಕಾದರೆ ಶ್ರೇಷ್ಠ ಬುದ್ಧ್ಯಂಕವೇ ಬೇಕು. ಅದು ರಸಾಯನ ಶಾಸ್ತ್ರದಲ್ಲಿರಬಹುದು, ಸಂಗೀತದಲ್ಲಿರಬಹುದು, ಎಂಜಿನೀಯರಿಂಗಿನಲ್ಲಿರಬಹುದು ರಾಜಕಾರಣದಲ್ಲಿರಬಹುದು ತತ್ವಜ್ಞಾನದಲ್ಲಿರಬಹುದು. ೧೦೦ ರ ಸರಾಸರಿ ಮಾನವನ್ನು ಮೀರುವ, ಬುದ್ಧಿಶಕ್ತಿಯ ಶ್ರೇಣಿಯಲ್ಲಿ ಮೇಲೆ ಮೇಲೆಂದ ಹಾಗೆ ಅದರ ಸಾಧಕ ಶಕ್ತಿಯ ಅಂತರ

ಆ ಅಂಕೆಗಳು ಸೂಚಿಸುವದಕ್ಕಿಂತಲೂ ಹೆಚ್ಚಾಗಿರುತ್ತದೆ. ೧೭೦ ರ ಬುದ್ಧಿಶಕ್ತಿ ಬೇಕಾದ ಕಾರ್ಯಕ್ಕೆ ೧೬೦ ರ ಬುದ್ಧಿಶಕ್ತಿ ಎಷ್ಟೇ ಹೆಣಗಿದರೂ ಅಸಮರ್ಥವಾಗುತ್ತದೆ. ಕಾಳಿದಾಸನೂ ವಾಲ್ಮೀಕಿಯೂ ಶ್ರೇಷ್ಠ ಕವಿಗಳೇ. ಆದರೂ ನೂರು ಕಾಳಿದಾಸರು ಸೇರಿದರೂ ಒಂದು ವಾಲ್ಮೀಕಿ ರಾಮಾಯಣವನ್ನು ಸೃಷ್ಟಿಸಲಾರರು. ವಾಲ್ಮೀಕಿಯ ಬುದ್ಧ್ಯಂಕಕ್ಕೂ ಕಾಳಿದಾಸನದಕ್ಕೂ ಇದ್ದಿರಬಹುದಾದ ಅಂತರ ಬಹುಶಃ ಹತ್ತು ಗುಣಗಳಿಗಿಂತ ಹೆಚ್ಚಾಗಿರಲಿಕ್ಕಿಲ್ಲ. ಕಾಳಿದಾಸನಿಗೂ ಭವಭೂತಿಗೂ ಇದ್ದ ಅಂತರ ಅದಕ್ಕೂ ಸಣ್ಣದಾಗಿರಬಹುದು. ಆದರೆ ಈ ಅಲ್ಪ ಅಂತರವೇ ಅವರ ಸಾಧನೆಗಳಲ್ಲಿ ಮಹದಂತರವನ್ನುಂಟುಮಾಡಿತು. ವಿಜ್ಞಾನದಲ್ಲಿ ಒಂದು ನಿಜವಾಗಿ ಜಟಿಲವಾದ ಹೊಸ ಸಮಸ್ಯೆಯನ್ನು ಬಿಡಿಸುವ ಸಾಧ್ಯಾಸಾಧ್ಯತೆಗಳು ಕೇವಲ ಹತ್ತೇ ಗುಣಗಳನ್ನು ಅವಲಂಬಿಸಬಹುದು.

ಅತಿ ಶ್ರೇಷ್ಠ ಬುದ್ಧಿಶಕ್ತಿಯನ್ನು ತಜ್ಞರು ೧೯೦ರ ಮಟ್ಟದಲ್ಲಿರಿಸುತ್ತಾರೆ. ನ್ಯೂಟನ್ ಇಂಥವರಲ್ಲೊಬ್ಬ. ಇಂಥವರು ಬಹಳವಾದರೆ ಐದು ಶತಮಾನಗಳಿಗೊಮ್ಮೆ ಹುಟ್ಟಬಹುದು. ಕೋಪರ್ನಿಕಸ್, ಕೆಪ್ಲರ್, ಗೆಲಿಲಿಯೋ ಇವರೆಲ್ಲ ೧೮೦ರ ಮಟ್ಟದವರಿದ್ದಿರಬಹುದು. ಗ್ರಹಗಳ ಚಲನೆಯ ವಿಷಯದಲ್ಲಿ ನ್ಯೂಟನ್ನನಿಗೆ ಆಧಾರವಾದ ಸಾಮಗ್ರಿಗಳನ್ನೆಲ್ಲ ಅವರು ಮೊದಲೇ ಕಂಡುಹಿಡಿದಿದ್ದರು. ಆದರೆ ಅವರಲ್ಲಿ ಯಾರೊಬ್ಬರಿಗೂ ತಮ್ಮ ಸಂಶೋಧನೆಗಳಿಂದ ಸಮಸ್ತ ಭೂತಗಳಿಗೂ ಅನ್ವಯಿಸಬಹುದಾದ ಒಂದೇ ಚಲನ ನಿಯಮವನ್ನು ರೂಪಿಸಲು ಸಾಧ್ಯವಾಗಲಿಲ್ಲ. ಅದಕ್ಕೆ ನ್ಯೂಟನ್ನನೇ ಬೇಕಾಯಿತು.

೧೮೦ ರ ಸುಮಾರಿನವರು ಹಲವು ಜನ ನೋಬೆಲ್ ಬಹುಮಾನ ವಿಜೇತರಾಗಿದ್ದಾರೆ. ಡಾರ್ವಿನ್, ಫ್ರಾಯ್ಡ್, ಬರ್ನಾರ್ಡ್ ಶಾ, ಬರ್ಟ್ರಂಡ್ ರಸೆಲ್, ಸಿ.ವಿ. ರಾಮನ್, ಠಾಕೂರ್ ಮೊದಲಾದವರನ್ನು ಈ ವರ್ಗದಲ್ಲಿ ಸೇರಿಸಬಹುದು. ಈ ಮಟ್ಟದವರು ಎರಡು ಕೋಟಿ ಜನಕ್ಕೆ ಒಬ್ಬರಂತೆ ಇರಬಹುದಷ್ಟೇ. (ಮುಂದುವರಿದ ದೇಶಗಳಲ್ಲಿ ಇಂಥವರು ಬೆಳಕಿಗೆ ಬಂದಷ್ಟು ಹಿಂದುಳಿದ ದೇಶಗಳಲ್ಲಿ ಬರಲಿಕ್ಕಿಲ್ಲ ಎಂದು ಗಮನಿಸಬೇಕು.) ೧೭೦ರ ಹಂತಕ್ಕೇರಿದರೆ ಕೋಟಿಗೆ ೧೫ ಜನ ದೊರಕಬಹುದು; ೧೬೦ ಮಟ್ಟದವರು ಕೋಟಿಗೆ ೨೫೦ ಜನ; ೧೫೦ ರ ಹಂತದವರು



ಸಂಗೀತ ದ್ರಷ್ಟಾರ



**ವಿಜ್ಞಾನಿ ರಾಮನ್**

ಕೋಟಿಗೆ ೫೦,೦೦ ಜನ, ೧೪೦ರವರು ಬಹುಶಃ ಕೋಟಿಗೆ ೫೦,೦೦೦ ಜನ ಇರಬಹುದೇನೋ. ನಮ್ಮ ಎಂಜಿನಿಯರರು, ಡಾಕ್ಟರರು, ಪ್ರೊಫೆಸರರಲ್ಲಿ ಹೆಚ್ಚಿನವರು, ಐ. ಎ. ಎಸ್. ಅಧಿಕಾರಿಗಳು ೧೪೦ ಮತ್ತು ಇದಕ್ಕೂ ಮೇಲಿನ ಸ್ತರದಿಂದ ಬಂದಿರುತ್ತಾರೆ.

ಒಂದು ದುರ್ದೈವವೆಂದರೆ ಕೆಲ ವೇಳೆ ಶ್ರೇಷ್ಠ ಬುದ್ಧಿಶಕ್ತಿ ಸಾಮಾನ್ಯ ಶಾಲೆಗಳಲ್ಲಿ ಪ್ರಾರಂಭದಲ್ಲಿ ಕುಂಟುತ್ತ ಸಾಗುವುದುಂಟು. ಐನ್‌ಸ್ಟೈನ್ ೧೪ರಲ್ಲಿದ್ದಾಗ ಅವನ ಪ್ರತಿಭೆಯ ಆಳವನ್ನು ಯಾರೂ ಕಾಣಲಿಲ್ಲ. ಅವನ ಆಸಕ್ತಿ ಎಲ್ಲರೂ ಕಲಿಯುವ ವಿಷಯಗಳಲ್ಲಿ ಇಲ್ಲದಿರುವುದು ಇದಕ್ಕೊಂದು ಕಾರಣವಾಗಿರಬಹುದು. ಆದರೂ ಹೆಚ್ಚಿನ ವೇಳೆ ಶ್ರೇಷ್ಠ ಬುದ್ಧಿಶಕ್ತಿ ಸಾಕಷ್ಟು ಬೇಗನೇ ಕಾಣಬಲ್ಲವರಿಗೆ– ಕಾಣಿಸುತ್ತದೆ. ಸಿ. ವಿ. ರಾಮನ್ನರು ೧೬ನೇ ವಯಸ್ಸಿಗೇ ಕಾಲೇಜು ತಲುಪಿದ್ದರು. ಠಾಕೂರರು ಎಂಟರಲ್ಲಿ ಕವಿತೆ ಬರೆಯುತ್ತಿದ್ದರು. ಟಿ.ಎಚ್. ಹಾರ್ಡಿಯವರ ಹೇಳಿಕೆಯಂತೆ ಶ್ರೇಷ್ಠ ವೈಜ್ಞಾನಿಕ ಪ್ರತಿಭೆ ೩೦ ದಾಟುವುದರ ಮುಂಚೆಯೇ ತನ್ನ ಉತ್ಕೃಷ್ಟ ಸಾಧನೆಗಳನ್ನು ಮುಗಿಸಿರುತ್ತದೆ. ಇಂದು ಅಮೇರಿಕದ ವಿಜ್ಞಾನರಂಗದಲ್ಲಿ ೧೬೦ ಬುದ್ಧ್ಯಂಕವುಳ್ಳವರು ಹೆಚ್ಚಾಗಿ ೨೨–೨೩ನೇ ವಯಸ್ಸಿಗಾಗಲೇ ಪಿಎಚ್. ಡಿ. ಪಡೆದಿರುತ್ತಾರೆ.

ಈ ಉನ್ನತ ಪ್ರತಿಭೆಗಳಿಗಿಂತ ಕೆಳಗಿನ ಸ್ತರಗಳ ಪ್ರತಿಭೆ ಹೇಗೆ ಪಸರಿಸುತ್ತದೆ ? ನಮ್ಮ ರಾಜಕಾರಣಿಗಳ ವರ್ಗ ಯಾವ ಮಟ್ಟದಲ್ಲಿ ಬರುತ್ತದೆ? ಅವರೆಲ್ಲರೂ ನಾವು ಭಾವಿಸುವ ಹಾಗೆ ಶುದ್ಧ ಅಜ್ಞರ, ಹೆಡ್ಡರ ಕೂಟವೆ ?

ಅಮೇರಿಕದಲ್ಲಿ ನಡೆದ ಲೆಕ್ಕಾಚಾರದ ಪ್ರಕಾರ ಅವರ ಕಾಂಗ್ರೆಸ್ (ಪಾರ್ಲಿಮೆಂಟಿಗೆ ಅವರ ಹೆಸರು) ಸದಸ್ಯರಲ್ಲಿ ಅಧಿಕತರರು ೧೩೦ ಮತ್ತು ಮೇಲಿನ ವರ್ಗದವರು. ಬುದ್ಧ್ಯಂಕ ೧೩೦–೧೪೦ ರ ವರ್ಗದಲ್ಲಿಯೇ ಜನನಾಯಕತ್ವದ ಗುಣವುಳ್ಳವರಲ್ಲಿ ಹೆಚ್ಚಿನವರು ಉದಯಿಸುತ್ತಾರೆಂದು ತರ್ಕಿಸಲಾಗಿದೆ. ಈ ಮಾತು ಮುಂದುವರಿದ ದೇಶಗಳಿಗೆಲ್ಲ ಅನ್ವಯಿಸಬಹುದು.

ಭಾರತದ ಮಾತೇನು? ನಮ್ಮ ಎಂ.ಪಿ., ಎಂ. ಎಲ್.ಎ.ಗಳ ಬುದ್ಧ್ಯಂಕಗಳನ್ನು ಯಾರೂ ತೆಗೆದ ಹಾಗಿಲ್ಲ. ನಮ್ಮಲ್ಲಿನ ವಿಶಿಷ್ಟ ಸ್ಥಿತಿಗತಿಗಳಲ್ಲಿ ಅನೇಕ ಅಶಿಕ್ಷಿತರೂ ಅರ್ಧ ಶಿಕ್ಷಿತರೂ ನಮ್ಮ ಭಾಗ್ಯವಿಧಾತ ಸ್ಥಾನಕ್ಕೆ ಆರಿಸಿ ಬಂದಿರ

ಬಹುದು. ಅವರಲ್ಲಿ ಹಲ ಕೆಲವರು ನಿಜವಾಗಿ ಮೂಢರೇ ಇರಬಹುದು. ಆದರೆ ಅವರಲ್ಲಿ ಹೆಚ್ಚಿನವರು ಸಾಮಾನ್ಯಕ್ಕಿಂತ ಅಧಿಕ ಬುದ್ಧಿಶಕ್ತಿಯುಳ್ಳವರೆಂದೇ ಅನಿಸುತ್ತದೆ. ಮಂತ್ರಿ ಪಟ್ಟಕ್ಕೇರಿದ ಕೆಲವರು ಅಸಾಧಾರಣ ಬುದ್ಧಿಕುಶಲರೇ ಆಗಿದ್ದಾರೆ. ವಿ.ಕೆ. ಕೃಷ್ಣಮೆನನ್, ಡಾ. ವಿ.ಕೆ. ಆರ್. ವಿ. ರಾವ್, ಗೋವಿಂದ ವಲ್ಲಭ ಪಂತ, ಮೊದಲಾದವರ ಬುದ್ಧಿ ಖಂಡಿತ ಉಚ್ಚ ಕೋಟಿಯದು. ಪಂ. ನೆಹರು ಅವರ ವಿಚಾರವನ್ನಂತೂ ಹೇಳಲೇ ಬೇಕಿಲ್ಲ. ಈಚೆಗಿನ ರಾಜಕೀಯ ಬಿಕ್ಕಟ್ಟಿನಲ್ಲಿ ಇಂದಿರಾ ಪರವಾಗಿ ಯೋಜನೆಗಳನ್ನು ಮಾಡಿದವರು ಯಾರೇ ಇರಲಿ, ಅವರನ್ನು ಅಸಾಧಾರಣ ಬುದ್ಧಿಶಾಲಿಗಳೆಂದೇ ಹೇಳಬೇಕು. ಅವರು ಮಾಡಿದ್ದನ್ನು ನೀವು ಮೆಚ್ಚಲಿಕ್ಕಿಲ್ಲ. ಹಾಗೆ ಚಾಣಕ್ಯನ ಗೈಮೆಗಳನ್ನೂ ನೀವು ಮೆಚ್ಚಲಾರಿರಿ. ಆದರೆ ಚಾಣಕ್ಯ ಅಗಾಧ ಬುದ್ಧಿಶಾಲಿಯೆಂದು ನೀವು ಒಪ್ಪಲೇ ಬೇಕಾಗುತ್ತದೆ.

ಹಾಗಾದರೆ ಈ ಜನ ದೇಶದ ಸಮಸ್ಯೆಗಳನ್ನು ಬಿಡಿಸಲು ಯಾಕೆ ಸಮರ್ಥರಾಗ ಲಿಲ್ಲ? ದೇಶಗಳ ಸಮಸ್ಯೆಗಳು ಯಾವಾಗಲೂ ಯಾರಿಗೂ ಮಣಿಯದಷ್ಟು ಜಟಿಲವಾಗಿರುವುದೇ ಇದಕ್ಕೆ ಕಾರಣ.

ಶಿಕ್ಷಕರ ಮಾತೇನು? ಅವರಲ್ಲವೇ ಭವಿಷ್ಯತ್ತಿನ ಪ್ರತಿಭೆಗೆ ನೀರೆರೆಯಬೇಕಾದವರು? ಅಮೇರಿಕದಂಥ ಮುಂದುವರಿದ ದೇಶದಲ್ಲೇ ಶಾಲಾ ಶಿಕ್ಷಕ ವರ್ಗದ ಸರಾಸರಿ ಬುದ್ಧ್ಯಂಕ ೧೨೦ರ ಸುಮಾರಿನಲ್ಲಿದೆಯೆಂದು ಹೇಳಲಾಗಿದೆ. ನಮ್ಮಲ್ಲಿ ಹಬ್ಬಿದ ನಿರಕ್ಷರತೆ ಶಿಕ್ಷಕ ವರ್ಗಕ್ಕಿರುವ ಗೌರವಾಭಾವ. ಬೇರೆ ಕೆಲ ರಂಗಗಳಲ್ಲಿ ಬುದ್ಧಿಶಾಲಿಗಳಿಗಿರುವ ಅವಕಾಶ ಇವುಗಳನ್ನೆಲ್ಲ ಗಮನಿಸಿದರೆ ಈ ದೇಶದಲ್ಲಿ ಶಾಲಾ ಶಿಕ್ಷಕರಲ್ಲಿ ಅಧಿಕಾಂಶ



ಮಹಾ ವಿಜ್ಞಾನಿ

ಜನರ ಇಂದಿನ ಬುದ್ಧ್ಯಂಕ ೧೨೦ ಕ್ಕಿಂತ ಹೆಚ್ಚಿಗಂತೂ ಇರಲಾರದು. ಕಾಲೇಜುಗಳಿಗಿಂತ ಕೆಳಗೆ ಇದಕ್ಕಿಂತ ಕಡಿಮೆ ಯೋಗ್ಯತೆಯ ಜನರೇ ಸಾಕಷ್ಟಿದ್ದಾರೆಂದು ನಿರ್ಭಯವಾಗಿ ಗ್ರಹಿಸಬಹುದು.

ಶಿಕ್ಷಕರ ಸಮಸ್ಯೆ ಎರಡು ರೀತಿಯಲ್ಲಿ ಪ್ರಗತಿಗೆ ಬಾಧಕವಾಗಿದೆ. ಸಮಾಜದ ಆಪ್ತ ವರ್ಗದ ಗೌರವಕ್ಕೆ ಪಾತ್ರರಾಗಬೇಕಾದರೆ ಶಿಕ್ಷಕರಿಗೆ ೧೩೦–೧೫೦ರ ನಡುವಿನ ಬುದ್ಧ್ಯಂಕವಿರಬೇಕು. ಆದರೆ ಸಾರ್ವತ್ರಿಕವಾಗಿ ಸುಶಿಕ್ಷಿತರುಳ್ಳ ಸಮಾಜಗಳಲ್ಲಿ ಕೂಡ ಇಂಥವರ ಪ್ರಮಾಣ ನೂರಕ್ಕೆ ಎರಡಕ್ಕಿಂತ ಹೆಚ್ಚಿಗೆ ಇಲ್ಲ. ಪ್ರತಿ ೩೦ ಮಕ್ಕಳಿಗೆ ಒಬ್ಬ ಶಿಕ್ಷಕ ಅಥವಾ ಶಿಕ್ಷಕಿಯನ್ನು ಕೊಡುವಂತಾದರೆ ಮಾತ್ರ ಶಿಕ್ಷಣ ಸರಿಯಾಗಿ ಸಾಗು

ತ್ತದೆ. ನಮ್ಮ ಎಲ್ಲಾ ಶಾಲಾ ವಯಸ್ಸಿನ (೬ ರಿಂದ ೧೬) ಮಕ್ಕಳಿಗೆ ೧:೩೦ರ ಶಿಕ್ಷಕರನ್ನೊದಗಿಸುವುದು ಸಂಖ್ಯಾಶಾಸ್ತ್ರ. ದೃಷ್ಟಿಯಿಂದಲೇ ಅಸಾಧ್ಯಪ್ರಾಯವಾಗಿದೆ.

ಇಂಥ ಸ್ಥಿತಿಯಲ್ಲಿ ತೀರ ಸಾಮಾನ್ಯ ಯೋಗ್ಯತೆಯ ಶಿಕ್ಷಕರಿಂದ ನಿಜವಾದ ಬುದ್ಧಿಶಾಲಿಗಳಿಗೆ ಹೆಚ್ಚು ಪ್ರಯೋಜನವಾಗುವುದಿಲ್ಲ. ಮಾಸ್ತರರಿಗಿಂತ ನಮಗೇ ಹೆಚ್ಚು ಗೊತ್ತಿದೆ ಎಂದು ಅವರು ಬೇಗನೇ ಕಂಡುಕೊಳ್ಳುತ್ತಾರೆ. ಅವರ



ಮಹಾ ನಾಟಕಕಾರ

ಯೋಗ್ಯತೆಯ ಬೆಳವಣಿಗೆ ಕುಂಠಿತವಾಗುತ್ತದೆ.

ಸಾರ್ವತ್ರಿಕ ಶಿಕ್ಷಣದ ಈ ದಿನಗಳಲ್ಲಿ ಸಮಸ್ಯೆ ಇನ್ನೂ ಗಡುಚಾಗುತ್ತದೆ. ಜನಸಂಖ್ಯೆಯಲ್ಲಿ ಅರ್ಧ ಜನ ೧೦೦ಕ್ಕಿಂತ ಕಡಿಮೆ ಬುದ್ಧ್ಯಂಕದವರು ಇರುತ್ತಾರೆ. ಇವರನ್ನು ಸ್ವಲ್ಪವಾದರೂ ಉಪಯುಕ್ತ ನಾಗರಿಕರನ್ನಾಗಿ ಮಾಡಬೇಕಾದರೆ ಅವರಿಗೆ ವಿಶೇಷ ಗಮನವಿತ್ತು ಕಲಿಸಬೇಕು. ತೀಕ್ಷ್ಣ ಬುದ್ಧಿಯ ವಿದ್ಯಾರ್ಥಿಗಳಿಗೆ ಗಮನ ನೀಯಬೇಕೋ (ಹಾಗೆ ಮಾಡುವ ಯೋಗ್ಯತೆ ಶಿಕ್ಷಕರಲ್ಲಿದ್ದರೆ ಕೂಡ) ಮಂದಮತಿಗಳಿಗೋ ಎಂಬ ಉಭಯ ಸಂಕಟದಲ್ಲಿ ಶಿಕ್ಷಕ ವರ್ಗ ತೊಳಲುತ್ತದೆ.

ಪ್ರಜಾಸತ್ತೆಗಳಲ್ಲಿ ಎಲ್ಲರಿಗೂ ಶಿಕ್ಷಣವೀಯುವುದು ಅಗತ್ಯವೂ ಇಷ್ಟವೂ ಆಗಿದೆ ನಿಜ. ಆದರೆ ೮೦ ಬುದ್ಧ್ಯಂಕದವರನ್ನೂ ೧೪೦ ಅಥವಾ ಅದಕ್ಕೂ ಹೆಚ್ಚಿನ ಬುದ್ಧ್ಯಂಕದವರನ್ನೂ ಒಂದೆ ಶಾಲೆಯಲ್ಲಿ ತರಬೇತಿ ಮಾಡುವುದೆಂದರೆ ಶೇಕಡಾ ಬರೀ ಒಂದರಷ್ಟಿರುವ ಅಮೂಲ್ಯ ಯೋಗ್ಯತೆಯ ಮಕ್ಕಳನ್ನು ದುರ್ಲಕ್ಷಿಸಿದಂತೆಯೇ. ಇವರೇ ನಿಜವಾಗಿ ರಾಷ್ಟ್ರಕ್ಕೆ ಮೇಲ್ಮೆ ತರುವ ಯೋಗ್ಯತೆಯುಳ್ಳವರು. ಉಳಿದವರ ಹಿತವೂ ಅವರನ್ನೇ ಅವಲಂಬಿಸಿದೆ. ಆದ್ದರಿಂದ ಅಸಾಧಾರಣ ವಿದ್ಯಾರ್ಥಿಗಳಿಗೆ ವಿಶೇಷ ಶಿಕ್ಷಣದ ವ್ಯವಸ್ಥೆ ಆಗುವುದು ಅವಶ್ಯ. ಧಾರವಾಡದಲ್ಲಿ ಇಂಥ ಪ್ರಯತ್ನವೊಂದು ಆಗುತ್ತಿರುವುದು ಆಶಾದಾಯಕವಾಗಿದೆ.

ಆದರೆ ವಿಜ್ಞಾನದ ಅಭಿವೃದ್ಧಿ ಮತ್ತು ಶಿಕ್ಷಣದ ಪ್ರಸಾರದಿಂದ ಮಾನವಕುಲದಲ್ಲಿ ಆಗಬಹುದಾದ ಕೆಲ ಅನಿರೀಕ್ಷಿತ ಬೌದ್ಧಿಕ ಬದಲಾವಣೆಗಳನ್ನು ಜಾನ್ ರೇಡರ್ ಪ್ಲಾಟರು ತಮ್ಮ 'ವಿಜ್ಞಾನೋತ್ಸಾಹ' (Excitement of Science) ಪುಸ್ತಕದಲ್ಲಿ ಚರ್ಚಿಸಿದ್ದಾರೆ. ೧೨೦ ಮೀರಿದ ಬುದ್ಧ್ಯಂಕವುಳ್ಳವರನ್ನು ಸದ್ಯಕ್ಕೆ ಚುರುಕು ಜನ ಎಂದು ಗ್ರಹಿಸೋಣ. ಅವರ ಸಂಖ್ಯೆ ಸೇಕಡಾ ೧೦ ರಷ್ಟು. ಕಾಲೇಜು ಶಿಕ್ಷಣ ಪಡೆಯುವವರು ಇವರೇ. ಈಗ ಗಂಡಸರು ಹೆಂಗಸರು ಇಬ್ಬರೂ ಕಾಲೇಜು ಶಿಕ್ಷಣ ಪಡೆಯುತ್ತಿದ್ದಾರೆ. ವಿವಾಹೋತ್ಸಾಹದ ವಯಸ್ಸಿನಲ್ಲೇ ಈ ಶಿಕ್ಷಣವೂ ಆಗುತ್ತದೆ. ಹೀಗಾಗಿ

ಕಾಲೇಜು ತರುಣರು ಕಾಲೇಜು ತರುಣಿಯರನ್ನು ಮದುವೆಯಾಗುವುದು ಹೆಚ್ಚಾಗಿದೆ.

ಅತ್ಯಂತ ಬುದ್ಧಿಶಾಲಿಗಳು ಬಹಳ ಮಟ್ಟಿಗೆ ಕಾಲೇಜು ವಿಶ್ವವಿದ್ಯಾಲಯಗಳ ಶಿಕ್ಷಕ ವರ್ಗದಲ್ಲಿರುತ್ತಾರೆ. ಅವರು ಕಾಲೇಜು ಕ್ಯಾಂಪಸ್ಸುಗಳಲ್ಲೇ ವಾಸಿಸುತ್ತಾರೆ. ಹೀಗಾಗಿ ಅವರ ಗಂಡು ಹೆಣ್ಣು ಮಕ್ಕಳು ಆಟ–ನೋಟಗಳಲ್ಲಿ ಕೂಡುವುದೂ ಕಾಲಾಂತರದಲ್ಲಿ ಮದುವೆಯಾಗುವುದು ವಿಶೇಷವಾಗಿ ಕಾಣಿಸುತ್ತದೆ.

ಇದರ ಪರಿಣಾಮವೇನಾಗಬಹುದು? ಪ್ರತಿಭೆ ಪ್ರತಿಭೆಯನ್ನು ಲಗ್ನವಾದಾಗ ಅವರು ತಮಗಿಂತ ಹೆಚ್ಚು ಬುದ್ಧಿವಂತ ಮಕ್ಕಳನ್ನು ಪಡೆಯುವ ಸಂಭವ ಇರುತ್ತದೆ. ಎಳವೆಯಲ್ಲಿ ಸಿಗುವ ಸುಶಿಕ್ಷಿತ ವಾತಾವರಣ ಅವರ ಪ್ರತಿಭೆ ಅರಳಲು ಹೆಚ್ಚು ಸಹಾಯವಾಗುತ್ತದೆ. ಪ್ಲಾಟರ ಅಭಿಮತದಲ್ಲಿ ಈ ಬಗೆಯ ಸುಶಿಕ್ಷಿತ ವಿವಾಹದಿಂದ ೧೪೦ ಮತ್ತು ಹೆಚ್ಚು ಬುದ್ಧ್ಯಂಕವುಳ್ಳವರು ಹುಟ್ಟುವ ಸಂಭವ ಸುಶಿಕ್ಷಿತರು ಅಶಿಕ್ಷಿತರನ್ನೂ ಬುದ್ಧಿವಂತರು ದಡ್ಡರನ್ನೂ ಮದುವೆಯಾಗುವುದಕ್ಕೆ ಎಡೆಯಿದ್ದ ಕಾಲದಲ್ಲಿಗಿಂತ ಐದು–ಹತ್ತು ಪಾಲು ಹೆಚ್ಚಾಗಿದೆ.

ಸರಾಸರಿ ೧೦೦ ಬುದ್ಧ್ಯಂಕವುಳ್ಳ ಸಮಾಜದಲ್ಲಿ ೩೦೦ರಲ್ಲಿ ಒಬ್ಬರು ೧೪೦ ಬುದ್ಧ್ಯಂಕವನ್ನು ಮುಟ್ಟುತ್ತಾರೆಂದು ಅಂಕೆ ಸಂಖ್ಯೆಗಳು ಹೇಳುತ್ತವೆ. ಸರಾಸರಿ ೧೪೦ ಬುದ್ಧ್ಯಂಕವುಳ್ಳ ಗುಂಪಿನಲ್ಲಿ (ಉದಾ: ವಿಶ್ವವಿದ್ಯಾಲಯ ಪ್ರೊಫೆಸರರಲ್ಲಿ) ಒಳಗೊಳಗೇ ವಿವಾಹಗಳಾದರೆ ಅಂಥವರ ಮಕ್ಕಳಲ್ಲಿ ೧೮೦ ಬುದ್ಧ್ಯಂಕವುಳ್ಳವರ ಪ್ರಮಾಣ ೨೦೦ಕ್ಕೆ ಒಂದು ಮತ್ತು ಇನ್ನೂ ಅಧಿಕ ಬುದ್ಧ್ಯಂಕದವರ ಪ್ರಮಾಣ ೨೦೦೦ಕ್ಕೆ ಒಂದು ಆಗಬಹುದೆಂದು ಪ್ಲಾಟರ ತರ್ಕ.

ಇದು ಸರಿಯಾದ ಲೆಕ್ಕವಾದರೆ ೫೦೦ ವರ್ಷಕ್ಕೊಬ್ಬ ನ್ಯೂಟನ್ ಹುಟ್ಟುವ ಬದಲು ೨೦ ವರ್ಷಕ್ಕೊಬ್ಬ ಹುಟ್ಟಬಹುದು. ೧೮೦ ಬುದ್ಧ್ಯಂಕ ಮೀರಿದವರು ಡಜನ್ ಗಟ್ಟಲೆಯ ಬದಲು ನೂರುಗಟ್ಟಳೆಯಲ್ಲಿ ಹುಟ್ಟಬಹುದು. ಇದನ್ನು ಪ್ಲಾಟರು "ಪ್ರತಿಭಾ ಸ್ಫೋಟ" ಎಂದು ಕರೆದಿದ್ದಾರೆ.

ಇದೇ ತರ್ಕವನ್ನು ಭಾರತಕ್ಕೆ ಅನ್ವಯಿಸಬಹುದೇ? ಜಾತಿ ಪದ್ಧತಿಯುಳ್ಳ ನಮ್ಮ ದೇಶದಲ್ಲಿ ಹೀಗಾದೀತೆ? ಈಗಾಗಲೇ ಆಗುತ್ತಿದೆ. ಜಾತಿಯೊಳಗೇ ಲಗ್ನವಾಗುವುದೂ ತುಂಬಾ ವಿದ್ಯಾವಂತರಾದ ತರುಣರು ವಿದ್ಯೆ ಇಲ್ಲದವರನ್ನು ಮದುವೆಯಾಗುವುದು ತೀರಾ ಕಡಿಮೆಯಾಗಿದೆ. ಸ್ತ್ರೀ ಶಿಕ್ಷಣ ವಿಸ್ತರಿಸುತ್ತಿರುವುದರಿಂದ ಬುದ್ಧಿವಂತರು ಬುದ್ಧಿವಂತರನ್ನೇ ಆರಿಸಿಕೊಳ್ಳುವ ಅನುಕೂಲತೆ, ಸಂಭವ ಎರಡೂ ಹೆಚ್ಚಾಗಿದೆ. ಪ್ರೊಫೆಸರರ ಮಕ್ಕಳು ಪ್ರೊಫೆಸರರ ಮಕ್ಕಳನ್ನೇ ಅಲ್ಲದಿದ್ದರೂ ತತ್ಸಮಾನ ಬೌದ್ಧಿಕ ವರ್ಗದೊಡನೆ (ಐ.ಎ.ಎಸ್; ಎಂಜಿನೀಯರ್, ಡಾಕ್ಟರ್ ಇತ್ಯಾದಿ) ಸಂಬಂಧ ಬೆಳೆಸುತ್ತಿರುವುದರಿಂದ ಪ್ಲಾಟರ ತರ್ಕ ಈ ದೇಶಕ್ಕೂ ಸರಿಹೋಗುತ್ತದೆ.

ನಮ್ಮ ದೇಶದಲ್ಲಿಯೂ ಹೆಚ್ಚು ಶಂಕರಾಚಾರ್ಯರು, ರವೀಂದ್ರರು, ತ್ಯಾಗರಾಜರು ಹುಟ್ಟಿ ಇನ್ನೂ ಕಡಿಮೆ ವಯಸ್ಸಿನಲ್ಲಿ ಬೆಳಗಬಹುದು. ನಿಜವಾಗಿ ಮುಂದೆ ಅತಿಮಾನುಷ ಬುದ್ಧಿವಂತರ ಸುಗ್ಗಿಯೇ ಬರಲಿದೆ ಎಂದು ಪ್ಲಾಟರ ಮತ.

ಓಹೊ! ಬಹಳ ಸಂತೋಷ ಎನ್ನುತ್ತೀರಾ? ಆದರೆ ಇನ್ನೊಂದು ಮುಖ ಗಾಬರಿಗೊಳಿಸುವಂತಿದೆ. ಬುದ್ಧಿವಂತರು ಬುದ್ಧಿವಂತರನ್ನೇ ಲಗ್ನವಾಗುವುದರಿಂದ ಸಮಾಜದ ಅರ್ಧಪಾಲಿ (೧೦೦ ಮಿಕ್ಕಿದ ಬುದ್ಧ್ಯಂಕವುಳ್ಳವರು) ಉತ್ತರೋತ್ತರ ಬುದ್ಧಿವೈಭವದಿಂದ ಬೆಳೆಯುವಂತೆ, ಉಳಿ

ವರ್ಗ ದಡ್ಡರು (೧೦೦ಕ್ಕಿಂತ ಕಡಿಮೆ ಅಂಕವುಳ್ಳವರು) ತಂತಮ್ಮಲ್ಲೇ ವಿವಾಹವಾಗಿ ಉತ್ತರೋತ್ತರ ದಡ್ಡರನ್ನೇ ನಿರ್ಮಿಸುವುದಿಲ್ಲವೇ? ಈ ಎರಡು ವರ್ಗಗಳಲ್ಲಿ ಹಿಂದೆ ಮಿಶ್ರಣ ಹೆಚ್ಚಾಗಿ ಆಗುತ್ತಿತ್ತು. ವಿಸ್ತಾರವಾದ ಸಮಾಜಾಂಗಗಳು ಶಿಕ್ಷಣವಿಲ್ಲದೆ ಇರುತ್ತಿದ್ದುದರಿಂದ ಈ ಬುದ್ಧಿಶಾಲಿ ಅಬುದ್ಧಿಶಾಲಿಗಳ ಪ್ರತ್ಯೇಕತೆ ಎದ್ದು ಕಾಣದೆ 'ಮಿಶ್ರ' ವಿವಾಹವಾಗುತ್ತಿದ್ದವು. ಈಗ ಹಾಗಿಲ್ಲ. ಬುದ್ಧಿವಂತರಲ್ಲದವರು ಬುದ್ಧಿವಂತರಿಂದ ಪ್ರತ್ಯೇಕವಾಗುವುದಲ್ಲದೆ ಅವರೊಳಗಿನ ಬುದ್ಧಿಶಕ್ತಿಯ ಅಂತರವೂ ಬೆಳೆಯುತ್ತಿದೆ.

ಪರಿಣಾಮವಾಗಿ ಮಾನವರಲ್ಲಿ ಎರಡು ಭಿನ್ನ ಜಾತಿಗಳೇ ಆಗವೆ? ಬುದ್ಧಿವಂತ ಅತಿಮಾನವರ ವರ್ಗ, ಅವರಿಗಿಂತ, ತೀರ ಕೆಳಗಿರುವ ಸಾಮಾನ್ಯ ಜನರ ವರ್ಗ—ಹೀಗೆ ಮಾನವ ಸಮಾಜ ಕವಲಾದರೆ ಎಂಥೆಂಥ ಸಮಸ್ಯೆಗಳು ಹುಟ್ಟಬಹುದು? ✡

**ಹನಿಗತೆಗಳು**

ರೋಮನ್ ಸಾಮ್ರಾಟನೊಡನೆ ಅವನ ವಿದೂಷಕ ಹೇಳಿದ— 'ಸ್ವಾಮಿ !' ತಾವು ಪರಮೇಶ್ವರನಿಗಿಂತ ದೊಡ್ಡವರು."

ಸಾಮ್ರಾಟನಿಗೆ ತುಂಬಾ ಸಂತೋಷವಾಯಿತು.

ಆತ ಕೇಳಿದ: "ಹೇಗೆ ?"

"ಈಶ್ವರನೂ ಮಾಡಲಾರದ ಕೆಲಸವನ್ನು ನೀವು ಮಾಡಬಲ್ಲಿರಿ."

"ಈಶ್ವರನೂ ಮಾಡಲಾರದ ಮತ್ತು ನಾನು ಮಾಡಬಹುದಾದ ಆ ಕೆಲಸ ಯಾವುದು ?"

"ನೀವು ಯಾರನ್ನು ಬಹಳ ಸುಲಭವಾಗಿ ದೇಶದಿಂದ ಹೊರಕ್ಕೆ ಉಚ್ಚಾಟಿಸಬಲ್ಲಿರಿ; ಆದರೆ ಪರಮೇಶ್ವರ ಹಾಗೆ ಮಾಡಲಾರ. ಏಕೆಂದರೆ ಇಡೀ ಪ್ರಪಂಚವೇ ಆತನದು. ಆತ ಒಂದು ಪಕ್ಷ ಉಚ್ಚಾಟಿಸಿದರೂ ಉಚ್ಚಾಟಿಸಿದಾತನನ್ನು ತನ್ನ 'ದೇಶ' ಬಿಟ್ಟು ಬೇರೆ ಕಡೆಗೆ ಎಲ್ಲಿಗೆ ಕಳುಹಿಸಲು ಸಾಧ್ಯ?"

* * *

"ಗುರುದೇವ ! ವಾಸ್ತವ ಮತ್ತು ಭ್ರಮೆ ಇವುಗಳ ಅಂತರವನ್ನು ನನಗೆ ಹೇಳುವೆಯಾ?" ಭಕ್ತ ವಿನಂತಿಸಿಕೊಂಡ. "ನೀನು ಇಲ್ಲಿ ಇರುವುದು ಮತ್ತು ನಾನು ಪ್ರವಚನ ಹೇಳುತ್ತಿರುವುದು ವಾಸ್ತವವಾದದ್ದು. ಆದರೆ ನಾನು ಹೇಳುವುದರ ಮೇಲೆ ನೀನು ಗಮನ ನೀಡುತ್ತಿದ್ದೀ ಎಂದು ನಾನು ತಿಳಿದುಕೊಳ್ಳುವುದು ಭ್ರಮೆ," ಗುರು ಅಂತರವನ್ನು ವಿವರಿಸಿದ.

—ಎಸ್. ವಿಶ್ವನಾಥ

# ನಗೆಚಟಾಕಿ

ತವರಿಗೆ ಹೋಗಿದ್ದ ಬ್ಯಾಂಕ್ ಮ್ಯಾನೇಜರರ ಹೆಂಡತಿ ಏಕಾಏಕಿ ಮರಳಿದವಳೆ ಪತಿಯನ್ನು ಕುರಿತು ಹೇಳಿದಳು, "ನಾನೆಷ್ಟು ಗಾಬರಿಗೊಂಡಿದ್ದೆ ಗೊತ್ತ? ಮೂರು ಪತ್ರ ಬರೆದರೂ ಉತ್ತರವಿಲ್ಲ ಅಂದ್ರೆ?"

"ನಿನ್ನ ಪತ್ರಗಳು ನನಗೆ ತಲುಪೇ ಇಲ್ಲವಲ್ಲ," ಎಂದ ಮ್ಯಾನೇಜರ್, "ಹಾಂ-ಅಂದ್ಹಾಗೆ ನಿನ್ನ ಹೆಸರಿನಲ್ಲಿ ಯಾರೋ ಖೊಟ್ಟಿ ಪತ್ರಗಳನ್ನು ಬರೆದಿರಬೇಕು-ಇಗೋ" ಎಂದವನೇ ಡ್ರಾನಿಂದ ಮೂರು ಪತ್ರಗಳನ್ನು ಆಕೆಗೆ ಕೊಟ್ಟ.

"ಇವು ನಾನೇ ಬರೆದ ಪತ್ರಾರೀ..." ಅಂದಳಾಕೆ.

"ಸಾಧ್ಯವೇ ಇಲ್ಲ. ಯಾಕಂದ್ರೆ ನೀನು ಕೊನೇಲಿ ಸಹಿ ಮಾಡುವಾಗ ನಿನ್ನ ಹೆಸರಿನ ಕೆಳಗೆ ಒಂದು ಗೆರೆ ಎಳೆದು ಎರಡು ಚುಕ್ಕೆಗಳನ್ನಿಡ್ತೀಯಾ. ಆದ್ರೆ ಈ ಪತ್ರದಲ್ಲಿ ನೋಡು ಖೊಟ್ಟಿ ಸಹಿ ಮಾಡುವವರು ಹಾಗೆ ಮಾಡೋದನ್ನ ಮರೆತಿದಾರೆ..."

*

ಪ್ರಶ್ನೆ: ಎಷ್ಟು ಪ್ರಕಾರದ ವಕೀಲರಿರುತ್ತಾರೆ?

ಉತ್ತರ: ಎರಡು ಪ್ರಕಾರದ ವಕೀಲರಿರುತ್ತಾರೆ.

ಪ್ರಶ್ನೆ: ವಿವರಿಸಿ.

ಉತ್ತರ: ಕಾನೂನು ಬಲ್ಲವರು ಒಂದು ಪ್ರಕಾರದ ವಕೀಲರಾದರೆ ನ್ಯಾಯಾಧೀಶರನ್ನು ಬಲ್ಲವರು ಎರಡನೆ ಪ್ರಕಾರದವರು.

"ಏನಯ್ಯಾ, ಚಿಕ್ಕಂದಿನಲ್ಲಿದ್ದ ನಿನ್ನ ಯಾವುದಾದರೂ ಆಸೆ ಪೂರೈಸಿತಾ?"

"ಯಾಕಿಲ್ಲ? ಶಾಲೆಗೆ ಹೋಗ್ತಿದ್ದಾಗ ಮೇಷ್ಟ್ರು ನನ್ನ ತಲೆಗೂದಲನ್ನೆಳೆದು ಅಳೋ ಹಾಗೆ ಮಾಡ್ತಿದ್ದಾಗೆಲ್ಲಾ ನಾನು ಕೂದ್ಲಿರದಿದ್ರೇ ಚೆನ್ನಾಗಿತ್ತು ಅಂದ್ಕೊಳ್ತಿದ್ದೆ," ಎಂದವನೇ ಬೋಳು ತಲೆಯ ಮೇಲೆ ಕೈ ಆಡಿಸಿಕೊಂಡ.

*

ಮೂರು ವರ್ಷದ ಮಗ ಕೇಳಿದ:

"ಅಪ್ಪಾ-ನಾ ಹುಟ್ಟಿದಾಗ ನೀನು ಈ ಮನ್ಯಾಗಿದ್ದಿದ್ದಿಲ್ಲ-ಅಲ್ಲ?"

"ಹೌದಪಾ-ನಿಮ್ಮಜ್ಜೀ ಮನ್ಯಾಗಿದ್ದೆ."

"ಹಂಗ್ಯರ ಇಲ್ಲೆ ಬಂದು ನನ್ನ ನೋಡಿದಾಗ ನಿನಗ ಭಾಳ ಆಶ್ಚರ್ಯ ಆಗಿರಬೇಕಲ್ಲ?"

*

ತಂದೆ: ಮೂರ್ಖರ ಪ್ರಶ್ನೆಗಳಿಗೆ ಉತ್ತರವನ್ನು ಎಂಥ ಮೇಧಾವಿಯಿಂದಲೂ ಕೊಡೋದಿಕ್ಕಾಗೊಲ್ಲ.

ಮಗ: ಅದಕ್ಕೇ ಅಲ್ವೇನಪ್ಪಾ ನಾನು ಪರೀಕ್ಷೇಲಿ ಫೇಲಾದ್ದು.

*

ತಾಯಿ: ಮಗೂ-ದೇವರು ಮಹಾ ಮಹಿಮನಪ್ಪಾ. ಅವನ ಮಹಿಮೇನ ಎಷ್ಟು ಹಾಡಿದ್ರೂ ಕಡಿಮೆನೇ...

ಮಗ: ಹಾಗಾದ್ರ್ಯಾಕಮ್ಮಾ ಹಾಡ್ಬೇಕು? ಸುಮ್ಮನಿದ್ರಾಯ್ತು.

*

ಆಹಾರ ಸಚಿವರು ಭಾಷಣ ಮಾಡುತ್ತಿದ್ದರು. "ನಾವು ಹೆಚ್ಚು ಹೆಚ್ಚು ಗೋದಿಯನ್ನ ಬೆಳೀಬೇಕು..." ಅಷ್ಟರಲ್ಲೇ ಒಂದು ದನಿ ಕೇಳಿಬಂತು, "ಹುಲ್ಲನ್ನೇನು ಮಾಡಬೇಕು?"

"ನೋಡಿ ಈಗ ನಾನು ಮಾತಾಡ್ತಿರೋದು ಮನುಷ್ಯರ ಆಹಾರದ ಕುರಿತು. ಇದಾದ ಮೇಲೆ ನಿಮ್ಮ ಆಹಾರದ ಬಗ್ಗೆಯೂ



ಹೇಳ್ತೀನಿ," ಎಂದು ಹೇಳಿ ಭಾಷಣ ಮುಂದುವರಿಸಿದರು ಸಚಿವರು.

*

ರಾಜಕಾರಣಿಯ ಮಗ ಕೇಳಿದ,

"ಅಪ್ಪಾ-ಪಕ್ಷಾಂತರಿ ಅಂದ್ರೆ ಯಾರು?"

"ನೋಡು ಮಗು, ಈಗ ನಮ್ಮ ಪಕ್ಷ ಬಿಟ್ಟು ಬೇರೆ ಪಕ್ಷ ಸೇರ್ತಾರಲ್ಲ, ಪಕ್ಷಕ್ಕೆ ದ್ರೋಹ ಮಾಡ್ತಾರಲ್ಲ, ಅಂಥವನಿಗೆ ಪಕ್ಷಾಂತರಿ ಅನ್ನೋದು."

"ಹಾಗಾದ್ರೆ ಬೇರೆ ಪಕ್ಷ ಬಿಟ್ಟು ನಿಮ್ಮ ಪಕ್ಷ ಸೇರೋನಿಗೇನನ್ನಬೇಕು?"

"ಮೂರ್ಖನಂತೆ ಮಾತಾಡ್ಬೇಡ."

*

ಅವಿವಾಹಿತೆ ತಾಯಿ ಇನ್ನೂ ಆಸ್ಪತ್ರೆಯಲ್ಲಿದ್ದಳು-ಹತ್ತು ದಿನದ ಕೂಸಿನೊಂದಿಗೆ. ಡಾಕ್ಟರ್ ಒಮ್ಮೆ ಆ ಮಗುವನ್ನು ಮುದ್ದಾಡ್ತಾ, "ಏನಮ್ಮಾ, ನಿನ್ನವು ಕೆಂಗೂದಲು. ಮಗುವಿನವು ಕಂದು ಬಣ್ಣದವು. ಮಗುವಿನ ತಂದೆಯ ಕೂದಲು ಯಾವ ಬಣ್ಣದವು?" ಎಂದು ಕೇಳಿದರು.

"ನನಗೆ ನಿಜವಾಗ್ಲೂ ಗೊತ್ತಿಲ್ಲಾ ಡಾಕ್ಟ್ರೆ; ಅತ ಅಂದು ಹ್ಯಾಟನ್ನು ತೆಗಿಲೇ ಇಲ್ಲ" ಉತ್ತರಿಸಿದಳಾ ತಾಯಿ.

*

"ಅಪ್ಪಾ"

"ಏನ್ಮಗು?"

"ಅಪ್ಪಂದಿರು ಯಾವಾಗ್ಲೂ ಮಕ್ಕಳಿಗಿಂತ ಹೆಚ್ಚು ತಿಳಿದವರಾಗಿರ್ತಾರಂತೆ, ಹೌದೇನಪ್ಪ?"

"ಹೌದು ಮಗು, ಯಾಕೆ?"

"ಹಾಗಾದ್ರೆ, ಉಗಿಬಂಡೀನ ಕಂಡು ಹಿಡಿದದ್ಯಾರಪ್ಪಾ?"

"ಜೇಮ್ಸ್ ವ್ಯಾಟ್ ಮಗು."

"ಅವ್ನೇ ಯಾಕಪ್ಪಾ ಕಂಡು ಹಿಡೀಬೇಕು. ಅವರಪ್ಪ ಯಾಕೆ ಕಂಡು ಹಿಡೀಲಿಲ್ಲ? ಅವನಿಗೆ ತಿಳೀತಿರ್ಲಿಲ್ಲಾ?" —ನಾ. ಶಿ. ಉಮೇಶ

# ನನ್ನ ತಂದೆ

ಮೂಲ : ಡಾಮ್ ಮೊರೇಸ್

ಕನ್ನಡಕ್ಕೆ : ವಿ. ಎ. ಜೋಶಿ

ನನ್ನ ತಂದೆಯ ಅತಿ ಶ್ರೇಷ್ಠ ಗುಣವೆಂದರೆ ಮೌನದಿಂದಿರುವುದು. ಅವರು ಮಾತನಾಡುತ್ತಿದ್ದುದು ವಿರಳ. ಒಂದು ಶಬ್ದದ ಅಪವ್ಯಯವನ್ನೂ ಅವರು ಮಾಡುತ್ತಿರಲಿಲ್ಲ. ವೃದ್ಧಾಪ್ಯ, ಅಸಮಾಧಾನ, ಸುರಾಪಾನ ಅವರನ್ನು ಹಣ್ಣು ಮಾಡಿದ್ದವು. ಬಾಲ್ಯದಲ್ಲಿ ನಾನು ಕಂಡ ಅವರ ಚಿತ್ರ ಕಣ್ಣು ಕಟ್ಟಿದೆ. ಎರಡನೆಯ ಮಹಾಯುದ್ಧದ ನಂತರ ಅವರು ಬರ್ಮಾ ಹಾಗೂ ಚೀನಗಳಿಂದ ನನಗೆ ಪತ್ರ ಬರೆಯುತ್ತಿದ್ದರು. ಅವರು ಮನೆಗೆ ಹಿಂತಿರುಗಿದಾಗ ನಾನು ಕಂಡದ್ದು ಮೈ ತುಂಬಿಕೊಂಡ ಶರೀರ, ಜಿಲ್ಲಿನಾಕಾರದ ಮೂಗು, ತೇಜಸ್ವಿ ಕಣ್ಣುಗಳು. ತುಟಿ ಬಿಚ್ಚದಿದ್ದರೂ ಅವರು ಕಣ್ಣಿನಿಂದಲೇ ನಗುತ್ತಿರುವಂತೆ ಅನಿಸುತ್ತಿತ್ತು.

ಅದೇ ಸುಮಾರಿಗೆ ನಾನು ತುಂಡು ಕಾಗದಗಳ ಮೇಲೆ ತೋಚಿದ್ದನ್ನು ಗೀಚಲು ತೊಡಗಿದೆ. ಆಗ ನನಗೆ ಏಳು ವರ್ಷ. ಅವರು ನನ್ನ ಈ ಹವ್ಯಾಸ ಕಂಡು ಒಮ್ಮೆ ಕೇಳಿದರು: "ಏನು, ನೀನು ಬರೆಹಗಾರನಾಗ ಬಯಸುವೆಯಾ?" ಹೌದೆಂದು ತಲೆಯಾಡಿಸಿದೆ. ತಾವು ಯುದ್ಧ ಕಾಲದಲ್ಲಿ ಉಪಯೋಗಿಸುತ್ತಿದ್ದ ಟೈಪ್ ರೈಟರನ್ನು ಅವರು ನನಗೆ ನೀಡಿದರು. ೧೯೬೦ರ ವರೆಗೂ ಇದೇ ನನ್ನ ಬರವಣಿಗೆಯ ಸಾಧನವಾಗಿತ್ತು. ಈ ಮಧ್ಯೆ ನನ್ನ ತಾಯಿಯ ಮಾನಸಿಕ ಅಸ್ವಾಸ್ಥ್ಯ ಅವರನ್ನು ಇನ್ನಷ್ಟು ಹತಾಶಗೊಳಿಸಿತ್ತು. ತಮ್ಮ ಪತ್ರಿಕಾ ಸಂಪಾದಕ ವೃತ್ತಿಯಲ್ಲಿ— ಮೊದಲು 'ಟೈಮ್ಸ್ ಆಫ್ ಸಿಲೋನ್', ಆ ಮೇಲೆ 'ಟೈಮ್ಸ್ ಆಫ್ ಇಂಡಿಯಾ' ಅನಂತರ 'ಇಂಡಿಯನ್ ಎಕ್ಸಪ್ರೆಸ್'— ಅವರು ಎಲ್ಲವನ್ನೂ ಮರೆಯುತ್ತಿದ್ದರು.

ನನ್ನ ತಂದೆ ತಮ್ಮ ಜೀವನದ ಕೊನೆಯವರೆಗೂ ಬರೆಯುತ್ತ ಉಳಿದರು. ಇಂಗ್ಲೀಷಿನ ಉಪಸಂಪಾದಕರು ಬಳಸುವ ನೀಲಿ ಪೆನ್ಸಿಲನ್ನು ಅವರು ಉಪಯೋಗಿಸುತ್ತಿದ್ದರು. ವಿಸ್ಕಿ ಹೀರುತ್ತ ಬರೆಯುವುದು ಅವರ ರೂಢಿ. ಬರವಣಿಗೆಯ ಕೊನೆಯಲ್ಲಿ ಅವರು ನನಗೆ ಅದನ್ನು ಓದಲು ಕೊಡುತ್ತಿದ್ದರು. "ನಿಮ್ಮ ಲೇಖನಗಳ ಬಗ್ಗೆ ನೀವು ನನ್ನನ್ನೇಕೆ ಕೇಳುತ್ತೀರಿ?" ನಾನೊಮ್ಮೆ ಕೇಳಿದೆ. ಅವರು ಚುಟುಕಾಗಿ ನುಡಿದರು: "ನಾನು ನಿನ್ನ ಅಭಿಪ್ರಾಯವನ್ನು ಗೌರವಿಸುತ್ತೇನೆ, ಹಾಂ, ನೀನು ನನ್ನ ಮಗ ಎಂದಲ್ಲ ಮತ್ತೆ." ನಾನು ಪ್ರತಿಯಾಗಿ ಕೇಳಿದೆ: "ನೀವು ನಾನು ಬರೆದದ್ದನ್ನು ನೋಡಬಯಸುತ್ತೀರಾ?"

"ನೀನು ತೋರಿಸಲು ಇಚ್ಛಿಸಿದರೆ ಮಾತ್ರ!"

ನಾನು ನನ್ನ ಕೆಲ ಹೊಸ ಕವನಗಳನ್ನು ಅವರೆದುರು ಹಿಡಿದೆ, ಅವುಗಳ ಮೇಲೆ ಕಣ್ಣಾಡಿಸಿದ ಅವರು ಅಂದರು: "ನಿಜವಾಗಿ ಹೇಳಬೇಕೆಂದರೆ ಕಾವ್ಯದ ಬಗ್ಗೆ ನನಗೇನೂ ಗೊತ್ತಿಲ್ಲ."

'ಯುತ್ ಟೈಮ್ಸ್'ದಿಂದ ಸಾಭಾರ

ಅರೆಕ್ಷಣ ನನಗೆ ಏನೂ ತೋಚಲಿಲ್ಲ. ಮುಂದಿನ ದಿನಗಳಲ್ಲಿ ಅವರು ನನಗಾಗಿ ಹಲವು ಇಂಗ್ಲೀಷ್ ಕವನ ಸಂಕಲನಗಳನ್ನು ತಂದುಕೊಟ್ಟರು. ಇದಕ್ಕಾಗಿ ಅವರು ನನ್ನಿಂದ ಕೃತಜ್ಞತೆಯನ್ನು ಅಪೇಕ್ಷಿಸುತ್ತಿರಲಿಲ್ಲ.

ನಿಗೂಢ ಮೌನದ ಜೊತೆಗೆ ನನ್ನ ತಂದೆಯ ಇನ್ನೊಂದು ಅದ್ಭುತ ಗುಣವೆಂದರೆ ಕರುಣೆ. ಅವರು ಅಪಾತ್ರರಿಗೂ ಕರುಣೆ ತೋರಿದ್ದುಂಟು, ಪ್ರೋತ್ಸಾಹ ನೀಡಿದ್ದುಂಟು. ಇಂದು ಭಾರತದ ಸಾಹಿತ್ಯ-ಪತ್ರಿಕಾರಂಗದಲ್ಲಿಯ ಹಲವರು ಅವರಿಂದ ಉಪಕೃತರಾಗಿದ್ದಾರೆ. ಅವರಲ್ಲಿ ನಾನೊಬ್ಬ ಎಂದು ಹೇಳಿಕೊಳ್ಳಲು ನನಗೆ ಸಂಕೋಚವಿಲ್ಲ. ನಾನು ಹದಿನಾರರರ ಹೊಸ್ತಿಲಲ್ಲಿದ್ದಾಗ ನಡೆದ ಒಂದು ಘಟನೆಯ ನೆನಪು ಹಸಿರಾಗಿದೆ. ಖ್ಯಾತ ಸಾಹಿತಿ ಸ್ಟೀಫನ್ ಸ್ಪೆಂಡರ್ ಆಗ ಮುಂಬಯಿಗೆ ಬಂದಿದ್ದರು. ನನ್ನ ತಂದೆ, "ಇವನು ಡಾಮ್ ಮೊರೇಸ್" ಎಂದಿಷ್ಟೆ ನನ್ನ ಪರಿಚಯವನ್ನು ಸ್ಪೆಂಡರರಿಗೆ ಮಾಡಿಕೊಟ್ಟರು. ನಾನೇ ಮುಂದಾಗಿ ನನ್ನ ಕವನಗಳನ್ನು ಅವರಿಗೆ ತೋರಿಸಿದೆ. ಅವರು ಮೆಚ್ಚಿಕೊಂಡ ಕೆಲವು ಅನಂತರ ಅವರ ಸಂಪಾದಕತ್ವದ 'ಎನ್‌ಕೌಂಟರ್'ನಲ್ಲಿ ಬೆಳಕು ಕಂಡವು. ಈ ಕುರಿತು ನಾನು ನನ್ನ ತಂದೆಗೆ ಕೃತಜ್ಞತೆ ಸೂಚಿಸಿದಾಗ ಅವರು ಅಂದರು; "ನಿನ್ನ ಕೆಲಸವನ್ನು ನೀನೆ ಮಾಡಿಕೊಂಡಿದ್ದೀಯಾ. ಇದೇ ನನಗೆ ಬೇಕಾದದ್ದು." ಅವರು ಮುಗುಳ್ನಕ್ಕು ನನ್ನ ಬೆನ್ನು ಚಪ್ಪರಿಸಿದರು. ಹಿಂದಿನಿಂದ ಅವರು ತಮ್ಮ ಮೌನದ ಕೋಟೆಯಲ್ಲಿ ಮರೆಯಾದರು.

ಮುಂದೆ ನಾನು ಲೇಖನ ವೃತ್ತಿಯನ್ನು ಅವಲಂಬಿಸಿ ಇಂಗ್ಲಂಡಿಗೆ ಹೊರಟೆ. ಅಲ್ಲಿ ಮೂರು, ನಾಲ್ಕು ವರ್ಷ ಕಳೆದವು. ಈ ಮಧ್ಯೆ ತಂದೆಯಿಂದ ಬಂದ ಪತ್ರವೊಂದರ ಒಕ್ಕಣಿಕೆ ಹೀಗಿದ್ದ ನೆನಪು: "ನೀನು ನಿನ್ನ ಕಾಲ ಮೇಲೆ ನಿಂತಿದ್ದೀಯಾ. ನಾನೂ ನಿನ್ನ ವಯಸ್ಸಿನಲ್ಲಿ ಹೀಗೆಯೆ ಮಾಡಿದ್ದೆ. ಅಂತೆಯೆ ನಿನ್ನ ಬಗ್ಗೆ ನನಗೆ ವಿಶೇಷ ಅಭಿಮಾನ. ಹಾಂ, ನಿನಗೆ ತೀರ ಅವಶ್ಯ ಅನಿಸದ ಹೊರತು ನನ್ನಿಂದ ಒಂದು ಕಾಸನ್ನೂ ಪಡೆಯಬೇಡ."

ನನಗಾಗ ಇಪ್ಪತ್ತೊಂದು. ನಾನು ಅವರ ನಿರೀಕ್ಷೆಯಂತೆ ಬೆಳೆದೆ. ಲೇಖನವೃತ್ತಿಯ ಪ್ರಾರಂಭಿಕ ವರ್ಷಗಳ ಕಷ್ಟ-ನಷ್ಟಗಳಲ್ಲಿಯೂ ನಾನು ನನ್ನ ತಂದೆಯಿಂದ ಒಂದು ಬಿಡಿಗಾಸನ್ನೂ ಪಡೆಯಲಿಲ್ಲ ಎಂದು ನನಗೆ ಹೆಮ್ಮೆ.

೧೯೬೧ ರಲ್ಲಿ ನಾನು ಇಸ್ರೇಲಿನಲ್ಲಿ ಇದ್ದೆ. ಐಕ್‌ಮನ್ ಪ್ರಕರಣದ ಕುರಿತು ಅನ್ಯ ದೇಶಗಳ ಪತ್ರಿಕೆಗಳಿಗೆ ಬರೆಯುತ್ತಿದ್ದೆ. ಒಂದು ದಿನ ನನ್ನ ತಂದೆ ನನಗೆ ಭಾರತದಿಂದ ಫೋನ್ ಮಾಡಿ, "ಅಲ್ಲೇನು ಮಾಡುತ್ತಿದ್ದೀಯಾ?" ಎಂದು ಕೇಳಿದರು. ಹೇಳಿದೆ.

"ಆ ಕುರಿತು ನನ್ನ 'ಇಂಡಿಯನ್ ಎಕ್ಸ್‌ಪ್ರೆಸ್'ಗೆ ಬರೆಯುವೆಯಾ ?"

"ಅವಶ್ಯವಾಗಿ, ಯೋಗ್ಯ ಪ್ರತಿಫಲ ಕೊಟ್ಟರೆ."

"ಎಷ್ಟು ಅಪೇಕ್ಷಿಸುತ್ತಿ?"

"ದಿನವೊಂದಕ್ಕೆ ಐವತ್ತು ಡಾಲರ್."

"ಓಹ್, ಬಹಳವಾಯಿತು."

ನಾನು ಕಿರುಚಿದೆ: "ಇದು ನಾನು ಇತರರಿಂದ ಪಡೆಯುವ ವಾಡಿಕೆಯ ಸಂಭಾವನೆಯೋ, ಮೂರ್ಖ."

"ಏ ಕತ್ತೆ, ನೀನು ಹತ್ತು ಡಾಲರ್‌ನಲ್ಲಿ ಇದನ್ನು ಮಾಡಬೇಕು."

ನಾನು ಒಪ್ಪಿಕೊಂಡೆ. ಅಷ್ಟೇ ಅಲ್ಲ, ಆ ರೀತಿ ಮಾಡಿದೆ ಕೂಡ. 'ಮೂರ್ಖ' 'ಕತ್ತೆ' ಇವು ನಾವಿಬ್ಬರು ಪರಸ್ಪರ ಬಳಸುತ್ತಿದ್ದ ಅಕ್ಕರೆಯ ಸಂಬೋಧನೆಗಳಾಗಿದ್ದವು.

ವರ್ಷಗಳು ಸದ್ದಿಲ್ಲದೆ ಉರುಳಿದವು. ಹತ್ತಿರ ಇರಲಿ, ದೂರ ಇರಲಿ– ನನ್ನ ತಂದೆಯ ನಿಗೂಢ ಮೌನ ನನ್ನ ಕಣ್ಣು ಕಟ್ಟಿತ್ತು. ೧೯೬೧ ನನ್ನ ಜೀವನದ ಇನ್ನೊಂದು ಸಂಧಿಕಾಲ. ನಾನು ನನ್ನ ಬಾಲ್ಯದ ಗೆಳತಿ, ಖ್ಯಾತ ನಟಿ ಲೀಲಾ ನಾಯುಡುಳನ್ನು ಮದುವೆಯಾಗಲು ನಿಶ್ಚಯಿಸಿದೆ. ಮದುವೆಯ ಮುನ್ನ ಈ ವಿಷಯ ತಂದೆಯ ಕಿವಿಯ ಮೇಲಿಟ್ಟೆ. ವೃದ್ಧಾಪ್ಯ ಹಾಗೂ ದಣಿವಿನಿಂದ

ಹಣ್ಣಾಗಿದ್ದ ಅವರು ನಗುತ್ತಿದ್ದುದೇ ವಿರಳ. ಆಗ ಮಾತ್ರ ಮುಗುಳ್ನಕ್ಕು ಹೇಳಿದರು. "ತುಂಬಾ ಸಂತೋಷ. ಲೀಲಾಳ ತಾಯಿ ಫ್ರೆಂಚಳಾದರೂ ತಂದೆ ನಮ್ಮಂತೆ ಕ್ಷತ್ರಿಯನೆ." ನಾನು ಬೆರಗಾದೆ, ಹಾಗಾದರೆ ನಾವು ಕ್ಷತ್ರಿಯರೆ ಎಂದು. "ಹೌದು, ನಾವು ಕ್ಷತ್ರಿಯರು," ಎಂದಿಷ್ಟೆ ಹೇಳಿದ ಅವರು ಪುನಃ ಮೌನದ ಮುಸುಕು ತೊಟ್ಟರು. ಮುಂದೆ ನಾನು ಗೋವಾಕ್ಕೆ ಹೋದಾಗ ಅಲ್ಲಿಯ ನನ್ನ ಪೂರ್ವಜರು ಕ್ಯಾಥೊಲಿಕ್ ಕ್ಷತ್ರಿಯರಾಗಿದ್ದರೆಂಬ ಸತ್ಯ ತಿಳಿಯಿತು.

ಮದುವೆಯ ನಂತರ ನಾನು ಹಾಂಗ್‌ಕಾಂಗಿಗೆ ಹೊರಟೆ, ಅಲ್ಲಿಯ ಪತ್ರಿಕೆಯೊಂದರ ಸಂಪಾದಕನಾಗಿ. ಮಾರ್ಗ ಮಧ್ಯೆ ತಂದೆಯನ್ನು ಕಾಣಲು ದಿಲ್ಲಿಯಲ್ಲಿ ಇಳಿದೆವು. ಅವರು ನಮ್ಮಿಬ್ಬರನ್ನು ಅಪ್ಪಿಕೊಂಡು ಶುಭ ಕೋರಿದರು. ಎರಡು ವರ್ಷಗಳ ನಂತರ ೧೯೬೩ರಲ್ಲಿ ನಾನು ವಿಶ್ವಸಂಸ್ಥೆಯ ಸೇವೆಯಲ್ಲಿ ಅಮೇರಿಕಕ್ಕೆ ಹೊರಟಾಗ ಮತ್ತೆ ದಿಲ್ಲಿಗೆ ಬಂದೆ. ಪತ್ನಿ ಲೀಲಾ ನನ್ನ ಜೊತೆಗೆ ಇದ್ದಳು. ಆಗ ನನ್ನ ತಂದೆ ವೃತ್ತಿಜೀವನದಿಂದ ನಿವೃತ್ತರಾಗಿ, ಶೇಷಾಯುಷ್ಯ ಕಳೆಯಲು ಲಂಡನ್ ನಗರಕ್ಕೆ ಹೊರಟಿದ್ದರು. ಮರುದಿನ ಅವರು ಹೊರಡುವುದಿತ್ತು. ಆ ರಾತ್ರಿ ನಾವಿಬ್ಬರೂ ಬಹಳ ಹೊತ್ತು ಮಾತನಾಡುತ್ತ ಉಳಿದೆವು. ನಾನು ಅವರನ್ನು ತೀಕ್ಷ್ಣವಾಗಿ ಕೇಳಿದೆ: "ಈ ವೃದ್ಧಾಪ್ಯದಲ್ಲಿ ನೀವು ಲಂಡನ್ನಿನಲ್ಲಿ ಮಾಡುವುದೇನಿದೆ? ನಿಮ್ಮ ಗೆಳೆಯರೆಲ್ಲ ಇಲ್ಲಿದ್ದಾರೆ, ಅವರನ್ನೆಲ್ಲ ಬಿಟ್ಟು ಹೋಗುವುದೇಕೆ?"

ವಾಡಿಕೆಯ ಸುಂದರ ಮೌನ ಅರೆ ನಿಮಿಷ ಕವಿಯಿತು. ಅನಂತರ ಅವರು ನುಡಿದರು: "ನಿನ್ನ ಹಾಗೂ ಲೀಲಾಳ ಸುಖೀ ದಾಂಪತ್ಯ ನನಗೆ ತುಂಬಾ ಸಂತೋಷ ನೀಡಿದೆ."

ನಾನು ಅಸಹನೆಯಿಂದ ಕೂಗಿದೆ "ಏ ಮೂರ್ಖ, ನಾನು ನಿನ್ನನ್ನು ಕೇಳಿದ್ದು ಅದನ್ನಲ್ಲ."

ಅವರು ಮುಖ ಕೆಳಗೆ ಹಾಕಿ ಅಂದರು: "ಏ ಕತ್ತೆ, ನನ್ನ ಬಗ್ಗೆ ನಿನಗೇಕೆ ಇಷ್ಟು ಕಾಳಜಿ?"

ನಾನು ಅತ್ತುದು ವಿರಳ, ಆಗ ಮಾತ್ರ ಕಣ್ಣೀರ ಕಟ್ಟೆ ಒಡೆಯಿತು. ಗದ್ಗದ ಕಂಠದಿಂದ ಕನವರಿಸಿದೆ: "ನೀನು ನನ್ನ ತಂದೆಯಾಗಿರದಿದ್ದರೂ ನಾನು ನಿನ್ನನ್ನು ಇಷ್ಟೇ ಪ್ರೀತಿಸುತ್ತಿದ್ದೆ!"

ಅವರೂ ಕಣ್ಣೀರು ಕರೆದರು, ಆದರೆ ತುಂಬಾ ನಿಧಾನವಾಗಿ, ಮೇಲಿನ ಕೋಣೆಯಲ್ಲಿ ಒರಗಿದ್ದ ಲೀಲಾ ಬಂದು, ನಮ್ಮಿಬ್ಬರನ್ನೂ ಈ ಸ್ಥಿತಿಯಲ್ಲಿ ಕಂಡಾಗ ಅವಳ ಕಣ್ಣುಗಳೂ ನೀರ ಹೊಂಡಗಳಾದವು.

ಮತ್ತೆ ಎರಡು ವರ್ಷ ಕಳೆದವು. ಕಾರ್ಯನಿಮಿತ್ತ ಲಂಡನ್ ಮಾರ್ಗವಾಗಿ ಪ್ರಯಾಣಿಸುತ್ತಿದ್ದಾಗ ಅಲ್ಲಿ ಇಳಿದೆವು. ನನ್ನ ತಂದೆಯನ್ನು ಕಂಡಾಗ ಅವರು ತೀರ ಸೋತವರಂತೆ ತೋರಿತು. ನಾವಿಬ್ಬರೂ ಅವರನ್ನು ಆಕ್ಸ್‌ಫರ್ಡಿಗೆ ಒಂದು ಸಂಜೆ ಕರೆದೊಯ್ದೆವು. ದಣಿದ ಅವರು ಕಾರಿನಿಂದ ಹೊರಬರುವ ಸ್ಥಿತಿಯಲ್ಲೂ ಇರಲಿಲ್ಲ. ಅವರನ್ನು ಮರಳಿ ಮನೆಗೆ ತಲುಪಿಸಿದ ನಾವು ರಾತ್ರಿ ಅವರಿಂದ ಬೀಳ್ಕೊಂಡೆವು.

ಕೇವಲ ಒಂದೇ ತಿಂಗಳ ನಂತರ ನ್ಯೂಯಾರ್ಕಿನಲ್ಲಿದ್ದ ನನಗೆ ಅವರ ನಿಧನದ ಸುದ್ದಿ ತಲುಪಿತು. ಅವರ ಅಂತ್ಯ ಸಂಸ್ಕಾರಕ್ಕೆ ನಾನು ಹೋಗಲಿಲ್ಲ, ಎರಡು ಕಾರಣಗಳಿಗಾಗಿ: ಬದುಕಿನುದ್ದಕ್ಕೂ ನೀಡಲಾಗದ ಸಂದೇಶ ಅವರೀಗ ಕೊಡುವಂತಿರಲಿಲ್ಲ: ಮೇಲಾಗಿ ಆ ತೇಜಸ್ವಿ ಕಣ್ಣುಗಳು ಚಿರಕಾಲ ಮುಚ್ಚಿದ್ದನ್ನು ನಾನು ನೋಡಲು ಇಚ್ಛಿಸಲಿಲ್ಲ. 'ನ್ಯೂಯಾರ್ಕ್ ಟೈಮ್ಸ್' ಕೋರಿಕೆಯ ಮೇರೆಗೆ ನಾನಿಷ್ಟೆ ಹೇಳಿದೆ: "ನಾನು ತಿಳಿದಿರುವ ಅತ್ಯಂತ ಪ್ರಾಮಾಣಿಕ ಹಾಗೂ ಕರುಣಾಳು ಮನುಷ್ಯ ನನ್ನ ತಂದೆ. ನಾನು ಇಂದೇನಾದರೂ ಆಗಿದ್ದರೆ ಇದು ಅವರ ಅನುಗ್ರಹ."

**(ಈ ಲೇಖನ ಭಾರತದ ಖ್ಯಾತ ಪತ್ರಿಕಾ ಸಂಪಾದಕ ಫ್ರ್ಯಾಂಕ್ ಮೋರೇಸರನ್ನು ಕುರಿತು ಅವರ ಮಗ ಬರೆದುದು.)**

# ಬಡವರಿಗೆಲ್ಲ ಮನೆ

ಬಡವರಿಗೆಲ್ಲ ಮನೆ, ಇಲ್ಲವೆ ನಿವೇಶನ. ಇದಕ್ಕಾಗಿ ಸರ್ಕಾರ ಹಮ್ಮಿ ಕೊಂಡಿರುವ ಕಾರ್ಯಕ್ರಮಗಳು ಅನೇಕ. ಜನತಾ ಮನೆಗಳನ್ನು ಕಟ್ಟಿಸಿ ಕೊಡುವುದು ಇಲ್ಲವೆ ನಿವೇಶನ ನೀಡುವ ನಾನಾ ಯೋಜನೆಗಳು ಹಂತಹಂತವಾಗಿ ಕಾರ್ಯಗತವಾಗುತ್ತಿವೆ. ಗ್ರಾಮಾಂತರ ಪ್ರದೇಶಗಳಲ್ಲಿ ಎಂಟು ಲಕ್ಷಕ್ಕೂ ಹೆಚ್ಚು ನಿರ್ಗತಿಕ ಕುಟುಂಬಗಳಿಗೆ ಮನೆ ನಿವೇಶನಗಳನ್ನು ಹಂಚಲಾಗಿದೆ. ಇವುಗಳ ಪೈಕಿ ಮೂರನೆಯ ಒಂದರಷ್ಟು ಹರಿಜನ ಗಿರಿಜನ ಕುಟುಂಬಗಳು ಎಂಬತ್ತು ಸಾವಿರ ಜನತಾ ಮನೆಗಳ ನಿರ್ಮಾಣಕ್ಕಾಗಿ ಸರ್ಕಾರ ವೆಚ್ಚ ಮಾಡುತ್ತಿರುವ ಹಣ ಆರು ಕೋಟಿ ರೂಪಾಯಿ. ಈಗಾಗಲೇ ನಿರ್ಮಾಣವಾಗಿರುವ ಮನೆಗಳು ಅರವತ್ತೈದು ಸಾವಿರ.

ಸ್ವಂತ ಸಂಪನ್ಮೂಲಗಳ ಜೊತೆಗೆ ಇತರ ಸಂಸ್ಥೆಗಳ ನೆರವನ್ನೂ ಈ ಕಾರ್ಯಕ್ರಮಕ್ಕಾಗಿ ಪಡೆದುಕೊಳ್ಳುವುದು ಸರ್ಕಾರದ ಉದ್ದೇಶ. ಹುಡ್ಕೋದಿಂದ ಹತ್ತು ಕೋಟಿ ರೂಪಾಯಿಗಳನ್ನು ಜನತಾ ಮನೆಗಳ ನಿರ್ಮಾಣಕ್ಕಾಗಿ ಪಡೆಯು ಲಾಗುತ್ತಿದೆ. ಆರನೆಯ ಯೋಜನೆಯ ಅವಧಿಯಲ್ಲಿ (೧೯೮೦-೮೫) ಒಂದು ನೂರು ಕೋಟಿ ರೂಪಾಯಿ ವೆಚ್ಚಮಾಡಿ ಐದು ಲಕ್ಷ ಮನೆಗಳನ್ನು ಕಟ್ಟಬೇಕೆಂದು ತೀರ್ಮಾನಿಸಲಾಗಿದೆ. ಇದೊಂದು ಬೃಹತ್ ಯೋಜನೆ.

ನೆಲೆ ಇಲ್ಲದವರಿಗೆ ನೆಲೆ ಕಲ್ಪಿಸುವುದು ಸರ್ಕಾರದ ಗುರಿ. ತೀರ ನಿರ್ಗತಿಕರಿಗೆ ಗುಡಿಸಲು ನಿರ್ಮಿಸುವ ಯೋಜನೆಯೂ ಇದೆ. ತಮ್ಮ ಪಾಲಿನ ಹಣ ನೀಡಲು ಶಕ್ತಿಯಿಲ್ಲದಂಥ ಜನಕ್ಕಾಗಿ ಈ ಯೋಜನೆ.

ಜನತಾ ಗೃಹ ನಿರ್ಮಾಣ ಯೋಜನೆಯ ಅಡಿಯಲ್ಲಿ ಇದುವರೆಗೆ ಕಟ್ಟಲಾಗಿರುವ ಮನೆಗಳ ಸಂಖ್ಯೆ ೧,೭೭,೭೮೦. ಈ ವರ್ಷ ಮಾರ್ಚ್ ಕೊನೆಯ ವೇಳೆಗೆ ವೆಚ್ಚ ಮಾಡಲಾಗುವ ಹಣ ೨೯,೭೫,೭೩,೪೫೫ ರೂ. ಗುಡಿಸಲು ನಿರ್ಮಾಣ ಯೋಜನೆಯ ಅಡಿಯಲ್ಲಿ ೪೦,೪೪೫ ಗುಡಿಸಲುಗಳನ್ನು ಕಟ್ಟಲಾಗಿದೆ. ಇದಕ್ಕೆ ತಗಲಿರುವ ವೆಚ್ಚ ೧,೦೭,೧೭,೮೪೫ ರೂ.

**ಪ್ರಕಟಣೆ – ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

ಡಿಐಪಿ/೧೪೮೧/೮೦-೮೧

# ಇದುವೆ ಜೀವ ಇದು ಜೀವನ

ಒಮ್ಮೆ ನಾನು ಮದ್ರಾಸಿನಿಂದ ಹುಬ್ಬಳ್ಳಿಗೆ ಮದ್ರಾಸ್-ಮುಂಬೈ ಮೇಲಿನಲ್ಲಿ ಪ್ರಯಾಣಿಸುತ್ತಿದ್ದೆ. ಗುತ್ತಿಯ ಹಿಂದಿನ ಒಂದು ಸಣ್ಣ ಸ್ಟೇಶನ್ನಿನಲ್ಲಿ ದಾದರ್-ಮದ್ರಾಸ್ ಎಕ್ಸ್‌ಪ್ರೆಸ್ ಕ್ರಾಸಿಂಗ್ ಇದ್ದುದರಿಂದ ನಮ್ಮ ಗಾಡಿ ನಿಂತಿತ್ತು. ಆ ಗಾಡಿ ಬರಲು ಇನ್ನೂ ಹೊತ್ತು ಇದ್ದದ್ದರಿಂದ ನಾನೂ ಕೆಲವರೊಂದಿಗೆ ಕೆಳಗಿಳಿದು ನಿಂತಿದ್ದೆ.

ಗಾಡಿ ಸಣ್ಣ ಚುಕ್ಕೆಯಂತೆ ದೂರದಲ್ಲಿ ಕಾಣಿಸಿಕೊಂಡು ಎವೆ ಇಕ್ಕುವುದರೊಳಗಾಗಿ ಸಮೀಪಿಸಿ ಎದೆ ನಡುಗಿಸುವ ವೇಗದಲ್ಲಿ ಸಾಗಿ ಮತ್ತೆ ಚುಕ್ಕೆಯಂತೆ ಕಾಣಿಸಿಕೊಂಡು ಮಾಯವಾಯಿತು. ಅಷ್ಟರಲ್ಲೇ ಎಲ್ಲಿಂದಲೊ ಒಂದು ಮಂಗ ಬಂತು. ರೈಲು ಹಳಿಗಳ ಬಳಿ ಹೋಗಿ ಎರಡೇ ಕಾಲುಗಳಲ್ಲಿ ನಿಂತು ಅತ್ತಿತ್ತ ನೋಡಿ ಕೂಗತೊಡಗಿತು. ನಮಗೆಲ್ಲ ಅದು ಏಕೆ ಹಾಗೆ ಕೂಗುತ್ತಿದೆ ಎಂದು ಗೊತ್ತಾಗದೆ ಅತ್ತಲೇ ನೋಡುತ್ತಿದ್ದಂತೆ ೧೫-೨೦ ಮಂಗಗಳ ಗುಂಪೇ ಅಲ್ಲಿ ಸೇರಿತು.

ಏನಾಗುತ್ತಿದೆ ಎಂದು ಕುತೂಹಲದಿಂದ ನಾವು ಮುಂದೆ ಹೋದರೆ ಆ ಮಂಗಗಳು ಅಲ್ಲಲ್ಲಿ ಬಾಗಿ ಏನನ್ನೋ ಆಯ್ದು ಒಂದೆಡೆ ಒಟ್ಟುಮಾಡತೊಡಗಿದವು. ನಂತರ ತಮ್ಮ ಪಾಡಿಗೆ ತಾವು ಹೊರಟುಹೋದವು. ಅವು ಆಯ್ದು ತಂದು ಒಟ್ಟುಗೂಡಿಸಿಟ್ಟದ್ದೇನೆಂದು ನೋಡಿದರೆ ನನಗೆ ನಮ್ಮ ಜನುಮದ ಬಗ್ಗೆಯೇ ಪಶ್ಚಾತ್ತಾಪ ಅಗುವಂತಾಯಿತು.

ವೇಗದಿಂದ ಹೋದ ಗಾಡಿಯ ಅಡಿಗೆ ನಾಯಿಯೊಂದು ಸಿಕ್ಕು ಸತ್ತಿತ್ತು. ಅದರ ಅವಯುವಗಳೆಲ್ಲ ಹರಿದು ಹತ್ತಾರು ಕಡೆ ಹರಡಿ ಬಿದ್ದಿದ್ದವು. ತಮ್ಮ ಕುಲವೈರಿಯಾದರೂ ಆ ವೈರವನ್ನೆಣಿಸದೆ ಆ ಮಂಗಗಳು ಅದರ ಶವವನ್ನು ಒಟ್ಟುಗೂಡಿಸಿದಂಥ ಕಾರ್ಯ ಬಹುಶಃ ಮಾನವ ಇತಿಹಾಸದಲ್ಲಿ ಒಂದಾದರೂ ಸಿಕ್ಕುತ್ತದೋ ಇಲ್ಲವೋ ಹೇಳುವುದು ಕಷ್ಟ.

—ಎಸ್. ಎಂ. ಹುಲಮನಿ

ನನ್ನ ಅಣ್ಣನ ಮಗಳು-ದುಂಡಗೆ, ಪುಟ್ಟಗಾಗಿರುವದರಿಂದ—ಇಂದು ನಮಗೆಲ್ಲ ಆಕೆ ಪುಟ್ಟ. ಮೂರನೇ ತರಗತಿಯಲ್ಲಿ ಓದುತ್ತಿದ್ದಾಳೆ. ವಿದ್ಯಾವಂತ ಪರಿಸರದಲ್ಲಿರುವ ಆಕೆ ಯಾವ ಹಂಬಲವಿರಿಸಿಕೊಂಡಿರಬಹುದೆಂದು ತಿಳಿಯುವ ಆಸೆಯಾಯಿತು. ಒಂದು ದಿನ ಕರೆದು ಕೇಳಿದೆ— "ಪುಟ್ಟ! ಮುಂದೆ ಏನಾಗಬೇಕೆಂದಿರುವೆ?"

"ನಾನು ಏನು ಆಗುವದೂ ಇಲ್ಲ," ಎಂದಳು ಮೊಂಡತನದಿಂದ.

"ಯಾಕೆ ಹಾಗನ್ನುತ್ತೀ? ಬಹಳಷ್ಟು ಓದಿ ದೊಡ್ಡ ವ್ಯಕ್ತಿಯಾಗಬೇಕು ಗೊತ್ತಾ?"

"ದೊಡ್ಡ ವ್ಯಕ್ತಿಯಾಗೋಕೆ ಹೆಚ್ಚು ಓದುವದೇ ಇಲ್ಲವಲ್ಲ? ನಾನು ಓದುವದು ನಾಲ್ಕನೆಯ ಈಯತ್ತೆಯವರೆಗೆ ಮಾತ್ರ!"

ಆಶ್ಚರ್ಯಚಕಿತನಾಗಿ ಪ್ರಶ್ನಿಸಿದೆ— "ಮುಂದೆ ಯಾಕೆ ಕಲಿಯೋಲ್ಲ?"

"ಅಯ್ಯೋ! ಮುಂದೆ ಕಲಿಯುವದು ಯಾರಿಗೆ ಬೇಕಪ್ಪ? ನಂಗಂತೂ ಈಗಲೇ ಪುಸ್ತಕಗಳನ್ನು ಹೊರುವದು ಕಷ್ಟವಾಗಿದೆ. ಐದನೇ ಈಯತ್ತೆಗೆ ಇಂಗ್ಲಿಷ್ ಬರುತ್ತೆ. ಆರಕ್ಕೆ ಹಿಂದಿ ಬೇರೆ! ಆ ಎಲ್ಲ ಪುಸ್ತಕಗಳನ್ನು ಹೊತ್ತು ನನ್ನಿಂದಂತೂ ಶಾಲೆಗೆ ಹೋಗಲಿಕ್ಕಾಗೋಲ್ಲ. ಅದಕ್ಕೇ ನಾನು ಕಲಿಯುವದು ನಾಲ್ಕರ ವರೆಗೆ ಮಾತ್ರ!"

ಉತ್ತರ ಮುಗ್ಧವಾಗಿದ್ದರೂ ಸತ್ಯ ಕಟುವಾಗಿಯೇ ಇತ್ತು.

ಎಂಥ 'ತೂಕದ ಶಿಕ್ಷಣ' ಕೊಡುತ್ತಿದ್ದೇವಲ್ಲವೇ ನಾವು?

—ಜನಾರ್ದನ ದೇವದಕೇರಿ

ನಾನು ಎಂ.ಬಿ.ಬಿ.ಎಸ್. ಮುಗಿಸಿದ ಮೇಲೆ ಜನಸೇವೆಯ ಆದರ್ಶ ಹೊತ್ತು ಹಿಂದುಳಿದ ಒಂದು ಹಳ್ಳಿಗೆ ಡಾಕ್ಟರಾಗಿ ಹೋದೆ. ಮೂಢ ನಂಬಿಕೆಗಳ ದಾಸರಾದ ಆ ಹಳ್ಳಿಗರು ಈ ಪೇಟೆಯ 'ಇಂಗ್ಲೀಷ್' ಡಾಕ್ಟರನ್ನು ಸ್ವೀಕರಿಸಲು ಸುಲಭವಾಗಿ ತಯಾರಿದ್ದಿಲ್ಲ. ಆದರೂ ನನ್ನ ಪ್ರಯತ್ನ ನಡೆಸಿಯೆ ಇದ್ದೆ.

ಒಂದು ರಾತ್ರಿ ಯಾರೋ ನನ್ನನ್ನು ನಿದ್ರೆಯಿಂದ ಎಬ್ಬಿಸಿದರು. ಒಬ್ಬ ವಯಸ್ಸಾದ ರೋಗಿಯನ್ನು ಕರೆತಂದಿದ್ದರು. ಹುಮ್ಮಸ್ಸಿನಿಂದ ನಾನೂ ತಪಾಸಣೆ ಮಾಡಿದೆ. ಆದರೆ ದುರದೃಷ್ಟವಶಾತ್ ರೋಗ ತೀರ ಉಲ್ಬಣಾವಸ್ಥೆಗೆ ಮುಟ್ಟಿತ್ತು. ನನ್ನಲ್ಲಿದ್ದ ಸಾಮಗ್ರಿಗಳು ಮತ್ತು ಔಷಧಗಳಿಂದ ಏನೂ ಆಗುವಂತಿರಲಿಲ್ಲ. ತಕ್ಷಣ ದೂರದ ಪಟ್ಟಣಕ್ಕೆ ಕರೆದೊಯ್ದರೆ ಮಾತ್ರ ರೋಗಿ ಉಳಿಯುವ ಸಾಧ್ಯತೆಯಿತ್ತು. ಇದನ್ನು ಹಳ್ಳಿಗರಿಗೆ ತಿಳಿಸಿದಾಗ ನನಗೆ ಅಚ್ಚರಿಯೇ ಕಾದಿತ್ತು. ಎಲ್ಲರೂ ಒಕ್ಕೊರಲಿನಿಂದ,

"ಸಾಯೇಬ್ರ, ನೀವೇ ಏನಾರ ಮಾಡ್ಬೇಕ್ರ. ನೀವೇ ನಮ್ಮ ದ್ಯಾವ್ರು, ಇದು ನಿಮ್ಮ ಕೈನಾಗೇ ಸಾಧ್ಯ. ನಾವಿನ್ನೆಲ್ಲೂ ಒಗಾಕಿಲ್ಲ," ಎಂದರು.

ಅವರು ನನ್ನಲ್ಲಿ ತೋರಿಸುತ್ತಿರುವ ನಂಬಿಕೆ ವಿಶ್ವಾಸ ಕಂಡು ಬಹಳ ಸಂತೋಷವಾಯ್ತು. ಆದರೂ ಈ ಪರಿಸ್ಥಿತಿಯಲ್ಲಿ ನಾನು ಏನೂ ಮಾಡಲಾರದವನಾಗಿದ್ದೇನಲ್ಲ ಎಂದು ವ್ಯಸನವೂ ಆಯಿತು.

ಪರಿಪರಿಯಾಗಿ ನನ್ನ ಅಸಹಾಯಕತೆಯನ್ನು ಅವರಿಗೆ ವಿವರಿಸಿದರೂ ಅವರ ಪಟ್ಟು ಬಿಡಲಿಲ್ಲ. ಬೇರೇನೂ ತೋಚದೆ ನನ್ನಲ್ಲಿದ್ದ ಚುಚ್ಚುಮದ್ದೊಂದನ್ನು ರೋಗಿಗೆ ಕೊಟ್ಟೆ. ಇದನ್ನು ನೋಡಿ ಜನರೆಲ್ಲ ಪ್ರಸನ್ನರಾದಂತೆ ಕಂಡರು. ಆದರೆ ರೋಗಿ ಬೆಳಗಿನ ತನಕ ಕೂಡ ಬದುಕಲಾರನೆಂದು ತಿಳಿದಿದ್ದ ನಾನು ಮಾತ್ರ ನಿರಾಸೆಯಿಂದಿದ್ದೆ.

ಚಮತ್ಕಾರವೋ ಎಂಬಂತೆ ರೋಗಿ ಸಾಯಲೇ ಇಲ್ಲ. ಮುಂದಿನ ದಿನಗಳಲ್ಲಿ ನನ್ನ ಆರೈಕೆಯಿಂದ ರೋಗಿ ಗುಣ ಹೊಂದಿ ಮನೆಗೆ ಹೋಗುವ ಸ್ಥಿತಿಗೆ ಬಂದ. ಅವನನ್ನು ಕಳಿಸಿಕೊಡುವ ಮೊದಲು ನನ್ನ ಮೇಲೆ ವಿಶ್ವಾಸ ತೋರಿ ಚಿಕಿತ್ಸೆಗಾಗಿ ಬಂದದ್ದಕ್ಕೆ ರೋಗಿಯ ಕಡೆಯವರನ್ನು ಅಭಿನಂದಿಸಿದೆ. ಆಗ ಇನ್ನೊಂದು ಅಚ್ಚರಿ ಕಾದಿತ್ತು.

"ಅಯ್ಯ ಬಿಡಿ ಸೋಮಿ, ಕವಡಿ ಶಾಸ್ತ್ರ ಎಂದಾನ ಸುಳ್ಳಾಯ್ತದಾ? ಆವೊತ್ತು ನಿಮ್ಮ ತಾಕೆ ವೋದ್ರೇ ವಾಸಿ ಆಗ್ತದೆ ಅಂತ ಕವಡಿ ಶಾಸ್ತ್ರ ಏಳೋವೊತ್ಗೇನೇ ನಾವಿಲ್ಲಿ ನಿಮ್ಗ ದುಂಬಾಲು ಬಿದ್ದಿದ್ದು" ಎನ್ನುವುದೇ!

—ಡಾ. ಟಿ. ಕೆ. ಪ್ರಭುಕುಮಾರ್

ಪೇಟೆಯ ಆ ಜನಜಂಗುಳಿಯಲ್ಲಿಯೂ ನಾನು ಗಕ್ಕನೆ ನಿಂತೆ ನಿಲ್ಲಬೇಕಾದ ಪ್ರಸಂಗ ಮೊದಗಿದ್ದರಿಂದ. ಹಾಗೆ ನಿಲ್ಲಿಸಿದ್ದು ಒಂದು ಹಾಡು. ದಾಸರ ಪದ. ಹಾಡುತ್ತಿದ್ದವಳು ಒಬ್ಬ ಹುಡುಗಿ. ಹದಿನೆಂಟರ ವಯಸ್ಸಿನವಳು. ಹಾಡುತ್ತಿದ್ದವಳು, 'ಏನ ಬೇಡಲಿ ನಿನ್ನ ಬಳಿಗೆ ಬಂದು?' ಎಂದು.

ಕೆಲ ದಿನಗಳ ಹಿಂದೆಯಷ್ಟೇ ಒಂದು ಸಂದರ್ಭಕ್ಕಾಗಿ ಆ ಹಾಡನ್ನು ಬಾಯಿಪಾಠ ಮಾಡಿಟ್ಟುಕೊಂಡಿದ್ದೆ. ಅದರಲ್ಲಿ ನೀನು ಅದನ್ನು ಕೊಟ್ಟೆ, ಇದನ್ನು ಕೊಟ್ಟೆ, ಏನೆಲ್ಲವನ್ನೂ ಕೊಟ್ಟೆ ಎನ್ನುತ್ತ ಭಕ್ತಿಯಿಂದ ದಾಸರು ಹಾಗಾದರೆ ನಿನ್ನಲ್ಲಿ ಏನು ಬೇಡಲಿ ದೇವಾ ಎಂಬ ಭಾವನೆಯಲ್ಲಿ ಬರೆದ ಈ ಹಾಡನ್ನು ಹಾಡಿ ಕೊನೆಗೆ ಆ ಹುಡುಗಿ, 'ಎಪ್ಪಾ ಹತ್ತಪೈಸಾ' ಎಂದಾಗ ನನಗೆ ಈ ಹಾಡು ಬರೆದದ್ದಕ್ಕೆ ದಾಸರ ಬಗ್ಗೆ ಸಿಟ್ಟು ಬಂತು.

—ರಾಜೀವ ಪಾಟೀಲ

# ಮುದ್ದಣನಿಗೆ ದಾರಿ ತೋರಿಸಿದವರು

ಐರೋಡಿ ಯಜ್ಞನಾರಾಯಣ ಉಡುಪ

ಶ್ರೀರಾಮ ಪಟ್ಟಾಭಿಷೇಕವನ್ನು ತಿದ್ದಿ, ರಾಮಾಶ್ವಮೇಧಕ್ಕೆ ಯಾವ ಮಹಾ ವ್ಯಕ್ತಿಯು ಮಾರ್ಗದರ್ಶಕರಾದರೋ ಆ ಪ್ರತಿಭಾವಂತರ ಕುರಿತಾಗಿಯೇ ಕನ್ನಡನಾಡು ಇಂದಿನ ವರೆಗೆ ತುಟಿ ಎರಡು ಮಾಡದಿದ್ದುದು, ಮಾಡಲೂ ಆಸಕ್ತಿ ತೋರದುದು ಪರಮಾಶ್ಚರ್ಯ. ನಂದಳಿಕೆಯ ಮಹಾಕವಿಯೇ ಯಾವ ಮಹಾನುಭಾವರ ಕುರಿತು 'ವೆಂಕಟರಮಣ ಹೆಬ್ಬಾರರ ಮೇಧಾಶಕ್ತಿಯು ನೂರರಲ್ಲಿ ಒಂದು ಪಾಲೂ ನನ್ನಲ್ಲಿಲ್ಲ' ಎಂದು ನಿರ್ದಾಕ್ಷಿಣ್ಯದಿಂದ ಒಪ್ಪಿಕೊಂಡಿರುವನೋ ಅಂಥ ಮಹಾವ್ಯಕ್ತಿಯು ಕನ್ನಡಿಗರ ದೃಷ್ಟಿಪಥಕ್ಕೆ ಬೀಳದೆ ಇಂದಿನ ವರೆಗೆ ಮೂಲೆಗುಂಪಾಗಿ ಉಳಿಯಬೇಕು? ಹೆಬ್ಬಾರರನ್ನು ಕನ್ನಡಿಗರು ಮರೆಯಬಾರದು. ಕನ್ನಡವು 'ತಾನು' ಎಂದಿರುವವರೆಗೆ ಇಂಥವರ ನಾಮಸ್ಮರಣೆ ಮತ್ತು ವರಸೆ ಬರಹಗಳು ದಿನ ದಿನ ಬಾಲದಂತೆ ಸಾಗುತ್ತಿರಬೇಕು; ಇವರ ಹೆಜ್ಜೆಯಲ್ಲಿ ಹೆಜ್ಜೆಯನ್ನಿಡುತ್ತಾ ಸಾಗಬೇಕು. ಅಂದು ಭಾಷಾದೇವಿಯು ಹಸನ್ಮುಖಿಯಾಗುವಳು. ಆಗ ವೆಂಕಟಾಧ್ವರಿಯ ಅಂದಿನ ಕರ್ನಾಟಕದ ವ್ಯಾಖ್ಯಾನವು ಸಾರ್ಥಕವಾಗುವುದು. ಅದೊಂದು ಸುದಿನ! ಕನ್ನಡಿಗರ ಸುದಿನ !

ವೆಂಕಟರಮಣ ಹೆಬ್ಬಾರರಂತಹ ಮೇಧಾವಿಗಳು ಮತ್ತು ಸಾತ್ವಿಕರು ಕರ್ನಾಟಕದಲ್ಲಿ ಕೆಲವರೇ ಇರಬಹುದು. ಅವರೂ ನಂದಳಿಕೆ ಲಕ್ಷ್ಮೀನಾರಣಪ್ಪನಂತೆ ಬಂಜರ ವಾತಾವರಣದಲ್ಲಿ ಸಿಡಿ ದಾಪಿನ ದೂರವಾಗಿ ಅವತರಿಸಿದರು. ನಂದಳಿಕೆ ಕವಿಗೆ ತನ್ನ ಬರಹಗಳೆಲ್ಲ ಪ್ರಕಾಶಕ್ಕೆ ಬರಬೇಕೆಂಬ ಆತುರವಿತ್ತು; ಭಾಷಾ ಸೇವೆಯೊಂದಿಗೆ ಯಶಸ್ಸೇ ಅವರ ಪರಮ ಗುರಿಯಾಗಿತ್ತು. ಇದರಿಂದ ಜೀವನವೆಲ್ಲ ಅವರು ನರಳಿ ಬೆಂದರೂ, ಮರಣಾನಂತರ ಪಂಪ, ರನ್ನ, ಲಕ್ಷ್ಮೀಶ, ಕುಮಾರವ್ಯಾಸರ ಯಶಸ್ಸೇ ಈ ಕವಿಗೂ ಪ್ರಾಪ್ತವಾಯಿತು. ಹೆಬ್ಬಾರರು ಕೇವಲ ಜ್ಞಾನಪಿಪಾಸೆಯ ಸಂತೃಪ್ತಿಗಾಗಿ ಮಾತ್ರ ತಪಸ್ವಿಗಳಾದರಲ್ಲದೆ, ಸಂಪತ್ತು ಮತ್ತು ಯಶಸ್ಸಿಗಾಗಿ ಒಂದು ಕವಡೆಯ ಬೆಲೆಯನ್ನೂ ಕೊಟ್ಟಂತೆ ಕಾಣುವುದಿಲ್ಲ. ಅವರಿಗೆ ಭಾವೋದ್ವೇಗವಾದಾಗ ಒಂದೋ ಹಲವೋ ಕವಿತೆಗಳನ್ನು ಸರಸರನೆ ಬರೆದು ನೆಮ್ಮದಿ ಪಡೆಯುತ್ತಿದ್ದರು. ಅವರ ಜೀವನದ ಕೊನೆಯ ಕಾಲವನ್ನು ಭಾಗವತದ ಜಡಭರತನ ಜೀವನಕ್ಕೆ ಹೋಲಿಸಿದರೆ ಅತಿಶಯವಾಗಲಿಕ್ಕಿಲ್ಲ. ಆ ಕಾಲದಲ್ಲಿ ಅವರು ತಮ್ಮ ಧರ್ಮಪತ್ನಿಯನ್ನು 'ನೀವು' ಎಂದು ಗೌರವದಿಂದಲೇ ಸಂಬೋಧಿಸುತ್ತಿದ್ದರಂತೆ! ಇವರ ಅಮೋಘ ಬರಹಗಳೆಲ್ಲ ಒಂದು ದಿನ ಬೆಳಕಿಗೆ

ಬಂದು ಅವರಿಗೆ ಯಶಸ್ಸು ತರುವುದರಲ್ಲಿ ಸಂಶಯವಿಲ್ಲ. ಆಗ ಕನ್ನಡಿಗರು ಸುಂದಳಿಕೆ ಕವಿಯ ನಾಮದೊಂದಿಗೆ ಅವರ ಗುರು ಹಬ್ಬಾರರ ಪುಣ್ಯನಾಮವನ್ನು ಉಚ್ಚರಿಸಿ ಮುದಿತಾಂತಃಕರಣಗಳಾಗಿಯೇ ಆಗುವರು. ಅದೂ ಒಂದು ಕನ್ನಡಿಗರ ಸುದಿನ!

*

ಕುಂದಾಪುರ ತಾಲೂಕಿನ ಬವಲಾಡಿಯಲ್ಲಿ ಶಂಭು ಹೆಬ್ಬಾರರು ಮಹಾಲಕ್ಷ್ಮಿಯೆಂಬ ತಮ್ಮ ಮಡದಿಯೊಂದಿಗೆ ಸಂಸಾರ ಮಾಡಿಕೊಂಡಿದ್ದರು. ಈ ದಂಪತಿಯಲ್ಲಿ ಹೆಬ್ಬಾರರು ಹೆಚ್ಚು ವಿದ್ಯಾವಂತರಾಗಿರಲಿಲ್ಲ. ಆದರೆ ಇವರ ಪತ್ನಿ ಮಹಾಲಕ್ಷ್ಮಮ್ಮನು ಓದು ಬರಹ ಚೆನ್ನಾಗಿ ತಿಳಿದಿದ್ದರಲ್ಲದೆ ಉತ್ತಮ ಕವಿತಾ ಶಕ್ತಿಯುಳ್ಳವರಾಗಿದ್ದರು. ಆಗ ಸ್ತ್ರೀ ವಿದ್ಯಾಭ್ಯಾಸದ ನೆರಳೂ ಈ ಪ್ರಾಂತಕ್ಕೆ ಳಿದಿರಲಿಲ್ಲ ಎಂಬುದನ್ನು ಯಾರೂ ಮರೆಯಬಾರದು. ಮಹಾಲಕ್ಷ್ಮಮ್ಮನ ತಂದೆ ವೆಂಕಟರಮಣ ಭಾಗವತರೆಂಬವರು ದಶಾವತಾರ ಮೇಳದಲ್ಲಿ ಭಾಗವತರಾಗಿದ್ದು, ಸ್ವತಃ ಕವಿಗಳಾಗಿದ್ದರು. ಇವರ ಪತ್ನಿ ಸುಬ್ಬಮ್ಮ ಎಂಬವರಿಗೂ ಅಕ್ಷರಜ್ಞಾನ ಚೆನ್ನಾಗಿದ್ದು ಕವಿತಾ ಚಾತುರ್ಯವಿತ್ತು. ಹೀಗೆ ತಂದೆ ತಾಯಿಗಳಿಬ್ಬರೂ ಹುಟ್ಟುಕವಿಗಳಾಗಿರುವಾಗ ಇವರ ಪುಣ್ಯೋದರದಲ್ಲಿ ಜನಿಸಿದ ಮಹಾಲಕ್ಷ್ಮಿಯೂ ಕವಿಯತ್ರಿಯಾಗದಿರುವುದು ಹೇಗೆ ಸಾಧ್ಯ? ಆದರೆ ಈ ಮಹಾತಾಯಿಯ ಪತಿಯಾದ ಶಂಭು ಹೆಬ್ಬಾರರು ವ್ಯವಸಾಯದಲ್ಲೇ ತಲೆಯುಳ್ಳರಾಗಿದ್ದಾಗ ಮಹಾಲಕ್ಷ್ಮಮ್ಮನು ಕವಿತೆಗಳ ಕನಸಿನಲ್ಲೇ ದಿನಗಳೆಯುತ್ತಿದ್ದರು. ಆಗ ಅವರು ಹಾಡಿದ್ದೇ ಪ್ರಾಸ ಮತ್ತು ತಾಳಬದ್ಧವಾದ ಸುಂದರ ಹಾಡಾಗಿರುತ್ತಿತ್ತು. ಈ ಕವಿಯಿತ್ರಿಯು ರಾವಣಭಂಗ ಕಂಪಾಸುರನ ಕಾಳಗವೆಂಬ ಯಕ್ಷಗಾನವನ್ನು ಬರೆದಿದ್ದಾರೆ. ಇದನ್ನೇ ಮುಂದೆ ಇವರ ಮಗ ವೆಂಕಟರಮಣ ಹೆಬ್ಬಾರರು ತಿದ್ದಿ ಪುಷ್ಟೀಕರಿಸಿದರು.

ಮಹಾಲಕ್ಷ್ಮಮ್ಮನಿಗೆ ಕ್ರಮೇಣ ಪಾರ್ವತಿಯಮ್ಮ, ವೆಂಕಟರಮಣ ಹೆಬ್ಬಾರ, ಸರಸ್ವತಿಯಮ್ಮ, ಹಿರಿಯಣ್ಣ ಹೆಬ್ಬಾರ ಮತ್ತು ಸೀತಾರಾಮ ಹೆಬ್ಬಾರರೆಂಬ ಐವರು ಮಕ್ಕಳಾದರು. (ಈಗ ಭಾಷಾ ಸೇವೆ ಮಾಡುತ್ತಿರುವ ಶ್ರೀ ಬಿ. ಎಚ್. ಶ್ರೀಧರ, ಇವರು ಈ ಸೀತಾರಾಮ ಹೆಬ್ಬಾರರ ಚಿರಂಜೀವರು. ಶ್ರೀ ಗೋಪಾಲಕೃಷ್ಣ ಅಡಿಗ ಪಾರ್ವತಿಯಮ್ಮನ ಮೊಮ್ಮಗ.) ಇವರಲ್ಲಿ ಶಾ. ಶ. ೧೮೫೫ (ಕ್ರಿ.ಶ. ೧೮೩೩)ನೆಯ ಅಂಗಿರಸ ಸಂವತ್ಸರದ ತುಲಾ ಮಾಸ ದಿನ, ೫, ಕಾರ್ತಿಕ ಶುದ್ಧ ೫, ಮಂಗಳವಾರ ಹಗಲುಗಳಿಗೆ ೧೧ರ ಸಮಯ, ಬವಲಾಡಿಯಲ್ಲಿರುವ ತಮ್ಮ ಮನೆಯಲ್ಲಿ ವೆಂಕಟರಮಣ ಹೆಬ್ಬಾರರು ಜನಿಸಿದರು. ಇವರು ತಮ್ಮ ಜಾತಕವನ್ನು ತಾವೇ ವಾರ್ಧಿಕ ಷಟ್ಪದಿಯಲ್ಲಿ ಬರೆದಿಟ್ಟಿದ್ದಾರೆ.

ವೆಂಕಟರಮಣ ಹೆಬ್ಬಾರರಿಗೂ ಇವರ ಇಬ್ಬರು ತಮ್ಮಂದಿರಿಗೂ ಪ್ರಾಥಮಿಕ ಶಿಕ್ಷಣಕ್ಕೆ ಇವರ ತಾಯಿಯೇ ಗುರುವಾದರು. ಬಾಲ್ಯದಲ್ಲೇ ವೆಂಕಟರಮಣ ಹೆಬ್ಬಾರರಿಂದ ರಚಿತವಾದ ದಾಸ ಕೀರ್ತನೆಯಂಥ ಭಕ್ತಿಗೀತೆಗಳು ಈಗಲೂ ಬವಲಾಡಿ, ಬಿಜೂರು, ಮೊಗೇರಿ, ಹೊಳಕೋಟೆ ಮೊದಲಾದ ಕಡೆಗಳಲ್ಲಿ ಪ್ರಚಾರದಲ್ಲಿವೆ. ಹೀಗೆ ಹೆಬ್ಬಾರರು ಹತ್ತು ಹನ್ನೆರಡು ವರ್ಷಗಳವರೆಗೆ ತಾಯಿಂದಲೇ ವಿಷಯ ಜ್ಞಾನ ಮಾಡಿಕೊಳ್ಳುತ್ತಿದ್ದು, ಅನಂತರ ಒಂದೆರಡು ವರ್ಷ ಇವರ ಅಕ್ಕನ ಗಂಡ ಮೊಗೇರಿ ಮಂಜುನಾಥ ಅಡಿಗಳಲ್ಲಿ ವೈದಿಕ ವಿದ್ಯೆಯಾದ ಕಾಲೋಚಿತ ವೈದಿಕ ಸೂಕ್ತ, ರುದ್ರ, ಚಮೆ, ಪವಮಾನ, ದೇವ ಪೂಜಾಮಂತ್ರ ಮೊದಲಾದವುಗಳನ್ನು ಅಭ್ಯಾಸ ಮಾಡಿದರು. ಈ ಕುಟುಂಬದವರಲ್ಲಿ ಜನಿಸಿದವರಲ್ಲಿ ಒಂದು ಚಮತ್ಕಾರವೆಂದರೆ– ಲಕ್ಷ್ಮಮ್ಮನ ಗಂಡು ಮಕ್ಕಳೈವರೂ ಜನ್ಮತಃ ಕವಿಗಳು.

ಹೆಬ್ಬಾರರು ಬಾಲ ವಿದ್ಯಾಭ್ಯಾಸವನ್ನು ತಾಯಿಯಿಂದ ಪಡೆಯುವಷ್ಟು ಪಡೆದು, ಉಳಿದ ಹೆಚ್ಚಿನ ಜ್ಞಾನವನ್ನೆಲ್ಲ ಸ್ವಪ್ರಯಾಸದಿಂದಲೇ ಸಂಪಾದಿಸಿದರು. ವೆಂಕಟರಮಣ ಹೆಬ್ಬಾರರ ತಮ್ಮನಾದ ಹಿರಿಯಣ್ಣ ಹೆಬ್ಬಾರರು ತಮ್ಮ ಹುಟ್ಟು ಕವಿತಾಶಕ್ತಿಯ ಬಲದಿಂದ ವಿಶ್ವಾಮಿತ್ರ ಪ್ರತಾಪ, ಪಾಂಡವ ವಿಜಯ ಮೊದಲಾದ ಯಕ್ಷಗಾನಗಳನ್ನು ಬರೆದು ಕುಂದಾಪುರ ತಾಲೂಕಿನಲ್ಲೇ ತಾಳೆ ಮದ್ದಳೆಯ ಪ್ರಸಿದ್ಧ

ಅರ್ಥವಾರಿಗಳಾಗಿದ್ದರು. ಇವರ ಅನುಸಂಧಾನದ ಕೌರವನ ಅರ್ಥದ ಕುರಿತು ಇನ್ನೂ ಅದನ್ನು ಕಂಡು ಕೇಳಿದವರು ಬಾಯಿ ತುಂಬಾ ಹೊಗಳುತ್ತಾರೆ. ಇತ್ತ ಭಾವನಲ್ಲಿ ವೆಂಕಟರಮಣ ಹೆಬ್ಬಾರರು ತಾವು ಅಭ್ಯಾಸ ಮಾಡುತ್ತ ಅಕ್ಕನ ಮಕ್ಕಳಾದ ಮಹಾಲಕ್ಷ್ಮಿಯಮ್ಮ ಮತ್ತು ಶ್ರೀ ರಾಮಪ್ಪ ಅಡಿಗಳಿಗೆ ತಾವೇ ಗುರುವಾಗಿ ಓದು ಬರಹ ಕಲಿಸುತ್ತಿದ್ದರು. ಆಗಲೇ ಅವರು ತಮ್ಮ ಭಾವನಿಂದ ಜ್ಯೋತಿಷ್ಯದ ಕೆಲವು ಮುಖ್ಯ ಮಾಹಿತಿಯನ್ನು ತಿಳಿದುಕೊಂಡರು.

■

ಸ್ವಲ್ಪ ಸಮಯದ ನಂತರ ಡೇರೆ ಬಯಲು ವಾಸುದೇವರಾಯರು ಬೈಂದೂರಿನ ರೆವೆನ್ಯೂ ಇನ್ಸ್‌ಪೆಕ್ಟರರಾಗಿ ಬಂದರು. ಅವರಿಗೆ ಗುಮಾಸ್ತನಾಗಲು ಮನೆದೇವರ ಪೂಜೆ ಮಾಡಲು ಮತ್ತು ಸರ್ಕೀಟಿನ ಕಾಲದಲ್ಲಿ ಸಂಗಡ ಹೋಗಲು ಒಂದು ಚುರುಕು ಪ್ರಾಣಿಯ ಅಗತ್ಯವಿತ್ತು. ಅವರು ಮಂಜುನಾಥ ಅಡಿಗಳೊಡನೆ ಈ ಕುರಿತು ಮಾತುಕತೆ ನಡೆಸಿದರು. ಆಗ ಅಡಿಗಳು ತಮ್ಮ ನೆಂಟನೂ ಶಿಷ್ಯನೂ ಆದ ವೆಂಕಟರಮಣ ಹೆಬ್ಬಾರರು ಈ ಕೆಲಸಕ್ಕೆ ಯೋಗ್ಯರೆಂದು ಅವರನ್ನು ವಾಸುದೇವರಾಯರ ಮನೆಯಲ್ಲಿಟ್ಟರು. ಇಲ್ಲೇ ಹೆಬ್ಬಾರರು ಅವರಿಂದ, ಇಂಗ್ಲೀಷ್ ಜ್ಞಾನವನ್ನು ತಕ್ಕ ಮಟ್ಟಿಗೆ ಮಾಡಿಕೊಂಡು ಮುಂದೆ ಅದನ್ನೇ ಅವರು ವೃದ್ಧಿ ಮಾಡಿಕೊಂಡರು. ಇವರು ಅಮೂಲ್ಯವಾದ ಕೆಲವು ಆಂಗ್ಲ ವ್ಯಾಕರಣಗಳನ್ನು ಸಂಗ್ರಹಿಸಿದ್ದರು. ಇವರು ಆಂಗ್ಲ ಪದವೀಧರರು ಮಾತಾಡುವುದನ್ನು ಕೇಳಿ, ಹಾಗಲ್ಲ ಹೀಗೆ ಹೇಳಬೇಕು ಎನ್ನುತ್ತಿದ್ದರಂತೆ! ಅದೇ ಸಮಯದಲ್ಲಿ ಅಲ್ಲಿ ಕೆಲವರು ಸಂಸ್ಕೃತ ವಿದ್ಯೆ ಕಲಿಯುತ್ತಿರುವುದನ್ನು ಕೇಳಿ, ಅವರಿಗೂ ದೇವಭಾಷೆಯ ಅಭ್ಯಾಸದಲ್ಲಿ ಆಸಕ್ತಿ ಹುಟ್ಟಿ, ಭಾಂಡಾರಕರರ ಸಂಸ್ಕೃತ ಮೊದಲನೆಯ ಮತ್ತು ಎರಡನೆಯ ಪುಸ್ತಕ (ಸಂಸ್ಕೃತ-ಇಂಗ್ಲೀಷ್ ಪ್ರತಿ) ತರಿಸಿಕೊಂಡು ಸ್ವತಂತ್ರವಾಗಿ ಅಭ್ಯಾಸ ಮಾಡುತ್ತಾ ಬಂದರು. ಇವರಿಗೆ ಈ ಮೊದಲೇ ತಂದೆ ತೀರಿಹೋಗಿದ್ದರು. ಇದರಿಂದ ಇವರ ತಾಯಿಯು ಬವಲಾಡಿಯಲ್ಲಿರುವ ಬೇಸರಪಟ್ಟು ಉಳಿದ ಮಕ್ಕಳೊಂದಿಗೆ ಕೊಲ್ಲೂರಿನ ನಿರ್ವಾಣ ಕೊಪ್ಪಲು ಎಂಬಲ್ಲಿಗೆ ಬಂದು ವಾಸಿಸತೊಡಗಿದರು. ನಮ್ಮ ಹೆಬ್ಬಾರರು ರೆವೆನ್ಯೂ ಇನ್ಸ್‌ಪೆಕ್ಟರರ ಸರ್ಕೀಟಿನ ಕಾಲದಲ್ಲಿ ಕೊಲ್ಲೂರಿಗೆ ಬಂದಾಗ ತಮ್ಮ ಮನೆಗೆ ಹೋಗಿ ಬರುತ್ತಿದ್ದರು.

ಆಗ ಅಲ್ಲಿ ಬೆಳಕಲ್ಲು ಕುಪ್ಪಾಭಟ್ಟರೆಂಬ ಪಂಡಿತೋತ್ತಮರು ಕವಿತೆ, ಸಾಹಿತ್ಯ, ಗಣಿತ, ಸಂಸ್ಕೃತ, ಜ್ಯೋತಿಷ, ವೇದ, ಆಗಮ ಮೊದಲಾದ ಶಾಸ್ತ್ರವಿದ್ಯೆಯಲ್ಲಿ ಅಪೂರ್ವ ವಿದ್ವತ್ತುಳ್ಳವರಾಗಿದ್ದರು. ಹೆಬ್ಬಾರರಿಗೆ ಆ ವಿದ್ವಾಂಸರ ಪರಿಚಯವಾಗಿ ಸಂಸ್ಕೃತಾಭ್ಯಾಸದಲ್ಲಿ ತಮಗೆ ಸಂಶಯ ಬಂದುದನ್ನು ಅವರಿಂದ ಕೇಳಿ ತಿಳಿಯುತ್ತಿದ್ದರು ಹಾಗೂ ಗ್ರಹಗಣಿತ ಜ್ಞಾನವೂ ಕೆಲವು ಮಟ್ಟಿಗೆ ಅವರಿಂದಲೇ ಆಯಿತು. ಆಗಲೇ ಇವರ ತೈಲ ಬುದ್ಧಿಯು ಅವರಿಗೆ ವೈದಿಕ ಮತ್ತು ಲೌಕಿಕ ವಿದ್ಯೆಗಳೆರಡರಲ್ಲೂ ಅನುಪಮ ಪಾಂಡಿತ್ಯ ದೊರಕಿಸಿ ಕೊಟ್ಟಿತು. ಇವರು ಈ ಪ್ರತಿಭೆಯನ್ನೇ ನೆಚ್ಚಿ ಸ್ವತಂತ್ರವಾಗಿ ಕಾವ್ಯ, ವ್ಯಾಕರಣ, ತರ್ಕ, ಛಂದಸ್ಸು, ಉಪನಿಷತ್ತು, ಗಣಿತ ಮೊದಲಾದ ಗ್ರಂಥಗಳನ್ನು ಸಂಗ್ರಹಿಸಿ ಓದಿ ಜೀರ್ಣಿಸಿಕೊಂಡರು. ಇವರಿಗೆ ಇವುಗಳಲ್ಲಿ ಕೂಲಂಕಷ ಜ್ಞಾನವಿತ್ತಲ್ಲದೆ ಅಂಕಗಣಿತ, ಬೀಜಗಣಿತ ಮುಂತಾದ ಜಟಿಲ ಸಮಸ್ಯೆಗಳಲ್ಲೂ ವಿಶಾಲ ಜ್ಞಾನವಾಯಿತು. ಆಗಲೇ ಅವರಿಗೆ ಹಳಗನ್ನಡ ಮತ್ತು ಸಂಸ್ಕೃತದಲ್ಲಿ ವಿಶೇಷ ಪರಿಣತಿಯುಂಟಾಗಿ ಆಗಾಗ ಸಂದರ್ಭೋಚಿತವಾದ ಅನೇಕ ಶ್ಲೋಕ ಮತ್ತು ಪದ್ಯಗಳನ್ನು ರಚಿಸುತ್ತಾ ಇದ್ದರು.

ಆಗಲೇ ಇವರಿಂದ ರಚಿತವಾಗಿದ್ದ 'ದ್ರೌಪದೀ ಸತ್ಯಭಾಮಾ ಸಂವಾದ' ಎಂಬ ಪದ್ಯಗಳನ್ನು ಈ ಕಡೆಯ ವೇಶ್ಯಾವರ್ಗದವರು ಅಭ್ಯಾಸಮಾಡಿ, ತಾವು ನರ್ತಿಸುವಾಗಲೆಲ್ಲ ಹಾಡತೊಡಗಿದರು.

■

ವಾಸುದೇವರಾಯರಿಂದಲೇ ಹೆಬ್ಬಾರರಿಗೆ ಸರ್ವೆ ಮಾಡುವುದು, ನಕ್ಷೆ ತಯಾರಿಸುವುದು ಮುಂತಾದ ಜ್ಞಾನವೆಲ್ಲ ಆಗಿಹೋಗಿತ್ತು. ಹೀಗೆ ಐದಾರು ವರ್ಷಗಳನ್ನು ಹೆಬ್ಬಾರರು ಬೈಂದೂರಲ್ಲೇ ಕಳೆದರು. ಆಗ ಕುಂದಾಪುರದ ಹತ್ತಿರವಿದ್ದ ತಲ್ಲೂರು

—೧೧೦ನೇ ಪುಟಕ್ಕೆ

# ಎಲ್ಲ ಮಾನವರ ಸಮಾನತೆಯನ್ನು ಪ್ರಪಂಚಕ್ಕೆ ಎತ್ತಿ ತೋರಿಸಲು ಜೀವನವನ್ನೇ ಮುಡುಪಾಗಿಟ್ಟ ವ್ಯಕ್ತಿ

ಪ್ರತಿಯೊಬ್ಬರೂ ತಮ್ಮ ತಮ್ಮ ಹಕ್ಕಿಗಾಗಿ ಹೋರಾಡುತ್ತಿದ್ದ ಕಾಲದಲ್ಲಿ ದೀನ ದಲಿತರ ಉದ್ಧಾರಕ್ಕಾಗಿ ತಮ್ಮ ಜೀವನವನ್ನೆ ಮುಡುಪಾಗಿಟ್ಟಿದ್ದರು ಡಾ. ಅಂಬೇಡ್ಕರ್.

ಮಾನವ ನಿರ್ಮಿತ ಅಸ್ಪೃಶ್ಯತೆಯನ್ನು ತೊಲಗಿಸಲು ಹಾಗೂ ಪ್ರತಿಯೊಬ್ಬನೂ ತನ್ನ ಕಾಲ ಮೇಲೆ ನಿಂತು ಸಮಾಜದಲ್ಲಿ ಸರಿಸಮಾನರಂತೆ ಬಾಳಲು ನೆರವು ನೀಡಿದರು.

ಪ್ರತಿಯೊಬ್ಬನ ಏಳಿಗೆಗೂ ಸರಿ ಸಮಾನವಾದ ಅವಕಾಶ ಕಲ್ಪಿಸುವುದರ ಮೂಲಕ ಸಮಾನ ಹಕ್ಕುಗಳನ್ನು ನೀಡಿ ಕರ್ನಾಟಕ ಸರಕಾರ ಡಾ. ಅಂಬೇಡ್ಕರ ಅವರ ಧ್ಯೇಯವನ್ನು ಕಾರ್ಯರೂಪಕ್ಕೆ ತರುತ್ತಿದೆ.

ವಿವಿಧ ಕ್ಷೇತ್ರಗಳಲ್ಲಿ ಸೌಲಭ್ಯ ಕಲ್ಪಿಸಿ ರಾಜ್ಯ ಸರಕಾರ ಈ ಕಾರ್ಯ ಕೈಗೊಂಡಿದೆ.

**ವಿದ್ಯಾಭ್ಯಾಸ:**

ಆರುನೂರು ವಿದ್ಯಾರ್ಥಿನಿಲಯಗಳು. ೧೫೦ ವಸತಿ ಶಾಲೆಗಳು, ೭೫೦ ಶಿಶು ಹಾಗೂ ಮಹಿಳಾ ಕಲ್ಯಾಣ ಕೇಂದ್ರಗಳನ್ನು ತೆರೆದಿರುವುದಲ್ಲದೆ ವಿದ್ಯಾರ್ಥಿಗಳಿಗೆ ಶಿಷ್ಯವೇತನ. ಉತ್ತೇಜಿತ ಬಹುಮಾನ ನೀಡಿಕೆ ಮುಂತಾದ ಕಾರ್ಯಗಳಿಗಾಗಿ ಒಟ್ಟು ಹತ್ತು ಲಕ್ಷ ರೂಪಾಯಿಗಳಿಗೂ ಮಿಕ್ಕಿ ವೆಚ್ಚ ಮಾಡಲಾಗಿದೆ. ಇದರಿಂದ ಮೂರು ಲಕ್ಷ ವಿದ್ಯಾರ್ಥಿಗಳಿಗೆ ಪ್ರಯೋಜನ.

**ಆರ್ಥಿಕ ಉನ್ನತಿ:**

ಸರಕಾರ ರಚಿಸಿರುವ ಹರಿಜನ ಗಿರಿಜನ ಅಭಿವೃದ್ಧಿ ನಿಗಮ ಕಳೆದ ವರ್ಷ ೨೮೫೨ ಕುಟುಂಬಗಳಿಗೆ ಕ್ಷೀರಾಭಿವೃದ್ಧಿ ಕುರಿ ಸಾಕಾಣಿಕೆ, ವ್ಯವಸಾಯ, ರೇಷ್ಮೆ, ತೋಟಗಾರಿಕೆ ಚರ್ಮ ಕೈಗಾರಿಕೆ ಮುಂತಾದ ಉದ್ಯಮಗಳಲ್ಲಿ ತೊಡಗಲು ನೆರವಾಗಿದೆ. ಅಭಿವೃದ್ಧಿ ನಿಗಮ ಹಾಗೂ ವಿವಿಧ ಬ್ಯಾಂಕುಗಳು ಈ ಕಾರ್ಯಕ್ಕಾಗಿ ೧೬೦ ಲಕ್ಷ ರೂ. ಸಾಲ ಸೌಲಭ್ಯ ನೀಡಿವೆ ಈ ವರ್ಷ ಈ ಯೋಜನೆಯಲ್ಲಿ ೭೦೬ ಲಕ್ಷ ರೂ. ಸಾಲ ನೀಡುವ ಕಾರ್ಯಕ್ರಮವಿದೆ– ೨೦ ಸಾವಿರ ಕುಟುಂಬಗಳು ಲಾಭ ಪಡೆಯಲಿವೆ.

ಹರಿಜನ ಮಹಿಳೆಯರಿಗೆ ಹೊಲಿಗೆ ತರಬೇತಿಯೊಂದಿಗೆ ಮಾಹೆಯಾನ ೭೫ ರೂಪಾಯಿಗಳ ಶಿಷ್ಯವೇತನ ನೀಡಿಕೆ. ತರಬೇತಿಯ ನಂತರ ಹೊಲಿಗೆ ಯಂತ್ರಗಳ ಉಚಿತ ವಿತರಣೆ ಉದ್ಯೋಗ ಅವಕಾಶ.

ಸರಕಾರದ ಉದ್ಯೋಗ ಘಟಕ ಕೆಲಸಕ್ಕಾಗಿ ಕಾಯುತ್ತಿರುವ ಹರಿಜನ ಅಭ್ಯರ್ಥಿಗಳ ಹೆಸರನ್ನು ನೋಂದಾಯಿಸಿ ಉದ್ಯೋಗ ಕಲ್ಪಿಸುವುದರಲ್ಲಿ ನೆರವು ನೀಡುತ್ತಿದೆ.

## ಗೃಹ ನಿವೇಶನ ಮತ್ತಿತರ ಸೌಲಭ್ಯ.

ಗೃಹ ನಿವೇಶನ, ವಿದ್ಯುತ್ ಸೌಲಭ್ಯ, ಸಾಂಸ್ಕೃತಿಕ ಕಾರ್ಯಕ್ರಮ ಕಾನೂನು ನೆರವು ಮುಂತಾದ ಕಾರ್ಯಗಳಿಗಾಗಿ ಕಳೆದ ವರ್ಷ ೧೦ ಲಕ್ಷ ರೂಪಾಯಿಗಳಿಗೂ ಮಿಕ್ಕ ವೆಚ್ಚ.

ಹರಿಜನ ಗಿರಿಜನರ ವಿರುದ್ಧ ನಡೆಯುವ ಅಕೃತ್ಯಗಳನ್ನು ತಡೆಗಟ್ಟಿ ಅವರು ನಾಗರಿಕ ಹಕ್ಕುಗಳನ್ನು ಚಲಾಯಿಸುವಂತೆ ನೆರವು ನೀಡಲು ರಾಜ್ಯ ಸರಕಾರ ನಾಗರಿಕ ಹಕ್ಕು ಚಲಾವಣ ಘಟಕವೊಂದನ್ನು ರಾಜ್ಯದ ಗುಪ್ತಚಾರ ವಿಭಾಗದಲ್ಲಿ ತೆರೆದಿದೆ. ಇದರ ವಿಭಾಗ ಕಚೇರಿಗಳು ಬೆಂಗಳೂರು, ಮೈಸೂರು, ಬೆಳಗಾವಿ ಮತ್ತು ಗುಲ್ಬರ್ಗಗಳಲ್ಲಿ ಕಾರ್ಯ ನಿರ್ವಹಿಸುತ್ತಿದೆ.

ಸರಕಾರ ಕೈಗೊಂಡಿರುವ ವಿವಿಧ ಅಭಿವೃದ್ಧಿ ಕಾರ್ಯಗಳಲ್ಲಿ ಮುಖ್ಯವಾದುವು– ಹರಿಜನರ ಉದ್ಧಾರಕ್ಕಾಗಿ ೧೨೬ ಕೋಟಿ ರೂಪಾಯಿಗಳ ವಿಶೇಷ ಯೋಜನೆ ಹಾಗೂ ಗಿರಿಜನರ ಅಭಿವೃದ್ಧಿಗಾಗಿ ನಾಲ್ಕು ಕೋಟಿ ರೂಪಾಯಿಗಳ ಉಪಯೋಜನೆ. ಗಿರಿಜನರ ಜೀವನ ಮಟ್ಟವನ್ನು ಸುಧಾರಿಸಲು ರಾಜ್ಯ ಸರಕಾರ ಐದು ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆಗಳನ್ನು ಕಾರ್ಯರೂಪಕ್ಕೆ ತರುತ್ತಿದೆ.

**ಯೋಜನೆಯ ವಿಶೇಷ :**

ಹರಿಜನ ಗಿರಿಜನ ಕಾಲೋನಿಗಳಲ್ಲಿ ಶಾಲೆ ಹಾಗೂ ವಿದ್ಯಾರ್ಥಿ ನಿಲಯಗಳ ಸ್ಥಾಪನೆ.

ವಿದ್ಯಾಭ್ಯಾಸ ಹಾಗೂ ಕ್ರೀಡಾ ಕ್ಷೇತ್ರದಲ್ಲಿ ಧನ ಸಹಾಯ. ಶಿಷ್ಯ ವೇತನ ನೀಡಿಕೆ.

ಸ್ವಯಂ ಉದ್ಯಮದಲ್ಲಿ ತೊಡಗಲು ಅವಕಾಶ ಹಾಗೂ ಉತ್ತೇಜನಗಳು.

ನೀರಾವರಿ ಭಾವಿ, ಪಂಪು ಸೆಟ್ಟು, ಗೊಬ್ಬರ, ಬೀಜ ಮತ್ತಿತರ ವ್ಯವಸಾಯ ಸಲಕರಣೆಗಳ ಸೌಲಭ್ಯ,

**ಅಂಬೇಡ್ಕರ ಜಯಂತಿಯಂದು :**

ಈ ಮುತ್ಸದ್ದಿಯ ಗೌರವಾರ್ಥ ರಾಜ್ಯ ಸರಕಾರ ಬೆಂಗಳೂರಿನ "ವಿಧಾನ ವೀದಿ" ಯನ್ನು "ಅಂಬೇಡ್ಕರ ವೀದಿ" ಎಂದು ಪುನರ್ ನಾಮಕರಣ ಮಾಡುತ್ತಿದೆ

ಸದ್ಯದಲ್ಲೆ ಡಾ. ಅಂಬೇಡ್ಕರ ಅವರ ಪ್ರತಿಮೆಯನ್ನು ವಿಧಾನ ಸೌಧದ ಮುಂದೆ ಸ್ಥಾಪಿಸಲಾಗುವುದು.

ಈ ಸ್ಮಾರಕ ಮುಂದಿನ ಪೀಳಿಗೆಗೆ ಸ್ಫೂರ್ತಿದಾಯಕ.

ಕರ್ನಾಟಕ ವಾರ್ತೆ,
ನಂ. ೫. ಇನ್‌ಫೆಂಟ್ರಿ ರಸ್ತೆ, ಬೆಂಗಳೂರು.

ಡಿ ಐ ಪಿ 9/81–82

(೧೦೭ನೇ ಪುಟದಿಂದ)

ಗ್ರಾಮದ ಶಾನುಭೋಗರಾಗಿದ್ದ ಅನಂತರಾಯರು ತಾವು ರಜೆಯ ಮೇಲೆ ಹೋಗುವಾಗ ತಮ್ಮ ಸಂಬಂಧಿಕರಾಗಿದ್ದ ಹೆಬ್ಬಾರರಿಗೇ ಆ ಉದ್ಯೋಗವನ್ನು ಕೊಟ್ಟರು. ಇವರು ಶಾನುಭೋಗರಾಗಿದ್ದಾಗಲೂ ಪಾಪಭೀರುಗಳಾಗಿ, ನಿಸ್ವಾರ್ಥಿಗಳಾಗಿ ವರ್ತಿಸುತ್ತಿದ್ದರು. ಇದರಿಂದ ಕೆರಳಿ ಕೆಲವು ದುಷ್ಟರು ಇವರನ್ನು ಬಲಾತ್ಕಾರದಿಂದ ಆಚಾರಭ್ರಷ್ಟರನ್ನಾಗಿ ಮಾಡಲು ಒಬ್ಬಳು ಎಳೆಯ ಗಯ್ಯಾಳಿ ವೇಶ್ಯೆಯನ್ನು ಇವರು ಕೆರೆಯೊಂದರಲ್ಲಿ ಸ್ನಾನ ಮಾಡುತ್ತಿದ್ದಾಗ ಕಳುಹಿಸಿದರು. ಇದನ್ನು ತಿಳಿದ ಹೆಬ್ಬಾರರು ಆ ಆಳವಾದ ಕೆರೆಯಲ್ಲಿ ಕುತ್ತಿಗೆ ಮಟ್ಟದ ನೀರಿನಲ್ಲಿ ನಿಂತವರು ಆಕೆ ಆ ಸ್ಥಳದಿಂದ ಹೊರಟುಹೋದ ವಿನಾ ಮೇಲೆ ಬರಲೇ ಇಲ್ಲ. ಆಕೆಯು ಒಂದೆರಡು ಗಂಟೆ ತನ್ನ ಹಾವಭಾವಗಳನ್ನೆಲ್ಲ ತೋರಿಸಿ ಕೊನೆಗೆ ನಿರಾಶಳಾಗಿ ಹೊರಟುಹೋದಳು. ಆ ಮೇಲೆಯೇ ಇವರು ಚೆನ್ನಾಗಿ ಸ್ನಾನ ಮಾಡಿ ಮೇಲೆ ಬಂದರಂತೆ. ಆ ಸಮಯದಲ್ಲೇ ಕುಂದಾಪುರ ತಾಲೂಕಿನ ತಹಸೀಲ್‌ದಾರರು ತಾಲೂಕಿನ ನಕ್ಷೆಯನ್ನು ಕ್ರಮವಾಗಿ ಬರೆದುಕೊಟ್ಟವರಿಗೆ ಬಹುಮಾನ ಕೊಡಲಾಗುವುದೆಂದು ಪ್ರಕಟಿಸಿದ್ದರು. ಅಂದಿನ ಆ ಸ್ಪರ್ಧೆಯಲ್ಲಿ ಬಹುಮಾನವು ನಿರಾಯಾಸವಾಗಿ ಹೆಬ್ಬಾರರಿಗೇ ಸಿಕ್ಕಿತು. ಅವರು ಬಿಡಿಸಿಕೊಟ್ಟ ನಕ್ಷೆಯು ನಾಜೂಕು ಮತ್ತು ಕ್ರಮಬದ್ಧವಾಗಿ ಅತ್ಯುತ್ತಮವಾಗಿತ್ತು. ನಾವಿಂದು ನೋಡುವ ಕುಂದಾಪುರ ತಾಲೂಕಿನ ನಕ್ಷೆಯು ವೆಂಕಟರಮಣ ಹೆಬ್ಬಾರರಿಂದಲೇ ಪ್ರಥಮ ರಚಿತವಾದುದೆಂಬುದನ್ನು ಮರೆಯಬಾರದು.

ಆ ಕಾಲದಲ್ಲಿ ನಂದಳಿಕೆ ಲಕ್ಷ್ಮೀನಾರಾಯಣಪ್ಪನವರು ಕುಂದಾಪುರ ಹೈಸ್ಕೂಲಿಗೆ ಕುಸ್ತಿ ಮಾಸ್ತರರಾಗಿ ಬಂದಿದ್ದರು. ಅಲ್ಲಿದ್ದಾಗ ಅವರು ತಮಗೆ ಮಾರ್ಗದರ್ಶಕರಾಗಬಲ್ಲ ಯೋಗ್ಯ ಗುರುಗಳನ್ನು ಹುಡುಕುತ್ತಿದ್ದರು. ಅದೊಂದು ದಿನ ನಂದಳಿಕೆ ಕವಿಯೂ ಇವರಿಗಿಂತ ೭ ಎರಡು ವರ್ಷಕ್ಕೆ ಕಿರಿಯರಾದ ಹೆಬ್ಬಾರರೂ ಒಬ್ಬರನ್ನೊಬ್ಬರು ಸಂದರ್ಶಿಸಿದರು. ಲಕ್ಷ್ಮೀನಾರಾಯಣಪ್ಪನು ಹೆಬ್ಬಾರರೊಡನೆ ಕೆಲವೇ ಮಾತನಾಡಿ ಅವರ ಬುದ್ಧಿಶಕ್ತಿಗೆ ಬೆರಗಾಗಿ ತಮ್ಮಿಂದ ರಚಿತವಾದ ಶ್ರೀರಾಮ ಪಟ್ಟಾಭಿಷೇಕವನ್ನು (ಆಗ ಇದಕ್ಕೆ ಶ್ರೀ ರಾಮಾಭ್ಯುದಯವೆಂಬ ಹೆಸರಿತ್ತು) ಅವರಿಗೆ ನೀಡಿದರು. ಹೆಬ್ಬಾರರು ನಗುತ್ತಾ 'ಲಕ್ಷ್ಮೀನಾರಣಪ್ಪನವರೇ, ಸಾಹಿತ್ಯದ ಚರ್ವಿತ ಚರ್ವಣದಲ್ಲೇಕೆ ಹೊತ್ತು ಕಳೆಯುವಿರಿ? ಸಾಹಿತ್ಯಕ್ಕೆ ಈಗ ಹೊಸ ಮಾರ್ಗ ಬೇಕಾಗಿದೆ. ಪದ್ಯವು ಪಥ್ಯ - ಗದ್ಯವು ಹೃದ್ಯವು




"ಸಾಹೇಬರು ನಿಮ್ಮ ತಲೆ ಮೇಲೆ ಟ್ಯೂಬ್ ಲೈಟ್ ಹಾಕು ಅಂದು..."

ವೆಂದು ಅದರಲ್ಲಿನ ಎಷ್ಟೋ ಪದ್ಯಗಳನ್ನು ತಿದ್ದಿ ಗಾಂಭೀರ್ಯ ಮತ್ತು ರಸಕ್ಕೆ ಕೊರತೆ ಇದ್ದಲ್ಲಿ ತಾವೇ ಲೇಖನಿಯೋಡಿಸಿ ಪದ್ಯ ರಚಿಸಿ– 'ಮೈಸೂರಿನವರು ಈ ಕಾವ್ಯದ ಕರ್ತೃತ್ವದ ಕುರಿತು ರಂಪ ಮಾಡುತ್ತಾರೆ' ಎಂದರಂತೆ! ಅದುದೂ ಹಾಗೆಯೇ. ರಾಮಾನುಜಯ್ಯಂಗಾರರು ಹಬ್ಬಾರರ ಪ್ರತಿಭೆಯಿಂದ ಬೆಳೆದ ಪದ್ಯಗಳಿಗೆ ತಲೆ ಕೆರೆದುಕೊಂಡು, 'ಹಾಗಲ್ಲ ಹೀಗೆ, ಹೀಗಲ್ಲ ಹಾಗೆ' ಎಂದರು. ಆಗ ಲಕ್ಷ್ಮೀನಾರಾಣಪ್ಪನೂ ತಮ್ಮ ಕಾವ್ಯ ನಿರ್ಮಾಣ ಕಾರ್ಯದಲ್ಲಿ ತುಂಬಾ ಭಾರವನ್ನು ಹೊತ್ತ ಹಬ್ಬಾರರನ್ನು ಮರೆಯದೆ, ಜನ್ಮತಃ ಕವಯಿತ್ರಿಯಾದ ಹಬ್ಬಾರರ ತಾಯಿ ಮಹಾಲಕ್ಷ್ಮಮ್ಮನ ಹೆಸರಿನೊಂದಿಗೆ, ತಮಗೆ ಜನ್ಮವಿತ್ತ ಮಹಾಲಕ್ಷ್ಮಿಯನ್ನೂ ಸ್ಮರಿಸಿ, ಆ ಕಾರ್ಯಕ್ಕೆ ಮಹಾಲಕ್ಷ್ಮಿಯೇ ಕರ್ತೃವೆಂದು ಹೆಸರಿಟ್ಟರು. ಈ ಹಬ್ಬಾರರೇ ನಂದಳಿಕೆಯ ಮಹಾಕವಿಗೆ ಸಾಕಷ್ಟು ಸಂಸ್ಕೃತ ಜ್ಞಾನ ಮಾಡಿಕೊಟ್ಟರು.

ಹಬ್ಬಾರರು ಕೇವಲ ಸಂಸ್ಕೃತ ವ್ಯಾಕರಣವೊಂದನ್ನೇ ಹನ್ನೆರಡು ವರ್ಷ ಓದಿದರು. ಇವರು ಪ್ರಥಮ ನಂದಳಿಕೆಯವರ ರಾಮಾಭ್ಯುದಯದ ಪದ್ಯಗಳ ಶಬ್ದ ರೂಪವನ್ನು ಟೀಕಿಸಿದಾಗ ಶಬ್ದ ಮಣಿದರ್ಪಣ ಸೂತ್ರಗಳನ್ನೇ ಆ ಕವಿಯು ಮುಂದೊಡ್ಡಿ ಅದರ ರೂಪ ಸಾಧುವೆಂದು ಸಾರಿದರು. ಆಗ ಹಬ್ಬಾರರೂ ಕೇಶಿರಾಜನ ವ್ಯಾಕರಣವನ್ನು ಸಂಪೂರ್ಣ ಜೀರ್ಣಿಸಿಕೊಂಡಿದ್ದರು. ಅವರು ಅಷ್ಟಕ್ಕೇ ತೃಪ್ತರಾಗದೆ ನಂದಳಿಕೆಯವರನ್ನು ತಮ್ಮ ವ್ಯಾಕರಣದ ಬಲದಿಂದ ಕೆಣಕಿದರು. ಕೊನೆಗೆ ನಂದಳಿಕೆ ಮಹಾಕವಿಯು ಕನ್ನಡಕ್ಕೆ ಅಷ್ಟೆಲ್ಲ ನಿಯಮಗಳು ಬೇಕಾಗಿಲ್ಲ ಎಂದು ಹಾರಿಸಿಬಿಟ್ಟರೆಂದು ಪ್ರತೀತಿ! ಹಬ್ಬಾರರು ನಂದಳಿಕೆಯವರ ಪದ್ಯ ರಚನೆಯನ್ನು ಅಷ್ಟು ಮೆಚ್ಚುತ್ತಿರಲಿಲ್ಲ. ಆದರೆ ಅವರ ರಾಮಾಶ್ವಮೇಧದ ಗದ್ಯ ರಚನೆಯು ತನ್ನ ಶಕ್ತಿಯನ್ನೂ ಮೀರಿಸಿದೆ ಎಂದು ಸ್ಪಷ್ಟವಾಗಿ ಹೇಳುತ್ತಿದ್ದರು.

ಹಬ್ಬಾರರು ಶಾನುಭೋಗರಾಗಿರುವಾಗಲೇ ಮೈಸೂರಿನ ಸೊರಬದ ಹತ್ತಿರವಿದ್ದ ಅಂದಿಗೆಯ ಅಪ್ಪೂರಾಯರ ಮಗಳಾದ ಗೌರಮ್ಮನೊಂದಿಗೆ ಇವರ ವಿವಾಹವಾಯಿತು. ಈ ವಿವಾಹದಿಂದ ಈ ಅಪ್ರತಿಮ ವಿದ್ವಾಂಸರು ವೈರಾಗ್ಯ ಜೀವನವನ್ನು ಅಳಿಸತೊಡಗಿದರೆಂದು ಹೇಳುತ್ತಾರೆ! ವಿವಾಹವಾದೊಡನೆ ಇವರು ಶಾನುಭೋಗ ವೃತ್ತಿಯನ್ನು ಬಿಟ್ಟು ಅಂಗಡಿಗೆಗೆ ಹೋಗಿ ಮಾವನ ಮನೆಯಲ್ಲೇ ವಾಸಿಸತೊಡಗಿದರು. ಅಲ್ಲಿ ಇವರ ಪ್ರತಿಭೆಗೆ ಮೆಚ್ಚಿದ ಸರಕಾರಿ ಉದ್ಯೋಗಸ್ಥರು ಇವರನ್ನು ಒಂದು ಶಾಲೆಯ ಮುಖ್ಯೋಪಾಧ್ಯಾಯರನ್ನಾಗಿ ಮಾಡಿದರು. ಆಗಲೂ ಇವರ ಕವಿತಾ ರಚನೆಯು ಏಕಪ್ರಕಾರವಾಗಿ ನಡೆಯುತ್ತಿತ್ತು. ಅಲ್ಲಿಯ ಹಳ್ಳಿಯ ಹೈದರಿಗೆಲ್ಲ ಹಬ್ಬಾರರಲ್ಲಿ ತುಂಬಾ ಗೌರವವುಂಟಾಯಿತು.

ಈ ಕವಿಶ್ರೇಷ್ಠರಿಗೆ ಒಬ್ಬಳೇ ಮಗಳು. ಇವರನ್ನು ಪಾಂಡಿತ್ಯದ ಗಂಧ ಗಾಳಿ ಇಲ್ಲದ ಯುವಕರೊಬ್ಬರಿಗೆ ಮದುವೆಮಾಡಿಕೊಟ್ಟು ತಮ್ಮ ಕವಿತೆ ಮತ್ತು ಉಳಿದ ಲೇಖಗಳ ಸಂಗ್ರಹವನ್ನೆಲ್ಲ ಅವರ ವಶಕೊಟ್ಟಿದ್ದಾರೆಂದು ಜನರು ಹೇಳುತ್ತಾರೆ. ಇವರು ಮದಾಲಸಾ ಜೋಗುಳಕ್ಕೆ ಬರೆದ ಅದ್ವೈತಪರವಾದ ವ್ಯಾಖ್ಯಾನವು ಅತ್ಯುತ್ಕೃಷ್ಟವಾಗಿದ್ದು ಅದು ಈಗ ಅವರ ಸೋದರಿ ಸರಸ್ವತಿಯಮ್ಮನ ವಶವಿದೆಯೆಂದು ಇವರ ಸಂಬಂಧಿಕರು ಹೇಳುತ್ತಾರೆ. ಇವರ ಕೃತಿಗಳಲ್ಲಿ ಕೆಲವು ಗೆದ್ದಲು, ಜಿರಳೆಗಳ ಆಹಾರವಾದುವೆಂದೂ ಉಳಿದವುಗಳೇ ನಮ್ಮ ಹಬ್ಬಾರರ ವ್ಯಕ್ತಿತ್ವವನ್ನುಳಿಸಿದವೆಂದೂ ಹೇಳುವುದುಂಟು.

ಕರ್ನಾಟಕದ ನಾಟಕ ಕಂಪನಿಯೊಂದು ಒಮ್ಮೆ ಸೊರಬಕ್ಕೆ ಬಂತು. ಆ ನಾಟಕ ಮಂಡಳಿಯವರೊಡನಿದ್ದ ಒಂದು ಪುಸ್ತಕವನ್ನು ನೋಡಲು ಹಬ್ಬಾರರು ಬಯಸಿ, ಅವರನ್ನು ಕೇಳಿದರು. ಆಗ ಆ ಕಂಪನಿಯವರು ಹಬ್ಬಾರರೊಡನೊಂದು ನಾಟಕವನ್ನೇ ಆಡಿದರು. ಮೊದಲು ಅವರೆಲ್ಲಾ ಈ ಭೀಮಕಾಯದ ಶಾಂತಮೂರ್ತಿಯನ್ನು ಕಂಡು ಗೊಳ್ಳೆಂದು ನಕ್ಕು, 'ಗೊಡ್ಡು ಬ್ರಾಹ್ಮಣನಿಗೆ ನಾಟಕದ ವಿಚಾರವೇಕೆ?' ಎಂದು ತುಚ್ಛೀಕರಿಸಿ ಮಾತನಾಡಿದರು. ಆಗ ಹಬ್ಬಾರರ ಕರ್ತೃತ್ವಶಕ್ತಿಯು ಮಿಂಚಿನಂತೆ ಜಿಗಿದು 'ಇಂಥಾ ನೂರಾರು ಪುಸ್ತಕಗಳನ್ನು ನಾನೇ ರಚಿಸಬಲ್ಲೆ' ಎಂದಾಡಿಸಿತು.

ಆಗ ನಟನೊಬ್ಬರು ನಕ್ಕು, 'ಬ್ರಾಹ್ಮಣಾ, ಅದು ನೋಟವಿಕೆಯ ವ್ಯಾಪಾರದಷ್ಟು ಸುಲಭವಲ್ಲ. ಈಗಲೇ ನೀವು ಸರಸ್ವತಿಯ ಮೇಲೆರಡು ಪದ್ಯ

ಗಳನ್ನು ರಚಿಸಿ, ನೋಡುವ' ಎಂದನಂತೆ. ಕೂಡಲೇ ಅವರು ಸೊಂಟದಲ್ಲಿ ಸಿಕ್ಕಿಸಿಕೊಂಡ ಕಾಗದ ಮತ್ತು ಸೀಸದ ಕಡ್ಡಿಯನ್ನು ತೆಗೆದು

॥ ಕಂದ ॥

ಪಿಸುಣರ ನಿರ್ದಯರಂ ಕಡು
ಬೆಸನೆಗಳಂ ಸಾರ್ದು ಸೆಣಸುವತ್ಸಗೆ ಮೆಂದುಂ॥
ಬಸವಾಗದೆ ಗೆಲ್ದುರ್ಬಿದ
ಶಶಿಮುಖಿ ವಾಗ್ದೇವಿ ಸಲಹು ನಿಚ್ಚಂ
ಸಮ್ಮಂ ॥೧॥
ಚಂ॥ ಜಡರ ನೊರಲ್ದು ಮೆಟ್ಟಿದುರಹಂ
ಮದರಂ ಕಡೆನೋಂಕಿ ವಿದ್ಯೆಗು।
ಗ್ಗಡಿಪರ ನೊಕ್ಕಲಿಕ್ಕಿಕಡುಗಬ್ಬಿಗಳಂ
ತಡೆದಟ್ಟಿ ದರ್ಪದೊಳ್ ॥
ಜಡಜಭವಾಂಕದೊಳ್ ನಲಿವ ಭಾರತಿ
ಮನ್ಮುಖ ಸಂಸ್ಥೆಯಾಗಿ ಬಾ।
ಯ್ಬಡಿಕರ ಬಿಜ್ಜೆಗಬ್ಬಿಗಳ ಗೆಲ್ವದಟಂ ಪದೆ
ದಿತ್ತು ರಕ್ಷಿಸಾ ॥೨॥

ಎಂದು 'ಕಂತ ಪತ್ರದ ವೃಲುಮಗೆಡೆದಗ್ಗಳಿಕೆ'ಯಲ್ಲಿ ಬರೆದುಕೊಡಲು ನಟನು ತನ್ನ ಗರ್ವಕ್ಕಾಗಿ ನಾಚಿ, ಅವರಿಗೆ ತಮ್ಮಲ್ಲಿದ್ದ ಗ್ರಂಥ ಭಂಡಾರವನ್ನು ತೋರಿಸಿದುದಲ್ಲದೆ ತಾನು ಈ ಪದ್ಯಗಳನ್ನೇ ತಮ್ಮ ಪ್ರತಿಯೊಂದು ನಾಟಕದ ಆರಂಭದಲ್ಲೂ ಉಪಯೋಗಿಸಿಕೊಳ್ಳುವುದಾಗಿ ನಮ್ರತೆಯಿಂದ ಹೇಳಿದ.

•

ಹೆಬ್ಬಾರರಿಗೆ ಸೊರಬದಲ್ಲೇ ದೊಡ್ಡ ದೊಡ್ಡ ಸರಕಾರೀ ಉದ್ಯೋಗಕ್ಕೆ ಆಮಂತ್ರಣ ಬಂದರೂ, ಅವರು ವೈರಾಗ್ಯದಿಂದ ಉಪಾಧ್ಯಾಯ ವೃತ್ತಿಯೊಂದಿಗೆ ಎಲ್ಲ ನೌಕರಿಗಳನ್ನೂ ಬಿಟ್ಟು ಊರಿಗೆ ಬಂದರು. ಆಗ ಇವರ ತಾಯಿ ಕೊಲ್ಲೂರಿನ ವಾಸ್ತವ್ಯ ಬಿಟ್ಟು ಬವಲಾಡಿ ಹತ್ತಿರದ ಹೊಸಕೋಟೆಯಲ್ಲಿ ಮನೆಮಾಡಿಕೊಂಡಿದ್ದರು.

ಇವರು ಊರಿಗೆ ಬಂದ ಮೇಲೆ ತಮ್ಮ ಆಳಿಯಂದಿರಿಗೆ ಮತ್ತು ಕಲವರಿಗೆ ಭಾಂಡಾರಕರರ ಪುಸ್ತಕ ಪ್ರಕಾರ ಪಾಠ ಹೇಳಿದರು. ಅದೇ ವೇಳೆಯಲ್ಲಿ ಭಾಂಡಾರಕರರ ಎರಡನೆಯ ಪುಸ್ತಕದಲ್ಲಿರುವ ವ್ಯಾಕರಣ ನಿಯಮ ಮತ್ತು ಟಿಪ್ಪಣಿಗಳಿಗೆ ಪಾಣಿನಿಯ ವ್ಯಾಕರಣ ಸೂತ್ರಗಳನ್ನು ಎತ್ತಿ ಬರೆದು ವಿದ್ಯಾರ್ಥಿಗಳಿಗೆ ಸಂಸ್ಕೃತ ಪಾಠವು ಸುಲಭ ಮತ್ತು ಸರಳವಾಗುವಂತೆ ಮಾಡಿದರು. ಈ ಕಾಲದಲ್ಲೂ ಇವರಿಗೆ ಕನ್ನಡ ಮತ್ತು ಸಂಸ್ಕೃತ ಪದ್ಯ ರಚನೆಯಲ್ಲಿ ಬೇಸರ ಬಂದಿರಲಿಲ್ಲ. ಇದೇ ಸಮಯದಲ್ಲಿ ಐರೋಡಿ ಶಿವರಾಮಯ್ಯನವರು ಇವರ ಸಂದರ್ಶನಕ್ಕೆ ಬಂದು ಅವರಲ್ಲಿ ಎರಡು ದಿನ ನಿಂತು ಅವರ ಕೃತಿಗಳನ್ನೆಲ್ಲ ಪರಾಂಬರಿಸಿ ಹರ್ಷಪಟ್ಟಿದ್ದರು. ಆಗ ಹೆಬ್ಬಾರರಿಗೆ ೫೬ ವರ್ಷವಾಗಿತ್ತು. ಇವರು ಬರೆದ ಎಷ್ಟೋ ಹಾಡುಗಳೂ ಕೀರ್ತನೆಗಳೂ ಹಾಸ್ಯ ಪದ್ಯಗಳೂ ಶೃಂಗಾರ ಪದ್ಯಗಳೂ ಇನ್ನೂ ಅಲ್ಲಲ್ಲಿ ಸಿಕ್ಕುತ್ತಿವೆ.

ಹೆಬ್ಬಾರರು ಪುನಃ ಸೊರಬದ ಕಡೆಗೆ ಹೋಗಿ ನಿಂತು, ತಮ್ಮ ಕಡೆಗಾಲದಲ್ಲಿ ಮಗಳ ಮನೆಗೇ ಬಂದು ಚಿತ್ರಭಾನು ಸಂವತ್ಸರದಲ್ಲಿ ತಮ್ಮ ೭೦ನೆಯ ವಯಸ್ಸಿನಲ್ಲಿ ಸ್ವರ್ಗಸ್ಥರಾದರು.

ಈ ಮಹಾಶಯರಿಗೆ ಸಾಹಿತ್ಯ, ತರ್ಕ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ, ವೇದಾಂತ ಮೊದಲಾದವುಗಳಲ್ಲಿ ಅಗಾಧ ಪಾಂಡಿತ್ಯವಿದ್ದುದಲ್ಲದೆ ಶಿಲ್ಪ, ಚಿತ್ರ, ಸಂಗೀತಾದಿಗಳಲ್ಲೂ ಅದ್ಭುತ ಜ್ಞಾನವಿತ್ತೆಂದು ಅವರ ಒಡನಾಡಿಗಳು ಹೇಳುತ್ತಾರೆ. ಗುರುವಾದ ರಾಜಾಣ ಹಕ್ಕಿಯೊಂದು ಏಕಾಂತ ವಾಸವನ್ನೇ ಮೆಚ್ಚಿ ಕೊನೆಗೆ ಕಾಲನ ಅರಮನೆಯ ಅತಿಥಿಯಾಯಿತು; ಅದರ ಶಿಷ್ಯ ಸಂದಳಿಕೆ ಕವಿ ಕೋಕಿಲವು ತನ್ನ ರಾಮಾಶ್ವಮೇಧದಿಂದ ಕರ್ನಾಟಕ ಸಾಹಿತ್ಯವನಕ್ಕೆ ಚೈತ್ರ ಮಾಸವನ್ನು ತರಿಸಿತು. ✡

---

**ಓಕ್ಲೋಹೋಮಾದ ಬಾಯ್ಡ್ ಕ್ಯಾಬನಾ** ಎಂಬಾತ ತನ್ನ ಕಕ್ಕನಿಗೆ ೭,೨೦,೦೦೦ ಪದಗಳನ್ನೊಳಗೊಂಡ **ಪತ್ರವೊಂದನ್ನು ಬರೆದಿದ್ದ**. ಈ ಪತ್ರವನ್ನು ಬರೆಯಲು ಆತನಿಗೆ ೯ ತಿಂಗಳುಗಳೇ ಬೇಕಾದುವು. ಹಾಗಾಗಿ ಪ್ರಪಂಚದ ಅತಿ ದೀರ್ಘ ವೈಯಕ್ತಿಕ ಪತ್ರ ಇದು ಎಂದು ನಂಬಲಾಗಿದೆ.

# ಕುಮಾರಿ ಶೆರೆನ್

## ಆಸ್ಕರ್ ವ್ಯೆಲ್ಡರ್ 'ಓವರ್ ಲೋಡೆಡ್' ಕಾದಂಬರಿಯಿಂದ

ಸಂಗ್ರಹ : ಉರ್ಮಿಳಾ



# ಕುಮಾರಿ ಕರೆನ್

**ಕೃತಕ ಉಸಿರಾಟ ಯಂತ್ರದ ಆಧಾರದಿಂದ ಬದುಕಿದ್ದ ಅಂಗವಿಕಲ ಮಹಿಳೆ ಕರೆನ್ ಸ್ಲೋನ್. ಪರತಂತ್ರಳಾದರೂ ಸ್ವಾಭಿಮಾನಿ. ಒಳ್ಳೆಯ ಕವಿ ಹೃದಯ. ಸ್ನೇಹ, ಉತ್ಸಾಹದ ಮೂರ್ತಿ ಕರೆನ್ನಳ ಬಾಳಿನಲ್ಲಿ ಸುಖದ ಕ್ಷಣವೂ ಬಂತು. ಆದರೆ ಕೆಲ ದಿನಗಳಲ್ಲಿಯೇ ಮರಣಾಂತಿಕ ಕ್ಷಣವೂ ಎದುರಾಯಿತು. ಕ್ಯಾಲಿಫೋರ್ನಿಯದ ಕತ್ತಲೆ ಕರೆನ್ನಳನ್ನು ನುಂಗಿತು ಆಸ್ಕರ್ ವೈಲ್ಡ್ ಬರೆದ 'ಓವರ್ ಲೋಡ್' ಕಾದಂಬರಿಯ ಸಂಗ್ರಹವಿದು**

ಕ್ಯಾಲಿಫೋರ್ನಿಯಾ ನಗರದ ಬಹುಭಾಗ ಕತ್ತಲಲ್ಲಿ ಮುಳುಗಿತ್ತು. ನಗರ ವಿದ್ಯುಚ್ಛಕ್ತಿ ಸರಬರಾಜು ಸಂಸ್ಥೆಯ ಮುಖ್ಯ ಅಧಿಕಾರಿ ನಿಮ್‌ರಾಡ್ ಗೋಲ್ಡ್‌ಮನ್ ಆತಂಕಗೊಂಡು ಕಚೇರಿಯಲ್ಲಿ ಕುಳಿತಿದ್ದ. ಮುಖ್ಯ ಗುಮಾಸ್ತನೊಬ್ಬ ಮೇಜಿನ ಮೇಲೊಂದು ದೊಡ್ಡ ಭೂಪಟ ಹರಡಿಕೊಂಡು ನೋಡುತ್ತ ದೂರವಾಣಿಯಲ್ಲಿ ಅದೇನೋ ಚರ್ಚಿಸುತ್ತಿದ್ದ. ಆ ಭೂಪಟ ನಿಮ್‌ನ ಗಮನ ಸೆಳೆಯಿತು. ನಗರದ ಒಂದು ವಿಭಾಗದ ನಕ್ಷೆ ಅದು. ಅದರಲ್ಲಿ ಅಲ್ಲಲ್ಲಿ ಬಣ್ಣ ಬಣ್ಣದ ವೃತ್ತಾಕಾರದ ಗುರುತುಗಳಿದ್ದವು. ಮಾತನಾಡುವುದನ್ನು ಮುಗಿಸಿದ ನಂತರ ನಿಮ್ ಆ ವೃತ್ತಾಕಾರದ ಗುರುತುಗಳ ಬಗ್ಗೆ ಆತನನ್ನು ವಿಚಾರಿಸಿದ.

'ಅವು ಜೀವನಾಧಾರ ಯಂತ್ರಗಳನ್ನು ಇಟ್ಟುಕೊಂಡಿರುವ ಮನೆಗಳ ಗುರುತು. ಆ ಕೆಂಪು ವೃತ್ತ ಇರುವ ಮನೆಯಲ್ಲಿ ಉಸಿರಾಟ ನಿಯಂತ್ರಿಸುವ ಯಂತ್ರ. ಹಸಿರು ವೃತ್ತ ಇರುವ ಮನೆಯಲ್ಲಿ ಮೂತ್ರಜನಕಾಂಗದ ಡಯಾಲಿಸಿಸ್ ಯಂತ್ರ, ಹಳದಿ ವೃತ್ತ ಇರುವ ಮನೆಯಲ್ಲಿ ಮಗುವಿಗೆ ಆಮ್ಲಜನಕ ಒದಗಿಸುವ ಯಂತ್ರಗಳಿವೆ. ಎಲ್ಲ ವಿಭಾಗದ ಇದೇ ರೀತಿಯ ನಕ್ಷೆಗಳು ನಮ್ಮಲ್ಲಿವೆ. ಆ ಯಂತ್ರಗಳನ್ನು ಮನೆಗಳಿಗೆ ಅಳವಡಿಸಿದ ಆಸ್ಪತ್ರೆಯ ಸಿಬ್ಬಂದಿಯವರು ಈ ನಕ್ಷೆಗಳ ತಯಾರಿಕೆಯಲ್ಲಿ ನಮಗೆ ನೆರವು ನೀಡಿದ್ದಾರೆ' ಎಂದ ಆತ.

'ಓಹೋ. ಹೀಗೋ, ಈ ವಿಷಯ ನನಗೆ ತಿಳಿದೇ ಇರಲಿಲ್ಲ' ಎಂದ ನಿಮ್ ಕುತೂಹಲದಿಂದ ಭೂಪಟವನ್ನು ನೋಡತೊಡಗಿದ.

ಆ ಗುಮಾಸ್ತ ಮುಂದುವರೆಸಿದ: 'ಇಂಥ ಜೀವನಾಧಾರ ಯಂತ್ರಗಳು ವಿದ್ಯುತ್ ಪೂರೈಕೆ ನಿಂತ ಕೂಡಲೇ ಬ್ಯಾಟರಿ ಯಂತ್ರಗಳಾಗಿ ಪರಿವರ್ತನೆಗೊಳ್ಳುತ್ತವೆ. ಈ ರೀತಿ ವಿದ್ಯುತ್ ಪೂರೈಕೆ ನಿಂತಾಗಲೆಲ್ಲ ನಾವು ಆ ಮನೆಗಳಲ್ಲಿಯ ಪರಿಸ್ಥಿತಿಯನ್ನು ವಿಚಾರಿಸುತ್ತೇವೆ. ಅಲ್ಲೇನಾದರೂ ತೊಂದರೆ ಇದ್ದರೆ ಅಲ್ಲಿಗೆ ಒಂದು ಜನರೇಟರನ್ನು ಕೂಡಲೇ ರವಾನಿಸುತ್ತೇವೆ.'

'ಆದರೆ ನಮ್ಮಲ್ಲಿ ಅಷ್ಟೊಂದು ಜನರೇಟರ್

ಸೆಟ್ ಎಲ್ಲಿವೆ? ಅದೂ ಇಂಥ ಅಭಾವದ ದಿನಗಳಲ್ಲಂತೂ ಅವುಗಳ ಪೂರೈಕೆ ಸಾಧ್ಯವೇ ಇಲ್ಲ,' ಎಂದ ನಿವ್.

'ಅಷ್ಟೇ ಅಲ್ಲ, ಈ ಜನರೇಟರ್ ಕೊಂಡೊಯ್ಯಲು ಸಾಕಷ್ಟು ಸಿಬ್ಬಂದಿ ಕೂಡ ನಮ್ಮಲ್ಲಿಲ್ಲ. ಆದರೆ ಇಂದೇನೋ ನಮ್ಮ ಅದೃಷ್ಟ ಚೆನ್ನಾಗಿತ್ತು. ಎಲ್ಲಾ ಕಡೆ ವಿಚಾರಿಸಿಯಾಯಿತು. ಯಾರಿಗೂ ತೊಂದರೆಯಾಗಿಲ್ಲವಂತೆ. ಈಗ ಇಂಥ ಮನೆಗಳಲ್ಲೆಲ್ಲ ವಿದ್ಯುತ್ ಸರಬರಾಜು ಮತ್ತೆ ಆರಂಭವಾಗಿದೆ.'

ಹತ್ತು ಹಲವಾರು ತಾಪತ್ರಯಗಳ ನಡುವೆಯೂ ಸಣ್ಣದೆನಿಸಿದರೂ ಮಾನವೀಯವಾದ ಸಮಸ್ಯೆಗೆ ಗಮನ ಕೊಟ್ಟು ಪರತಂತ್ರರನ್ನು ಗಮನಿಸುವ ಹಾಗೂ ಅವರಿಗೆ ನೆರವೀಯುತ್ತಿರುವ ತನ್ನ ಸಂಸ್ಥೆಯ ಬಗ್ಗೆ ನಿವ್ ಹೆಮ್ಮೆಯಿಂದ ಬೀಗಿದ. ನಕ್ಷೆಯ ಮೇಲೆ ಕಣ್ಣಾಡಿಸುತ್ತಿದ್ದ ಅವನಿಗೆ ಪರಿಚಿತ ರಸ್ತೆಯೊಂದರಲ್ಲಿನ ಕೆಂಪು ವೃತ್ತಾಕಾರದ ಗುರುತು ಕಂಡಿತು. ಆ ಮನೆಯ ಮುಂದೆ ಅವನು ಅನೇಕ ಸಲ ಕಾರಿನಲ್ಲಿ ಓಡಾಡಿದ್ದ. ಅದರ ಪಕ್ಕ ಬರೆದಿದ್ದ 'ಸ್ಲೋನ್' ಎಂಬ ಹೆಸರು ಜ್ಞಾಪಕಕ್ಕೆ ಬಂತು. ಅವನೇ ಕೃತ್ರಿಮ ಉಸಿರಾಟದ ವ್ಯಕ್ತಿ ಇರಬೇಕು. ಅವನು ಯಾರೋ ಹೇಗಿದ್ದಾನೋ ನೋಡಬೇಕು ಎಂದುಕೊಂಡ.

ಕುತೂಹಲ ತಡೆಯಲಾರದೇ ನಿವ್ ಒಮ್ಮೆ ಆ ಮನೆಗೆ ಹೋಗಿ ಕರೆಗಂಟೆಯೊತ್ತಿದ. ದಾಯಿಯಂತೆ ಉಡುಪು ಧರಿಸಿದ್ದ ಸದೃಢ, ಕಪ್ಪು ಹೆಂಗಸೊಬ್ಬಳು ಬಾಗಿಲು ತೆರೆದು, 'ಒಳಗೆ ಬನ್ನಿ' ಎಂದಳು. ನಂತರ, 'ನೀವೇನಾದರೂ ಮಾರಲು ಬಂದಿದ್ದೀರಾ?' ನಗುಮುಖದಿಂದಲೇ ವಿಚಾರಿಸಿದಳು.

'ಇಲ್ಲ. ನಾನು ಇದೇ ದಾರಿಯಾಗಿ ಹೋಗುತ್ತಿದ್ದೆ. ಸ್ಲೋನ್ ಅವರನ್ನು ...' ವಾಕ್ಯ ಮುಗಿಸುವ ಮೊದಲೇ ಆಕೆ, 'ಪರವಾಗಿಲ್ಲ ಬನ್ನಿ, ಕುಮಾರಿ ಕರೆನ್ ಸ್ಲೋನ್‌ಗೆ ಸಂದರ್ಶಕರೆಂದರೆ ಬಹಳ ಅಭಿಮಾನ' ಎಂದಳು. ಅವರು ವರಾಂಡದಲ್ಲಿ ಬಂದರು. ಅದರ ಒಂದು ಕಡೆಗೆ ಅಡಿಗೆಯ ಕೋಣೆ ಹಾಗೂ ಇನ್ನೊಂದು ಕಡೆಗೆ ಒಂದು ಕೊಠದಿಯಿತ್ತು. ಆ ಕೊಠಡಿಯ ಗೋಡೆಗಳ ಹಳದಿ ಹಸಿರು ಬಣ್ಣ ಹಿತಕರವಾಗಿತ್ತು. ಆ ಕೊಠಡಿಯ ಬಳಿ ನಿವ್‌ನನ್ನು ಕರೆದೊಯ್ದಳು ಆಕೆ. 'ನೀವು ಯಾರಾಗಿದ್ದರೂ ಸರಿ, ಒಳಗೆ ಬನ್ನಿ' ಸ್ವಾಗತಿಸಿತು ಒಂದು ಮೃದುಧ್ವನಿ.

'ಒಳಗೆ ಹೋಗಿ' ಎನ್ನುತ್ತ ಆ ಕಪ್ಪು ಹೆಂಗಸು, ವರಾಂಡದ ಹೊರ ಬಾಗಿಲು ಹಾಕಿದಳು. ನಿವ್ ಕೋಠಡಿಯೊಳಗೆ ಕಾಲಿರಿಸಿದ. ಗಾಲಿ ಕುರ್ಚಿಯಲ್ಲಿ ಕುಳಿತಿದ್ದ ಕರೆನ್ ಸ್ಲೋನಳನ್ನು ನೋಡಿದ್ದು ಅವನ ನೆನಪಿನಲ್ಲಿ ಎಂದೆಂದೂ ಹಸಿರಾಗಿ ಉಳಿಯಿತು.

ಕರೆನ್ ಮೂವತ್ತು ದಾಟಿದ ಹೆಂಗಸಾದರೂ ತಾರುಣ್ಯದಿಂದ ಕಂಗೊಳಿಸುತ್ತಿದ್ದ ಸುಂದರಿ. ವಯಸ್ಸು ಬಹುಶಃ ಮೂವತ್ತಾರಿರಬಹುದೆಂದು ನಿವ್ ಊಹಿಸಿದ್ದ: ಆದರೆ ಇನ್ನೂ ಮೂರು ವರ್ಷ ಹೆಚ್ಚಾಗಿತ್ತೆಂದು ನಂತರ ತಿಳಿಯಿತು. ನೀಳ ಮುಖ, ನಗೆಯೊಂದಿಗೆ ಅರೆ ತೆರೆದ ಮತ್ತೇರಿಸುವ ತುಂಬು ತುಟಿಗಳು, ಎದುರಿನವರನ್ನು ಸಂಪೂರ್ಣವಾಗಿ ಅರಿಯುವಂತೆ ನೇರವಾಗಿ ಅಳೆದು ನೋಡುತ್ತಿದ್ದ ಅಗಲವಾದ ನೀಲಿ ಕಣ್ಣುಗಳು; ತುಂಟತನವನ್ನು ಸೂಚಿಸುವ ಚಿಕ್ಕ ಮೂಗು; ಕುಂದಿಲ್ಲದ ಹೊಳಪುಳ್ಳ ಮೈ, ನೀಳವಾದ ಕೆಂಬು ಕೂದಲ ರಾಶಿ ಅವಳ ಮುಖವನ್ನು ಹೆಚ್ಚು ಅಂದಗೊಳಿಸಿತ್ತು. ಮಧ್ಯಕ್ಕೆ ಬೇರ್ಪಡಿಸಿದ ಕೇಶರಾಶಿ ಅವಳ ಹೆಗಲವರೆಗೂ ಇಳಿಬಿದ್ದು ಹೊಳೆಯುತ್ತಿತ್ತು. ಕೈಯನ್ನು ಮೆತ್ತೆ ಹಾಕಿದ ಕುರ್ಚಿಯ ಕೈಯ ಮೇಲಿಟ್ಟುಕೊಂಡಿದ್ದ ಆಕೆ ನೀಳ ಬೆರಳಿನ ಉಗುರುಗಳಿಗೆ ಸುಂದರವಾದ ಬಣ್ಣ ಹಾಕಿದ್ದಳು. ತಿಳಿನೀಲಿ ಬಣ್ಣದ ಆಕರ್ಷಕ ಉಡುಪು ತೊಟ್ಟಿದ್ದಳು.

ನಡುವಿನ ಹತ್ತಿರ ಉಬ್ಬಿದ್ದ ಅವಳ ಉಡುಪಿನಲ್ಲಿ ಅವಳ ಉಸಿರಾಟದ ಯಂತ್ರ ಅಡಗಿಕೊಂಡು ಅವಳಿಗಾಗಿ ಉಸಿರಾಡುತ್ತಿತ್ತು. ಅವಳ ವಸ್ತ್ರದೊಳಗಿಂದ ಬಂದ ಒಂದು ನಳಿಕೆಯನ್ನು ಅವಳ ಕುರ್ಚಿಯ ಹಿಂಭಾಗದಲ್ಲಿರುವ ಒಂದು ಪೆಟ್ಟಿಗೆಗೆ ಸೇರಿಸಲಾಗಿತ್ತು. ಕೃತ್ರಿಮ ಉಸಿರಾಟದ ಯಂತ್ರ (ಕಬ್ಬಿಣದ ಶ್ವಾಸಕೋಶ ಎಂದು ಕೆಲವರು ಹೇಳುತ್ತಾರೆ) ಸತತವಾಗಿ ಒಂದು ರೀತಿಯ ಸದ್ದು ಮಾಡುತ್ತಿತ್ತು. ಜೊತೆಗೆ

ಗಾಳಿಯನ್ನು ತೆಗೆದುಕೊಂಡು ಮತ್ತೆ ಬಿಡು ವಾಗ ಆಗುವ ಸದ್ದು ಕೂಡ ಸೇರಿತ್ತು. ಈ ಕ್ರಿಯೆಗೆಲ್ಲ ವಿದ್ಯುಚ್ಛಕ್ತಿಯನ್ನು ಪೂರೈಸಲು ಗೋಡೆಯಲ್ಲಿ ಒಂದು ಪವರ್ ಪಾಯಿಂಟ್ ಇತ್ತು.

'ಹಲೋ ಮಿಸ್ ಸ್ಲೋನ್, ನಾನು ಎಲೆಕ್ಟ್ರಿಕ್ ಮನುಷ್ಯ' ತನ್ನನ್ನು ತಾನೇ ಪರಿಚಯಿಸಿಕೊಂಡ ಆಕೆಯನ್ನು ತದೇಕಚಿತ್ತದಿಂದ ನೋಡುತ್ತಿದ್ದ ನಿವ್. 'ನನ್ನಂತೆ ನಿಮಗೂ ಪ್ಲಗ್ ಹಾಕಿ- ದ್ದಾರೋ ಅಥವಾ ಬ್ಯಾಟರಿಯಿಂದ ಬದುಕಿ ದ್ದೀರೋ?' ನಗುತ್ತಾ ಕೇಳಿದಳು ಸ್ಲೋನ್.

ನಿವ್ ನಕ್ಕನಾದರೂ ಅದೇನೋ ಒಂದು ರೀತಿಯ ಮುಜುಗರ ಹಾಗೂ ವಿಸ್ಮಯ ಅವ ನನ್ನು ಆವರಿಸಿತ್ತು.

'ದಯವಿಟ್ಟು ಹೇಳಿ, ಹೇಗೆ ಬದುಕಿದ್ದೀರಿ? ಆದರೆ ಮೊದಲು ಕುಳಿತುಕೊಳ್ಳಿ' ಎಂದಳು ಸುಂದರಿ.

'ಆಗಲಿ' ಎಂದು ನಿವ್ ಒಂದು ಆರಾಮಾ ಸನದಲ್ಲಿ ಒರಗಿದ. ಕರೆನ್ ಸ್ಲೋನ್ ತನ್ನ ತಲೆ ಯನ್ನು ಸ್ವಲ್ಪವೇ ವಾಲಿಸಿ ಬಳಿಯಲ್ಲಿದ್ದ ಒಂದು ಪ್ಲಾಸ್ಟಿಕ್ ನಳಿಕೆಗೆ ಬಾಯಿಯಿಟ್ಟು ಗಾಳಿಯನ್ನು ಊದಿದಳು. ಅವಳ ಗಾಲಿ ಕುರ್ಚಿ ಸರಕ್ಕನೆ ತಿರುಗಿ ನಿವ್ ಕುಳಿತಿದ್ದ ಕುರ್ಚಿಗೆದುರಾಗಿ ನಿಂತಿತು.

'ಅರೆ! ಇದೊಂದು ಪವಾಡ' ನಿವ್ ಉದ್ಗ ರಿಸಿದ.

'ನಾನಿನ್ನೂ ಎಷ್ಟೋ ಪವಾಡಗಳನ್ನು ಮಾಡ ಬಲ್ಲೆ' ಎಂದು ಹೇಳಿ ಮಾಡಿ ತೋರಿಸಿದಳು. ನಿವ್ ಬೆರಗಾಗಿ ನೋಡುತ್ತಿದ್ದ. ನಂತರ 'ನಾನಿಂಥ ಕುರ್ಚಿಯನ್ನು ನೋಡೇ ಇರಲಿಲ್ಲ' ಎಂದ.

'ನನ್ನ ಶರೀರದಲ್ಲಿ ತಲೆಯನ್ನು ಮಾತ್ರ ನಾನು ಅಲುಗಿಸಬಲ್ಲೆ ಅದಕ್ಕಾಗಿ ಅವಶ್ಯಕ ಕೆಲಸಗಳನ್ನು ಸಹಜವಲ್ಲದ ರೀತಿಯಲ್ಲಿ ನಡೆಸಬೇಕಾಗುತ್ತದೆ,' ಎಂದ ಕರೆನ್, 'ಅಂದ ಹಾಗೆ ನೀವು ನನಗೇನೋ ಹೇಳಬೇಕೆಂದಿದ್ದಿರಿ. ಮಾತಿನ ಜಾಡು ತಪ್ಪಿತು. ದಯ ವಿಟ್ಟು ಮುಂದುವರೆಸಿ, ಎಂದಳು.' ಸಹಜವಾಗಿ.

'ನಾನೇಕೆ ಇಲ್ಲಿ ಬಂದೆ ಎಂದು ನಿಮಗೆ ಹೇಳ ಬೇಕೆಂದಿದ್ದೆ. ನನಗೆ ನಿಮ್ಮ ಪರಿಚಯ ೧೫ ದಿನಗಳ ಹಿಂದೆ ನಗರದಲ್ಲಿ ಪೂರ್ಣ ಕತ್ತಲಾದ ದಿನ ಆಯಿತು. ಅದೂ ಒಂದು ನಕ್ಷೆಯಲ್ಲಿನ ಕೆಂಪು ವೃತ್ತದಲ್ಲಿ.'

'ನಕ್ಷೆಯಲ್ಲೇ?'

'ಹೌದು ನನಗೆ ಕುತೂಹಲ ತಡೆಯಲಾಗಲಿಲ್ಲ. ನಿಮ್ಮನ್ನು ನೋಡಲು ಬಂದೆ' ಎಂದ ನಿವ್ ಅವಳಿಗೆ ಆ ನಕ್ಷೆ ಆ ವೃತ್ತಗಳು ಇತ್ಯಾದಿ ವಿವರಿಸಿದ.

'ಯಾರಾದರೂ ನಮ್ಮ ಬಗ್ಗೆ ಯೋಚಿಸುತ್ತಾರೆ, ಗಮನಿಸುತ್ತಾರೆ ಎಂದು ತಿಳಿದಾಗ ಅದೆಷ್ಟು ಸಂತೋಷ ಅಲ್ಲವಾ? ಆ ದಿನ ನನಗಿನ್ನೂ ನೆನಪಿದೆ' ಎಂದಳು.

'ವಿದ್ಯುಚ್ಛಕ್ತಿ ಸರಬರಾಜು ನಿಂತಾಗ ನಿಮಗೆ ಹೇಗೆ ಅನ್ನಿಸಿತು?'

'ಭಯವಾಯಿತು. ಇದ್ದಕ್ಕಿದ್ದಂತೆ ನನ್ನ ಓದುವ ದೀಪ ಆರಿತು. ಉಳಿದೆಲ್ಲಾ ಎಲೆಕ್ಟ್ರಿಕ್ ಉಪ ಕರಣಗಳೂ ನಿಂತವು. ಆದರೆ ನನ್ನ ಯಾಂತ್ರಿಕ ಶ್ವಾಸಕೋಶ ನಿಲ್ಲಲಿಲ್ಲ. ಅದು ವಿದ್ಯುಚ್ಛಕ್ತಿ ಇಲ್ಲ ದಾಗ ಬ್ಯಾಟರಿಗೆ ಬದಲಾಯಿಸಿಕೊಳ್ಳುತ್ತದೆ.'

ನಿವ್ ಬ್ಯಾಟರಿಯ ಕಡೆ ಗಮನ ಹರಿಸಿದ. ಅದು ಕಾರುಗಳಲ್ಲಿ ಉಪಯೋಗಿಸುವಂಥ ೧೨ ವೋಲ್ಟ್ ಬ್ಯಾಟರಿ. ಅದನ್ನು ಕುರ್ಚಿಯ ಹಿಂಭಾಗಕ್ಕೆ ಅಳವಡಿಸಿದ್ದರು. ಕರೆನ್ ಮುಂದುವರೆ ಸಿದಳು: 'ಇಂಥ ವೇಳೆಯಲ್ಲಿ ಇರುವ ಒಂದೇ ಒಂದು ಯೋಚನೆ ಎಂದರೆ ವಿದ್ಯುಚ್ಛಕ್ತಿ ಯಾವಾಗ ಬರುತ್ತದೆ? ಮತ್ತು ಬ್ಯಾಟರಿ ಎಷ್ಟು ಕಾಲ ಕೆಲಸ ಮಾಡುತ್ತದೆ ಎಂಬುದು.'

'ಈ ಬ್ಯಾಟರಿ ಎಷ್ಟು ಗಂಟೆಗಳ ವರೆಗೆ ಕೆಲಸ ಮಾಡುತ್ತದೆ?'

'ಕುರ್ಚಿಯನ್ನು ಓಡಾಡಿಸದೇ ಕೇವಲ ಉಸಿ ರಾಟಕ್ಕೆ ಮಾತ್ರ ಪೂರ್ತಿ ಬಳಸಿದರೆ ಚಾರ್ಜ್ ಆಗಿರುವ ಬ್ಯಾಟರಿ ಆರು ಗಂಟೆಗಳ ವರೆಗೆ ಉಪ ಯೋಗಕ್ಕೆ ಬರುತ್ತದೆ. ಆದರೆ ನಾನು ವ್ಯಾಪಾರಕ್ಕೆ ವಿಹಾರಕ್ಕೆ ಹೋದಾಗಲೆಲ್ಲ ಬ್ಯಾಟರಿ ಬಹಳ ಉಪಯೋಗಿಸುತ್ತೇನಲ್ಲ. ಹೀಗಾಗಿ ಬೇಗ ಬದ ಲಾಯಿಸಬೇಕಾಗುತ್ತದೆ.'

'ಅಂದರೆ ವಿದ್ಯುಚ್ಛಕ್ತಿ ನಿಂತಾಗ......'

'ಜೋಸಿ-ಅಂದರೆ ನಿಮಗೆ ಮೊದಲು ಸಿಕ್ಕಿದ ಳಲ್ಲಾ ಅವಳು ಬೇಗ ಸಹಾಯಕ್ಕೆ ಬರುತ್ತಾಳೆ.'

'ಆ ಯಂತ್ರದ ಬಗ್ಗೆ ನೀವು ಬಹಳ ತಿಳಿದು ಕೊಂಡಿದ್ದೀರಿ.'

'ಅದೇ ನನ್ನ ಜೀವಾಧಾರ. ನಿಮಗೂ ಇಂಥದೇ ಆಧಾರವಿದ್ದಿದ್ದರೆ ನೀವು ತಿಳಿದುಕೊಳ್ಳುತ್ತಿರಲಿಲ್ಲವೆ?'

'ಹೌದು, ನಾನೂ ತಿಳಿದುಕೊಳ್ಳುತ್ತಿದ್ದೆನೆಂದು ಕಾಣುತ್ತೆ. ಅಂದ ಹಾಗೆ ನೀವೆಂದಾದರೂ ಒಂಟಿಯಾಗಿದ್ದೀರಾ?'

'ಎಂದೂ ಇಲ್ಲ. ದಿನದ ಮುಕ್ಕಾಲು ವೇಳೆಯೆಲ್ಲಾ ಜೋನಿ ನನ್ನ ಬಳಿಯಲ್ಲೇ ಇರುತ್ತಾಳೆ. ಅವಳಿಗೆ ಸಾಧ್ಯವಾಗದಾಗ ಬೇರೆ ಇನ್ನಿಬ್ಬರಿದ್ದಾರೆ. ಅಲ್ಲದೆ ಈ ಕಟ್ಟಡದ ಕಾವಲುಗಾರ ಕೂಡ ಬಹಳ ಒಳ್ಳೆಯವನು. ನನ್ನನ್ನು ನೋಡಲು ಬರುವವರನ್ನು ಅವನು ತನಗೆ ಸರಿಯೆನಿಸಿದರೆ ಮಾತ್ರ ಒಳಗೆ ಬಿಡುತ್ತಾನೆ. ನೀವು ಅವನ ಪರೀಕ್ಷೆಯಲ್ಲಿ ಉತ್ತೀರ್ಣರಾದಿರಿ,' ಎಂದಳು ನಗುತ್ತಾ.

ಅವರಿಬ್ಬರೂ ಹಳೆಯ ಸ್ನೇಹಿತರಂತೆ ಹರಟೆ ಹೊಡೆಯುತ್ತಾ ಕುಳಿತುಬಿಟ್ಟರು.

ಸ್ಯಾಕ್ ವ್ಯಾಕ್ಸಿನ್ ಹಾಗೂ ಸ್ಯಾಬಿನ್ ವ್ಯಾಕ್ಸಿನ್ ಕಂಡುಹಿಡಿಯುವ ಕೇವಲ ಒಂದು ವರ್ಷದ ಮೊದಲು ಅಮೇರಿಕದಲ್ಲಿ ಹರಡಿದ ಪೋಲಿಯೋ ರೋಗ ಕರೆನ್ ಸ್ಲೋನಳನ್ನು ಈ ಸ್ಥಿತಿಗೆ ತಂದ ವಿಷಯ ಮಾತುಕತೆಯ ನಡುವೆ ತಿಳಿಯಿತು. 'ಆ ವಿಷಯಗಳು ಇದೇ ದೇಶದಿಂದ ಪೋಲಿಯೋ ರೋಗವನ್ನು ಓಡಿಸಿದ್ದಾದರೂ ನನಗೆ ರೋಗ ಸ್ವಲ್ಪ ಮುಂಚೆ ತಟ್ಟಿತು.' ಆಕೆ ಸರಳವಾಗಿ ಹೇಳಿದ್ದು ನಿರ್ಮಲ ಹೃದಯ ಕಲಕಿತು. 'ಆ ಒಂದು ವರ್ಷದ ಬಗ್ಗೆ ನೀವು ಬಹಳ ಚಿಂತಿಸುತ್ತೀರಾ?' ಎಂದು ಕೇಳಿದ.

'ಹೌದು ಮೊದಲು ಬಹಳ ಚಿಂತಿಸುತ್ತಿದ್ದೆ. ಕೆಲವೊಮ್ಮೆ ಆ ಒಂದು ವರ್ಷದ ಅಂತರಕ್ಕಾಗಿ ಅಳುತ್ತಿದ್ದೆ. ಆ ಕೊನೆಯ ಕೆಲವರಲ್ಲಿ ನಾನೂ ಒಬ್ಬಳಾಗಬೇಕಿತ್ತು ಎಂದು ನನ್ನನ್ನು ನಾನೇ ಕೇಳಿಕೊಳ್ಳುತ್ತಿದ್ದೆ. ನಂತರ ಯೋಚಿಸುತ್ತಿದ್ದೆ– ಆ ವ್ಯಾಕ್ಸಿನ್ ಇನ್ನೊಂದು ವರ್ಷ ಮೊದಲೇ ಬಂದಿದ್ದರೆ ಎಲ್ಲಾ ಹೇಗೆ ಬದಲಾಗುತ್ತಿತ್ತು! ನಾನೂ ನಡೆಯಬಹುದಿತ್ತು, ಕುಣಿಯಬಹುದಿತ್ತು, ಬರೆಯಬಹುದಿತ್ತು, ಕೈಗಳನ್ನು ಬಳಸಬಹುದಿತ್ತು...'

ಒಮ್ಮಿಂದೊಮ್ಮೆಲೆ ಅವಳ ಮಾತು ನಿಲ್ಲಿ




"ಅವರ ಜತೆ ಫಾರಿನ್ನಿಗೆ ಹೋಗಬೇಕೂಂತ ಜಾಬ್ ಮಾಡಿಸ್ಕೊಂಡೆ. ನಮ್ಮೆಜಮಾನರ ಟೂರನ್ನ ಕ್ಯಾನ್ಸಲ್ ಮಾಡಿಬಿಟ್ರು ಆಫೀಸ್ನೋರು..."

ಸಿದಳು. ನಿಮ್‌ಗೆ ಗೋಡೆಯ ಗಡಿಯಾರದ ಟಿಕ್ ಟಿಕ್ ಹಾಗೂ ಕರೆನ್‌ಳ ಯಾಂತ್ರಿಕ ಶ್ವಾಸಕೋಶದ ಉಸಿರಾಟದ ಸದ್ದುಗಳು ಮಾತ್ರ ಕೇಳುತ್ತಿದ್ದವು. ಕೆಲವು ಕ್ಷಣಗಳ ನಂತರ ಮತ್ತೆ ಮುಂದುವರೆಸಿದಳು: 'ಆಗ ನನಗೆ ನಾನೇ ಸಮಾಧಾನ ಮಾಡಿಕೊಳ್ಳತೊಡಗಿದೆ; ಕೇವಲ ಬಯಕೆಯಿಂದ ಏನೂ ಆಗುವುದಿಲ್ಲ. ಏನು ನಡೆಯಬೇಕಿತ್ತೋ ಅದು ನಡೆಯಿತು, ಅದನ್ನು ಬದಲಾಯಿಸಲು ಎಂದಿಗೂ ಸಾಧ್ಯವಿಲ್ಲ – ಎಂದು. ಅಂದಿನಿಂದ ನಾನು ಸಾಧ್ಯವಾದಷ್ಟು ಬದುಕಿನಲ್ಲಿ ಉಳಿದುದರ ಉಪಯೋಗ ಪಡೆಯಲಾರಂಭಿಸಿದೆ. ಪ್ರತಿದಿನವನ್ನೂ ಕೇವಲ ಆ ದಿನಕ್ಕಾಗಿ ಬದುಕಲಾರಂಭಿಸಿದೆ. ಅಂದಿನಿಂದ ಬಾಳಿನಲ್ಲಿ ಅನಿರೀಕ್ಷಿತ ಸುಖ ಸಿಕ್ಕರೆ ಅಂದು ನಾನು ಋಣಿ. ಈ ದಿನ ನೀವು ಅನಿರೀಕ್ಷಿತವಾಗಿ ಬಂದಿರಿ. ಹಾಗೆ ನೋಡಿದರೆ ನನಗೆ ನಿಮ್ಮ ಹೆಸರು ತಿಳಿಯಲೂ ನೆನಪಾಗುತ್ತಿಲ್ಲ' ಎಂದು ಮುಗುಳ್ನಗೆ ಚೆಲ್ಲಿದಳು.

ನಿಮ್ ತನ್ನ ಹೆಸರು ಹೇಳಿದಾಗ 'ನಿಮ್ ಎಂದರೆ ನಿಮ್ರಾಡ್ ಅಲ್ಲವೆ?' ಎಂದು ಕೇಳಿದಳು.

'ಹೌದು.'

'ಬೈಬಲ್ಲಿನಲ್ಲಿ ಅವನ ಬಗ್ಗೆ ಉಲ್ಲೇಖವಿದೆಯಲ್ಲವೆ?'

'ಹೌದು. ನಿಮ್‌ರಾಡ್ ಭೂಮಿಯ ಮೇಲೆ ಜನ್ಮತಾಳಿದ ಮೊದಲ ಶಕ್ತಿಶಾಲಿ. ದೇವರ ದಯದಿಂದ ಅವನು ಶಕ್ತ ಬೇಟೆಗಾರನಾಗಿದ್ದ.'

'ಹಾಗಾದರೆ ನೀವೂ ಬೇಟೆಯಾಡುತ್ತೀರಾ ?' ಮತ್ತೆ ನಗುತ್ತ ಕೇಳಿದಳು. ನಂತರ ಕರೆನ್ ಅವನಿಗೆ ತಾನು ೧೨ ವರ್ಷ ಆಸ್ಪತ್ರೆಯಲ್ಲಿದ್ದದ್ದು, ಅಲ್ಲಿದ್ದ ಹಳೆಯ ಕಾಲದ ಯಾಂತ್ರಿಕ ಶ್ವಾಸಕೋಶ, ಈ ಹೊಸ ಯಂತ್ರದ ತಯಾರಿಕೆ, ಹೀಗಾಗಿ ರೋಗಿಗಳಿಗೆ ಆಸ್ಪತ್ರೆಯಿಂದ ದೂರ ಉಳಿಯಲು ಉಂಟಾದ ಅವಕಾಶ ಎಲ್ಲವನ್ನೂ ವಿವರಿಸಿದಳು. ತಂದೆ ತಾಯಿಗಳ ಬಳಿ ಇದ್ದ ತಾನು ನಂತರ ಅಲ್ಲಿ ಸರಿ ಹೋಗದಾದಾಗ, ಎಲ್ಲರಿಗೂ ತಾನೊಂದು ತೊಂದರೆಯೆನಿಸಿದಾಗ ಅಲ್ಲಿಂದ ಇಲ್ಲಿ ಬಂದು ೧೧ ವರ್ಷದಿಂದ ಬೇರೆಯಾಗಿ ವಾಸಿಸುತ್ತಿರುವ ವಿಷಯವನ್ನೂ ತಿಳಿಸಿದಳು.

'ಖರ್ಚಿಗೆ ಸರ್ಕಾರ ಸ್ವಲ್ಪ ಸಹಾಯ ಮಾಡುತ್ತದೆ. ಕೆಲವೊಮ್ಮೆ ಹಣದ ಮುಗ್ಗಟ್ಟು ಬವಳವಾಗುತ್ತಾದರೂ ಸಾಮಾನ್ಯವಾಗಿ ನನ್ನನ್ನು ನಾನು ನಿಭಾಯಿಸಿಕೊಳ್ಳುತ್ತೇನೆ. ನಮ್ಮ ತಂದೆ ಕಂಟ್ರಾಕ್ಟ್ ಕೆಲಸ ಮಾಡುತ್ತಾರೆ. ನನ್ನ ತಾಯಿ ಒಂದು ಅಂಗಡಿಯಲ್ಲಿ ಗುಮಾಸ್ತೆಯಾಗಿದ್ದಾರೆ. ಅವರಿಬ್ಬರೂ ಈಗ ಈ ಕುರ್ಚಿಯನ್ನು ತನ್ನಲ್ಲಿಯೇ ಅಳವಡಿಸಿಕೊಂಡು ನನ್ನನ್ನು ಹೊರಗೆ ಸುತ್ತಾಡಿಸುವ ಒಂದು ವ್ಯಾನ್ ಖರೀದಿಗಾಗಿ ಹಣವನ್ನು ಕೂಡಿಹಾಕುತ್ತಿದ್ದಾರೆ. ನಾನು ನನ್ನ ಸ್ನಾನ, ಊಟ, ತಿಂಡಿ, ನಿದ್ರೆ ಎಲ್ಲದ್ದಕ್ಕೂ ಪರತಂತ್ರಳಾದರೂ ಬಾಯಿಯಲ್ಲಿ ಕುಂಚ ಹಿಡಿದು ಚಿತ್ರ ಬರೆಯಲು ಕಲಿತಿದ್ದೇನೆ. ಬಾಯಲ್ಲಿ ಒಂದು ಕಡ್ಡಿ ಕಚ್ಚಿಹಿಡಿದು ಎಲೆಕ್ಟ್ರಿಕ್ ಟೈಪ್ ಯಂತ್ರ ಉಪಯೋಗಿಸಬಲ್ಲೆ. ಆಗಾಗ ಕವನಗಳನ್ನೂ ಬರೆಯುತ್ತೇನೆ. ನಿಮಗೂ ಕೆಲವು ಕಳಿಸಲೇ?' ಎಂದಳು.

'ದಯವಿಟ್ಟು ಕಳಿಸಿ' ಎಂದು ಹೇಳಿ ಹೊರಡಲನುವಾದ ನಿಮ್ ಕೈಗಡಿಯಾರ ನೋಡಿದಾಗ ಕರೆನ್‌ಳೊಡನೆ ಒಂದು ಗಂಟೆ ಕಳೆದದ್ದು ತಿಳಿದು ಅಚ್ಚರಿಗೊಂಡ.

ಕರೆನ್ ಕೇಳಿದಳು, 'ಮತ್ತೆ ಬರುತ್ತೀರಾ ?'

'ನೀವು ಬಾ ಎಂದರೆ.'

'ನಿಮ್‌ರಾಡ್, ಖಂಡಿತ ಬರಬೇಕು,' ಅವಳ ಹೂನಗೆ ಮುಖದ ತುಂಬಾ ಹರಡಿತ್ತು, 'ನೀವು ನನ್ನ ಗೆಳೆಯರಾಗಬೇಕೆಂದು ಬಯಸುತ್ತೇನೆ.'

*

ಅವನು ಆ ನೀಲಿ ಲಕೋಟೆಯ ತುದಿಯನ್ನು ಹರಿದ. ಒಳಗೊಂದು ತೆಳುನೀಲಿ ಬಣ್ಣದ ಪತ್ರವಿತ್ತು. ಅದರ ಮೇಲಂಚಿನಲ್ಲಿ ಕರೆನ್ ಸ್ನೋಸಳಿಂದ ಎಂದು ಮುದ್ರಿಸಿತ್ತು.

ಆಗ ಅವನಿಗೆ ಅವಳು ಹೇಳಿದ್ದ ಮಾತು ನೆನಪಾಯಿತು. 'ಆಗಾಗ ಕವನಗಳನ್ನೂ ಬರೆಯುತ್ತೇನೆ. ನಿಮಗೆ ಕೆಲವನ್ನು ಕಳಿಸಲೇ ?' ಪತ್ರದಲ್ಲಿದ್ದ ಪದಗಳು ಸ್ಫುಟವಾಗಿ ಟೈಪ್ ಮಾಡಲ್ಪಟ್ಟಿದ್ದವು

ನಾನಿಂದು ಒಬ್ಬ ಗೆಳೆಯನನ್ನು ಪಡೆದೆ
ಅಥವಾ ಅವನೇ ನನ್ನನ್ನು ಪಡೆದನೋ
ಅಥವಾ ಇದು ವಿಧಿಯೋ, ಅನ್ಯವ್ಯವೋ
ಪರಿಸ್ಥಿತಿಯೋ,
ಪೂರ್ವನಿಯಾಮಕವೋ, ಅಥವಾ ಇನ್ನೇನೋ

ಅಥವಾ ನಾವು ಮುಂದೊಂದು ದಿನ
ಸಂಧಿಸಬೇಕೆಂದು ಮೊದಲೇ ವಿಧಿ
ನಿಯಮಿಸಿದ್ದ ಪಥದಲ್ಲಿ
ಸಂಚರಿಸುತ್ತಿದ್ದ ತಾರೆಗಳೋ;
ಅದೇನೆಂದು ನಾವೆಂದೂ
ತಿಳಿಯಲಾರೆವು.
ಆದರೂ
ಸರಿಯಾಗಿ ಬೆಳೆಸಿದರೆ
ನಮ್ಮ ಮೈತ್ರಿಯು ಬಳ್ಳಿ ಹೆಮ್ಮರವಾ
ಗುತ್ತದೆಂದು
ನನ್ನ ಅನಿಸಿಕೆ.
ಅವನ ಶಾಂತ ನಡವಳಿಕೆ,
ಹಾಸ್ಯಪ್ರಜ್ಞೆ ಹಾಗೂ ಬುದ್ಧಿಶಕ್ತಿ
ಪ್ರಾಮಾಣಿಕ ಲಕ್ಷಣ, ದಯಾಳು ಕಂಗಳು,
ಸಿದ್ಧವಾದ ಮುಗುಳು ನಗೆ ಎಲ್ಲವೂ
ನನಗೆ ಬಹುಪ್ರಿಯ.
ಅವನನ್ನು ಮತ್ತೆ ನೋಡುವೆನೆಂಬ
ಆಸೆಯಲ್ಲೇ ಮರು ಭೇಟಿಗಾಗಿ
ಘಳಿಗೆಗಳನ್ನು ದಿನಗಳನ್ನು ಎಣಿಸುತ್ತಿದ್ದೇನೆ!

ಆ ದಿನ ಆಕೆ ಮತ್ತೇನು ಹೇಳಿದ್ದಳು? 'ಹ್ಞಾ, ನಾನು ಬಾಯಲ್ಲೊಂದು ಕಡ್ಡಿಯನ್ನುಕಚಿ ಹಿಡಿದು ತಲೆಯಲ್ಲಾಡಿಸುತ್ತಾ ಟೈಪ್ ಮಾಡಬಲ್ಲೆ' ಎಂದಿದ್ದಳು. ನಿವ್ ಅದೇ ಓದಿದ ಪದ್ಯದ ಅಕ್ಷರಕ್ಷರವನ್ನೂ ಹಲ್ಲಿನಲ್ಲಿ ಹಿಡಿದ ಕಡ್ಡಿಯ ಸಹಾಯದಿಂದ ಟೈಪ್ ಮಾಡುತ್ತಿರುವ ಅವಳ ಚಿತ್ರವನ್ನು ಮನಸ್ಸಿನಲ್ಲಿ ಮೂಡಿಸಿಕೊಂಡ.

ಗೆಳೆಯನೊಬ್ಬ ಅಪಘಾತಕ್ಕೀಡಾಗಿ ಅಲ್ಲಿ ಓಡಾಡುತ್ತಿದ್ದಾಗ ನಿವ್‌ಗೆ ಕರೆನ್‌ಳಿಂದ ಒಂದು ಪತ್ರ ಬಂದಿತ್ತು. ಕಾರ್ಯಭಾರದಿಂದ ಅವಳಿಗೆ ಉತ್ತರಿಸಲು ಆಗಿರಲಿಲ್ಲ. ಆಗ ಮತ್ತೆ ಅವಳೇ ತನ್ನ ಮತ್ತೊಂದು ಪತ್ರದಿಂದ ಅವನಿಗೆ ತನ್ನ ನೆನಪು ಕೊಟ್ಟಿದ್ದಳು.

ಅದೇ ತೆಳುನೀಲಿ ಕಾಗದದ ಮೇಲಂಚಿನಲ್ಲಿ, 'ನಿನ್ನ ಗೆಳೆಯನಿಗಾದ ಗಾಯಗಳ ಬಗ್ಗೆ ಪತ್ರಿಕೆಗಳಲ್ಲಿ ಓದಿ ವಿಷಾದವಾಯಿತು' ಎಂದು ಬರೆದಿದ್ದಳು. ಜತೆಗೆ ಮತ್ತೊಂದು ಕವನವಿತ್ತು.

ತಿಳಿದವರೊಬ್ಬರು ಹೇಳಿದರೆಂದು
ಅವನಿಗೆ ತಿಳಿಸು
ಮಂದವಾಗಿ ಉರಿಯುತ್ತಿರುವ ಮೊಂಬತ್ತಿ
ಕ್ಷೀಣವಾಗಿದೆಯಾದರೂ
ಪೂರ್ಣ ಕತ್ತಲಿಗಿಂತ ಅದೇ ಎಷ್ಟೋ
ವಾಸಿ.
ಏಕೆಂದರೆ ಬದುಕು
ಹೇಗಿದ್ದರೂ ಸಾವಿಗಿಂತ ಲೇಸು.
ಹೌದು! 'ರೆ'ಗಳು ಮಾತ್ರ ಕೊನೆತನಕ
ಉಳಿಯುತ್ತವೆ ತೀರಿಹೋದ ಆಸೆಗಳಂತೆ
ಸಮಾಧಿಯ ಮೇಲಿನ ಪುಷ್ಪಗುಚ್ಛಗಳಂತೆ
ಹೀಗಾಗಿದ್ದರೆ, ಹಾಗಾಗಿದ್ದರೆ,
ಇಂತಹ ಒಂದು ಗಂಟೆ ಬದಲಾಗಿದ್ದರೆ,
ಅಸಡ್ಡೆ ಮಾಡಿದ ಒಂದು ಕೆಲಸ
ಮಾಡದೆ ಇದ್ದಿದ್ದರೆ,
ಮಾಡಿದ ಒಂದು ಕೆಲಸ ಮಾಡದೇ
ಇದ್ದಿದ್ದರೆ
ಆಗ ಬಹುಶಃ ಹೀಗಾಗುತ್ತಿತ್ತೇನೋ
ಸಂತಸ ಹೀಗಿರುತ್ತಿರಲಿಲ್ಲವೇನೋ.
...ಇತ್ಯಾದಿ ಇತ್ಯಾದಿ...ಅನಂತನವರೆಗೆ
ಏಕೆಂದರೆ 'ಇದ್ದಿದ್ದರೆ' ಹಾಗೂ 'ಬಹುಶಃ'
ಎರಡೂ
ನಮ್ಮ ಮನದಲ್ಲೇ ಉಳಿಯಲು
ನಿರ್ಧರಿಸಿರುವ
ಅಣ್ಣ ತಮ್ಮಂದಿರು.
ಅವರನ್ನು ಸಹಿಸಿಕೋ
ಹಾಗೇ ಉಳಿದೆಲ್ಲವನ್ನೂ......

■

ನಿವ್‌ನನ್ನು ನೋಡಿದ ತಕ್ಷಣ ಕರೆನ್ ಹಿಂದಿನ ಸಲದಂತೆಯೇ ನಗುಮುಖದಿಂದ ಸ್ವಾಗತಿಸಿದಳು. ಅವಳ ನಗುಮುಖ ಕಂಡೊಡನೆಯೇ ನಿವ್‌ಗೆ ತಮ್ಮ ಪ್ರಥಮ ಭೇಟಿಯ ನೆನಪು ಮರುಕಳಿಸಿತು.

'ನಿಮ್ಮ ಕವನಗಳು ನನಗೆ ತುಂಬಾ ಹಿಡಿಸಿದುವು. ನೀವು ಎಲ್ಲಿಯಾದರೂ ಅವುಗಳನ್ನು ಪ್ರಕಟಿಸಿದ್ದೀರಾ?

ಅವಳು ತನ್ನ ತಲೆಯಾಡಿಸಿದಳು. ತನ್ನೆದುರು ತಲೆಯಾಡಿಸುತ್ತಾ ಕುಳಿತ ಅವಳನ್ನು ಕಂಡಾಗ ಅವನಿಗೆ ಅವಳ ದೇಹದಲ್ಲಿ ಅವಳ ಸ್ವಾಧೀನ ಇರುವ ಅಂಗ ಅದೊಂದೇ ಎಂಬ ನೆನಪು ಹುತ್ತ ಚುಚ್ಚಿತು. ತನ್ನ ಕಾರ್ಯದ ಜಂಜಾಟದಿಂದ

ದೂರವಾಗಲು ನಿಪ್ ಅಂದು ಅವಳ ಮನೆಗೆ ಬಂದಿದ್ದನೇನೋ ನಿಜ. ಆದರೆ ಅದರೊಂದಿಗೆ ಅವಳನ್ನು ಪತ್ರಿ [illegible]ಕೆಂಬ ಉತ್ಕಟ ಆಸೆಯೂ ಇತ್ತು. ಕರೆನ್ ತಾನು ಅವನನ್ನು ಪ್ರೀತಿಸುತ್ತಿದ್ದೇನೋ ಎಂದು ಶಂಕಿಸಿದ. ಹಾಗೇನಾದರೂ ಇದ್ದರೆ ಅದು ಅವನಿಗೆ ಪ್ರಥಮ ವಿಚಿತ್ರ ಅನುಭವ. ಇದುವರೆಗೆ ಅವನು ಹಲವಾರು ಬಾರಿ ಪ್ರೇಮವಿಲ್ಲದ ರತಿಸುಖವನ್ನು ಪಡೆದಿದ್ದ. ಇಲ್ಲಿಯಾದರೋ ರತಿಸುಖವಿಲ್ಲದ ಪ್ರೇಮ!

'ನಾನು ಖುಷಿಯಾಗಿ ಭಾಷಣ ಬರೆಯುತ್ತೇನೆ' ಕರೆನ್ ನುಡಿದಳು, 'ಈಗ ನೀವು ಬಂದಾಗ ನಾನೊಂದು ಭಾಷಣದ ತಯಾರಿ ನಡೆಸಿದ್ದೆ.'

ನಿಪ್ ಒಳಗೆ ಬಂದಾಗಲೇ ಟೈಪ್ ಯಂತ್ರದ ಮೇಲೆ ಅರ್ಧಂಬರ್ಧ ಟೈಪಾದ ಹಾಳೆಯನ್ನು ಗಮನಿಸಿದ್ದ. ಮೇಜಿನ ಮೇಲೆ ಹಲವಾರು ಹಾಳೆಗಳು ಹರಡಿದ್ದವು.

'ಭಾಷಣವೆ? ಯಾರಿಗೆ? ಯಾವ ವಿಷಯ ವಾಗಿ?'

'ವಕೀಲರದೊಂದು ಸಮ್ಮೇಳನಕ್ಕೆ ಅಂಗವಿಕಲರಿಗಾಗಿ ಕೆಲವು ಕಾನೂನುಗಳನ್ನು ರೂಪಿಸಲು ರಾಜ್ಯ ಸರ್ಕಾರದ ತಂಡವೊಂದು ಕೆಲಸ ನಡೆಸಿದೆ. ಅವುಗಳಲ್ಲಿ ಕೆಲವೇ ಕಾನೂನುಗಳು ಸಮರ್ಪಕವಾಗಿವೆ. ನಾನು ಅವುಗಳ ಅಧ್ಯಯನ ನಡೆಸಿದ್ದೇನೆ.'

'ಆದರೆ ನೀವು ವಕೀಲರಿಗೆ ನ್ಯಾಯ ಹೇಳಿಕೊಡುತ್ತೀರಾ?'

'ಏಕಾಗಬಾರದು? ಅವರು ಕೇವಲ ಸಿದ್ಧಾಂತಗಳಲ್ಲಿ ತರ್ಕದಲ್ಲಿ ಮುಳುಗಿರುತ್ತಾರೆ. ಆ ಕಾನೂನಿನನ್ವಯ ಏನಾಗುತ್ತದೆ ಎಂಬುದನ್ನು ಯಾರಾದರೂ ಅನುಭವಸ್ಥರು ಅವರಿಗೆ ಹೇಳಬೇಕಲ್ಲವೆ? ಅಲ್ಲದೆ ಜನರಲ್ಲಿ ನನ್ನಂಥವರ ಬಗ್ಗೆ ಇರುವ ತಪ್ಪು ಅಭಿಪ್ರಾಯಗಳನ್ನು ಸರಿಪಡಿಸ

ಬಯಸುತ್ತೇನೆ'.

'ತಪ್ಪು ಅಭಿಪ್ರಾಯಗಳು?' ನಿವ್ ಅಚ್ಚರಿಯಿಂದ ಪ್ರಶ್ನಿಸಿದ.

'ಅದಕ್ಕೆ ಉತ್ತರಿಸುವ ಮೊದಲು, ನನ್ನ ಕಾಲು ಸ್ವಲ್ಪ ಸರಿಯಾಗಿಡುತ್ತೀರಾ? ಒಂದೇ ರೀತಿ ಕುಳಿತು ದಣಿದಿವೆ' ಅವಳ ಬಲಗಾಲು ಎಡಗಾಲಿನ ಮೇಲಿತ್ತು. ಆತ ಅವಳ ಬಳಿ ಹೋದ.

'ದಯವಿಟ್ಟು' ಎಡಗಾಲನ್ನು ಬಲಗಾಲಿನ ಮೇಲಿಡಿ' ಎಂದಳು ಸಹಜವಾಗಿ. ಆಕೆಯ ಸುಂದರವಾದ ಕಾಲುಗಳು ಬಿಸಿಯಾಗಿದ್ದವು. ಅವುಗಳ ಸ್ಪರ್ಶದಿಂದ ನಿವ್ ರೋಮಾಂಚಿತನಾದ.

'ಥ್ಯಾಂಕ್ಸ್! ನಿಮ್ಮ ಕೈ ಎಷ್ಟು ಮೃದುವಾಗಿದೆ' ಎಂದಳು ಕರೆನ್.

'ನಿಮಗೆ ಹೇಗೆ ತಿಳಿಯಿತು?'

'ನೋಡಿ, ಇದೇ ನಾನು ಹೇಳಿದ ತಪ್ಪು ಅಭಿಪ್ರಾಯಗಳಲ್ಲಿ ಒಂದು.

'ಯಾವುದು?'

'ನನ್ನಂತಹ ಪೋಲಿಯೋಗ್ರಸ್ತರಿಗೆ ಸಹಜವಾದ ಸ್ಪರ್ಶಾನುಭವವಿರುವುದಿಲ್ಲವೆಂಬುದು. ಇರುವುದಿಲ್ಲವೆಂಬುದೇನೋ ನಿಜ. ಆದರೆ ನನ್ನಂಥ ಕೆಲವರಿಗೆ ಸ್ಪರ್ಶಜ್ಞಾನ ಎಂದಿನಂತೇ ಇರುತ್ತದೆ. ನಾನು ನನ್ನ ಕೈಕಾಲು ಆಡಿಸಲಾರೆನಾದರೂ ಎಲ್ಲರಂತೆಯೇ ಸ್ಪರ್ಶವನ್ನು ಅನುಭವಿಸಬಲ್ಲೆ. ಒಂದೇ ರೀತಿ ಕುಳಿತಾಗ ಕೈಯೋ ಕಾಲೋ ದಣಿಯುವುದುಂಟು. ಆಗ ಬದಲಾವಣೆ ಅನಿವಾರ್ಯ– ಈಗ ನೀವು ಮಾಡಿದಂತೆ.'

'ನೀವು ಹೇಳಿದ್ದು ಸರಿ. ನಾನೂ ಹಾಗೆಯೇ ಯೋಚಿಸಿದ್ದೆ.'

'ನನಗೆ ಗೊತ್ತು,' ಅವಳು ತುಂಟುತನದಿಂದ ನಕ್ಕಳು, 'ಆದರೆ ನಾನು ನಿಮ್ಮ ಹಸ್ತದ ಸ್ಪರ್ಶಾನುಭವ ಪಡೆದೆ. ಅಲ್ಲದೆ ನನಗೆ ಆ ಸ್ಪರ್ಶ ಇಷ್ಟವಾಯಿತು.'

ಇದ್ದಕ್ಕಿದ್ದಂತೆ ಅವನಲ್ಲೊಂದು ವಿಚಿತ್ರ ಆಸೆ ಮಿಂಚಿ ಮಾಯವಾಯಿತು. ಆದರೂ ಅದನ್ನು ಬದಿಗೊತ್ತಿ ಕೇಳಿದ, 'ಇನ್ನೊಂದು ತಪ್ಪು ಅಭಿಪ್ರಾಯ ಯಾವುದು?'

'ಅದೆಂದರೆ ನನ್ನಂಥ ದುರ್ದೈವಿಗಳ ಬಗ್ಗೆ [illegible]

ನಮ್ಮ ನಮ್ಮೊಡನೆ ಮಾತಾಡಲು ಸಂಪರ್ಕ ಇಟ್ಟುಕೊಳ್ಳಲು ಅದೆಷ್ಟು ಜನಕ್ಕೆ ಸಂಕೋಚ! ಕೆಲವರಿಗಂತೂ ಭಯ.'

'ಈ ಅನುಭವ ನಿಮಗೆ ಆಗಾಗ ಆಗುತ್ತದೆಯೇ?' 'ಆಗಾಗ ಏನು? ಯಾವಾಗಲೂ ಆಗುತ್ತಿರುತ್ತದೆ' ಎಂದಳು. ದನಿಯಲ್ಲಿ ನೋವಿತ್ತು. ಅದನ್ನು ಗಮನಿಸಿದ ನಿವ್ ಮಾತು ಬದಲಿಸಿದ.

'ಕಳೆದ ಬಾರಿ ನಾನಿಲ್ಲಿ ಬಂದಾಗ, ನೀವು ನಿಮ್ಮ ಕುಟುಂಬದ ಬಗ್ಗೆ ಸ್ವಲ್ಪ ಹೇಳಿದ್ದಿರಿ.'

'ಇಂದು ನಾನೇನೂ ಹೇಳಬೇಕಿಲ್ಲ. ಏಕೆಂದರೆ ಇಂದು ನನ್ನ ತಂದೆ ತಾಯಿ ಊಟವಾದ ಕೂಡಲೇ ಇಲ್ಲಿಗೆ ಬರುತ್ತಾರೆ. ಭೇಟಿ ಮಾಡಬಹುದು,' ಎಂದಳು.

ಅಷ್ಟರಲ್ಲಿ ಜೋಸಿ ತುಂಬಿದ ಒಂದು ಟೀ ತಟ್ಟೆಯೊಂದಿಗೆ ಪ್ರತ್ಯಕ್ಷಳಾದಳು. ನಿವ್‌ನ ಮುಂದೆ ಅವಳು ಸಣ್ಣ ಟೇಬಲ್ಲೊಂದನ್ನು ಎಳೆದಳು. ಕರೆನ್‌ಳ ಕುರ್ಚಿಗೊಂದು ತಟ್ಟೆ ಜೋಡಿಸಿದಳು. ತಾನು ತಂದಿದ್ದ ತಟ್ಟೆಯಿಂದ ಅವುಗಳಿಗೆ ಫ್ರೆಂಚ್ ಬ್ರೆಡ್ ಮತ್ತು ಸ್ಯಾಲಡ್‌ಗಳನ್ನು ಬಡಿಸಿ, ಎರಡು ಗ್ಲಾಸುಗಳಿಗೆ ಮದ್ಯ ಸುರಿದಳು.

'ಪ್ರತಿನಿತ್ಯ ಮದ್ಯ ಕುಡಿಯುವ ಚಟ ನನಗಿಲ್ಲ. ಆದರೆ ಇಂದು ವಿಶೇಷ ದಿನ- ನೀವು ಮತ್ತೆ ಬಂದಿದ್ದೀರಿ' ಎಂದ ಕರೆನ್, 'ನಿವ್' ನನಗೆ ಊಟ ಮಾಡಿಸುತ್ತೀರಾ? ಎಂದು ಕೇಳಿದಳು.

'ಮಾಡಿಸುತ್ತೇನೆ. ಆದರೆ ನಾನೇನಾದರೂ ತಪ್ಪು ಮಾಡಿದರೆ...' ಎಂದ ನಿವ್.

'ತಪ್ಪೇನೂ ಇಲ್ಲ. ನಾನು ಬಾಯಿ ತೆಗೆದಾಗ ಸ್ವಲ್ಪ ಆಹಾರ ಒಳಗೆ ಹಾಕಿ ಅಷ್ಟೆ.'

ಕರೆನ್‌ಳತ್ತ ಒಂದು ನಗು ನೋಟ ಬೀರಿ ಜೋಸಿ ಅಡಿಗೆ ಮನೆಗೆ ತೆರಳಿದಳು.

ಊಟದ ಮಧ್ಯೆ, ಒಂದು ಗುಟುಕು ಮದ್ಯ ಕುಡಿಸಿದ ನಂತರ ಕರೆನ್, 'ಸ್ವಲ್ಪ ನನ್ನ ತುಟಿ ಒರೆಸುತ್ತೀರಾ?' ಎಂದು ಕೇಳಿದಳು. ನಿವ್ ಅವಳ ನ್ಯಾಪಕಿನ್ ತೆಗೆದು ತುಟಿ ಒರೆಸಿದ. ಊಟ ಮುಂದುವರೆಯಿತು.

ಈ ರೀತಿ ಊಟ ಮಾಡಿಸುವಾಗ ಅದೇನೋ ಒಂದು ವಿಧದ ಆತ್ಮೀಯತೆ ಅವ್ಯಕ್ತ ಸಂತೋಷದ ಅನುಭವ ಅವನಿಗೆ ಆಯಿತು. ಜೊತೆಗೆ

ರಾಗಭಾವವೂ ಇಲ್ಲದಿರಲಿಲ್ಲ.

ಊಟದ ಕೊನೆಯಲ್ಲಿ ಮದ್ಯ. ತನ್ನ ಕೆಲಸವನ್ನು ಸ್ವಲ್ಪವೇ ಆರಂಭಿಸಿದ್ದಾಗ ಅವಳು, 'ನಾನು ನನ್ನ ಬಗ್ಗೆ ಬಹಳಷ್ಟು ತಿಳಿದುಕೊಂಡಿದ್ದೇನೆ. ಈಗ ನೀವು ನಿಮ್ಮ ವಿಷಯ ತಿಳಿಸಿ' ಎಂದಳು.

ನಿವ್ ಸಹಜವಾಗಿ ತನ್ನ ಮನೆ, ಬಾಲ್ಯ, ಕೆಲಸ, ರುತ್‌ಳೊಂದಿಗೆ ಮದುವೆ, ಅವನ ಮಕ್ಕಳಾದ ಲೀ ಮತ್ತು ಬೆಂಜಿ, ಎಲ್ಲದರ ಬಗ್ಗೆ ಹೇಳಿದ. ನಂತರ ಅವಳ ಪ್ರಶ್ನೆಗಳಿಗುತ್ತರಿಸುತ್ತಾ ತನ್ನ ಧಾರ್ಮಿಕ ನಂಬಿಕೆಗಳು, ತನ್ನ ಮಕ್ಕಳ ಮೇಲೆ ಅವುಗಳ ಪ್ರಭಾವ, ತಮ್ಮ ಭವಿಷ್ಯ, ಅದರಲ್ಲೂ ತನ್ನ ವೈವಾಹಿಕ ಜೀವನದ ಅನಿಶ್ಚಿತ ಭವಿಷ್ಯಗಳ ಬಗ್ಗೆಯೂ ಮಾತಾಡಿದ. ಕೊನೆಯಲ್ಲಿ, 'ಇಷ್ಟು ಸಾಕು. ನಿಮಗೆ ಬೇಸರ ಉಂಟು ಮಾಡಲಾರೆ' ಎಂದ.

ಕರೆನ್ ಮುಗುಳ್ನಗುತ್ತಾ ತಲೆಯಾಡಿಸಿದಳು, ನೀವೆಂದೂ ಬೇಸರ ತರಿಸಲಾರಿರಿ, ನಿಮ್ಮದು ಒಂದು ರೀತಿಯ ಜಟಿಲ ವ್ಯಕ್ತಿತ್ವ. ನಿಮ್ಮಂಥವರು ಎಂದಿಗೂ ಆಸಕ್ತಿ ಉಂಟುಮಾಡುತ್ತಾರೆ. ನನ್ನ ಬಾಳಿನಲ್ಲಿ ಬಂದವರಲ್ಲಿ ಕೇವಲ ನಿಮ್ಮನ್ನು ನಾನು ಇಷ್ಟಪಡುತ್ತೇನೆ.'

'ನಿಮ್ಮ ಬಗ್ಗೆಯೂ ನಾನು ಅದೇ ಮಾತು ಹೇಳಬೇಕು,' ಎಂದು ನಿವ್ ಹೇಳಿದಾಗ ಕರೆನ್‌ಳ ಮುಖಕ್ಕೆ ನುಗ್ಗಿ ಬಂದ ಕೆಂಪುಬಣ್ಣ ಅವಳ ಚೆಲುವನ್ನು ನೂರ್ಮಡಿಗೊಳಿಸಿತು. ಮೆದುವಾಗಿ ಅವಳು ಉಸುರಿದಳು, 'ನಿವ್, ನೀನು ನನ್ನನ್ನು ಚುಂಬಿಸಬಯಸುತ್ತೀಯಾ?'

ತನ್ನ ಸ್ಥಳ ಬಿಟ್ಟೆದ್ದು ಆಕೆಯ ಬಳಿ ಬಂದ ನಿವ್. 'ಹೌದು ಬಹಳವಾಗಿ ಬಯಸುತ್ತೇನೆ' ಎಂದವು ಅವನ ಕಣ್ಣುಗಳು.

ಅವಳ ಅಧರ ಪ್ರೇಮದಿಂದ ತುಂಬಿ ಬಿಸಿಯಾಗಿತ್ತು. ಅವಳ ಚುಂಬನ ಕಾಲದ ಪರಿವೆಯನ್ನು ಮರೆತಿತ್ತು. ಅವಳನ್ನು ಮತ್ತೂ ತನ್ನ ಬಳಿಗೆ ಎಳೆದುಕೊಳ್ಳಲು ನಿವ್ ಕೈಹಿತ್ತುವ ವೇಳೆಗೆ ಕರೆಗಂಟೆಯ ಸದ್ದಾಯಿತು. ಬಾಗಿಲು ತೆಗೆದುಕೊಂಡಿತು. ನಿವ್ ಕೈಗಳನ್ನು ಕೆಳಗಿಳಿಸಿ ಹಿಂದೆ ಸರಿದ. ಕರೆನ್ ಮೆತ್ತಗೆ ಗೊಣಗಿದಳು. 'ಎಷ್ಟು ಒಳ್ಳೆಯ ಕ್ಷಣದಲ್ಲಿ ಹೀಗಾಯಿತಲ್ಲ !'

ನಂತರ 'ಒಳಗೆ ಬನ್ನಿ' ಎಂದಳು. ಅವರು ಬಂದ ಮೇಲೆ, 'ನಿವ್ ನನ್ನ ತಂದೆ ತಾಯಿಗಳು' ಎಂದು ಅವರನ್ನು ಪರಿಚಯಿಸಿದಳು.

ವಯಸ್ಸಾದ ನೆರೆಗೂದಲಿನ ಗೃಹಸ್ಥ ಕೈ ನೀಡಿ, 'ನಾನು ಲೂಥರ್ ಸ್ಲೋನ್. ಇವಳು ನನ್ನ ಪತ್ನಿ. ಕರೆನ್ ನಿಮ್ಮ ಬಗ್ಗೆ ನಮಗೆ ಬಹಳ ಹೇಳಿದ್ದಾಳೆ. ನಾವು ಈ ಮೊದಲೇ ನಿಮ್ಮನ್ನು ಟೆಲಿವಿಷನ್‌ನಲ್ಲಿ ನೋಡಿದ್ದೇವೆ' ಎಂದು ಹೇಳಿ ಕೈ ಕುಲುಕಿದ.

ಕರೆನಳ ತಾಯಿ ಅವನ ಕೈ ಕುಲುಕಿ, 'ನೀವು ನಮ್ಮ ಮಗಳನ್ನು ಭೇಟಿಯಾಗಿ ಸಂತೋಷಗೊಳಿಸುತ್ತಿರುವುದಕ್ಕೆ ನಾವು ಋಣಿಗಳು,' ಎಂದಳು.

ನಿವ್ ಮತ್ತು ಸ್ಲೋನ್ ದಂಪತಿಗಳು ಆಸೀನರಾಗುವ ವೇಳೆಗೆ ಜೋಸಿ ಕಾಫಿ ತಂದಳು. ಕರೆನ್‌ಳ ತಾಯಿ ಉಳಿದವರಿಗೆ ಕಾಫಿ ಕೊಟ್ಟು ಮಗಳಿಗೂ ಕುಡಿಸಿದಳು. ಮಾತುಕತೆಯ ನಡುವೆ ಸ್ಲೋನರ ಆದಾಯ ಚೆನ್ನಾಗಿಲ್ಲವೆಂದು ನಿವ್‌ಗೆ ಗೊತ್ತಾಯಿತು. ಕರೆನ್‌ಳಿಗೆ ಒಂದು ವ್ಯಾನ್ ಕೊಳ್ಳಲು ಹಣ ಕೂಡಿಸುತ್ತಿರುವ ಬಗ್ಗೆ ಮೊದಲೇ ಗೊತ್ತಿದ್ದ ನಿವ್ ತನ್ನ ಕಂಪೆನಿಯಿಂದ ಸುಲಭವಾಗಿ ವ್ಯಾನ್ ದೊರಕಿಸಲು ಪ್ರಯತ್ನಿಸುವುದಾಗಿ ಆಶ್ವಾಸನೆ ಕೊಟ್ಟ. ಅದನ್ನು ಅವಳ ಗಾಲಿ ಕುರ್ಚಿಗೆ ಸರಿಯಾಗಿ ಅನುಕೂಲವಾಗುವಂತೆ ಮಾರ್ಪಡಿಸುವ ಕೆಲಸವನ್ನು ತಾನೇ ಕಾರ್ಖಾನೆಯ ಮೂಲಕ ನಡೆಸುವದಾಗಿ ಭರವಸೆಯಿತ್ತ.

ಕರೆನ್ ಸಂತಸ ತಡೆಯಲಾರದೆ, 'ನಿವ್, ಓಹ್ ನೀನು ಅದೆಷ್ಟು ಒಳ್ಳೆಯವನು' ಎಂದು ಉದ್ಗರಿಸಿದಳು.

ಮಾತಾಡುತ್ತಾ ಕುಳಿತಾಗ ವೇಳೆ ಕಳೆದುದೇ ತಿಳಿಯಲಿಲ್ಲ. ಇದ್ದಕ್ಕಿದ್ದಂತೆ ನಿವ್ ಗಡಿಯಾರ ನೋಡಿ ಗಡಬಡಿಸಿ ಎದ್ದ. 'ನಾನು ಹೋಗಬೇಕು.' ಎಂದು ಹೇಳಿ ಹೊರಟ. ಸ್ಲೋನ್ ದಂಪತಿಗಳೂ ಹೊರಟರು.

ಕರೆನ್, 'ನನಗೇನೂ ಕೆಲಸವಿಲ್ಲವೆಂದು ತಿಳಿಯಬೇಡಿ. ನಾನೂ ಈ ಭಾಷಣ ಮುಗಿಸಬೇಕು' ಎಂದಳು ನಗುತ್ತಾ. ನಗೆಯೊಂದಿಗೆ ಮೂವರೂ ಅವಳಿಂದ ಬೀಳ್ಕೊಂಡರು.

ಸ್ಲೋನ್ ದಂಪತಿಗಳು ಹಾಗೂ ನಿವ್ ...

ನಲ್ಲಿ ತಮ್ಮದೇ ಆದ ಚಿಂತೆಯಲ್ಲಿ ಮುಳುಗಿದ್ದುದರಿಂದ ಯಾರೂ ಮಾತಾಡಲಿಲ್ಲ. ನಂತರ ಕರೆನ್‌ಳ ತಾಯಿ ಬೇಸರದ ದನಿಯಲ್ಲಿ, 'ನಾವು ಕರೆನ್‌ಳಿಗಾಗಿ ಸಾಧ್ಯವಾದಷ್ಟೂ ಮಾಡುತ್ತಿದ್ದೇವೆ. ಆದರೂ ಕೆಲವೊಮ್ಮೆ ಇನ್ನೂ ಹೆಚ್ಚು ಮಾಡಬೇಕಿತ್ತು ಎನಿಸುತ್ತದೆ,' ಎಂದಳು.

"ನೀವು ಅವಳಿಗಾಗಿ ಪಡುತ್ತಿರುವ ಶ್ರಮದ ಬಗ್ಗೆ ಕರೆನ್‌ಳಿಗೆ ಹೆಮ್ಮೆಯೆನಿಸುತ್ತದೆ," ಎಂದ ನಿಮ್.

"ನಾವೇನು ಮಾಡಿದರೂ ಕಡಿಮೆಯೇ. ಏನು ಮಾಡಿದರೂ ಅವಳಿಗೆ ನಮ್ಮಿಂದಾದ ಅನ್ಯಾಯ ಸರಿಪಡಿಸಲಾರೆವು," ಎಂಬ ವಿಷಾದದ ನುಡಿ. ಆಕೆಯ ಬಾಯಿಂದ ಬಂತು. ನಂತರ ನಿಮ್‌ನನ್ನು ಕೇಳಿದಳು:

"ಕರೆನ್ ತನಗೆ ಪೋಲಿಯೋ ಹೇಗೆ ತಗುಲಿತೆಂದು ಹೇಳಿದಳೇ?"

"ಹೌದು," ಎಂಬಂತೆ ತಲೆಯಾಡಿಸಿದ ನಿಮ್.

"ಹೇಗೆ ಮತ್ತು ಏಕೆಂದು ಹೇಳಿದಳೇ?"

"ಇಲ್ಲ. ಸರಿಯಾಗಿ ತಿಳಿಸಲಿಲ್ಲ."

"ಅವಳು ಸಾಮಾನ್ಯವಾಗಿ ಅದರ ಬಗ್ಗೆ ಯಾರಿಗೂ ಹೇಳುವುದಿಲ್ಲ" ಎಂದ ಕರೆನ್‌ಳ ತಂದೆ.

ಈ ವೇಳೆಗೆ ಅವರು ಕೆಳಗೆ ತಲುಪಿದ್ದರು. ಹಾಗೇ ಒಟ್ಟಿಗೆ ಹೆಜ್ಜೆ ಹಾಕುತ್ತಿದ್ದಂತೆಯೇ, "ಆಗ ನಮ್ಮ ಕರೆನ್‌ಗೆ ೧೫ ವರ್ಷ ವಯಸ್ಸು. ಅವಳಿನ್ನೂ ಹೈಸ್ಕೂಲಿನಲ್ಲಿದ್ದಳು. ಸ್ಕೂಲಿನ ಕ್ರೀಡಾಕೂಟಗಳೆಲ್ಲೆಲ್ಲಾ ಭಾಗವಹಿಸುತ್ತಿದ್ದಳು. ಜಿಂಕೆಯಂತೆ ಜಿಗಿದಾಡುತ್ತಿದ್ದಳು. ಆಗ ಜೀವನ ಬಹಳ ಸುಖವಾಗಿತ್ತು," ಎಂದಳು ಆಕೆ.

"ಆ ಬೇಸಿಗೆಯಲ್ಲಿ ನಾನು ಮತ್ತು ನನ್ನ ಪತ್ನಿ ಯುರೋಪ್ ಪ್ರವಾಸಕ್ಕೆ ಹೋಗಬೇಕೆಂದಿದ್ದೆವು. ಈ ವೇಳೆಯಲ್ಲಿ ಕರೆನ್ ಒಂದು ಬೇಸಗೆ ಶಿಬಿರಕ್ಕೆ ಹೋಗಿ ಇರಬೇಕೆಂದು ನಾವು ನಿರ್ಧರಿಸಿದ್ದೆವು. ಅದಕ್ಕೂ ಮುಂಚೆ ಸಿಂಥಿಯಾ ಅಂದರೆ ಕರೆನ್‌ಳ ಅಕ್ಕ ಕೂಡ ಒಮ್ಮೆ ಅಲ್ಲಿ ಇದ್ದಳು. ಬದಲಾದ ವಾತಾವರಣದಿಂದ ಅವಳಿಗೂ ಒಳ್ಳೆಯದಾಗುವುದೆಂದು ನಾವು ಭಾವಿಸಿದೆವು. ಕರೆನ್‌ಗೆ ಆ ಶಿಬಿರಕ್ಕೆ ಹೋಗಲು ಸ್ವಲ್ಪವೂ ಇಷ್ಟವಿರಲಿಲ್ಲ. ಆ ಕಾಲದಲ್ಲಿ ಅವಳಿಗೆ ಒಬ್ಬ ಗೆಳೆಯನಿದ್ದ. ಅವನು ಬೇಸಿಗೆಯಲ್ಲಿ ಎಲ್ಲೂ ಹೋಗುವ ಕಾರ್ಯಕ್ರಮವಿರಲಿಲ್ಲವಾದ್ದರಿಂದ ಇವಳೂ ಮನೆಯಲ್ಲೇ ಇದ್ದು ರಜಾ ಕಳೆಯುವಾಸೆ ವ್ಯಕ್ತಪಡಿಸಿದಳು. ಆದರೆ ಸಿಂಥಿಯಾ ಆಗಲೇ ಹೊರಟುಹೋಗಿದ್ದಳಾದ್ದರಿಂದ ಮನೆಯಲ್ಲಿ ಕರೆನ್ ಒಬ್ಬಳೇ ಉಳಿಯಬೇಕಾಗುತ್ತಿತ್ತು."

"ಒಬ್ಬಳೇ ಇದ್ದರೆ ತೊಂದರೆಯೇನೂ ಇಲ್ಲ, ಆ ಹುಡುಗ ಬಹಳ ಒಳ್ಳೆಯವನು ಎಂದೆಲ್ಲ ಅವಳು ವಾದಿಸಿದಳು. ಕೊನೆಗೆ, 'ನನ್ನನ್ನೆಲ್ಲಾದರೂ ಕಳಿಸಿದರೆ ಏನೋ ಕೇಡಾಗುತ್ತದೆಂದು ನನಗನ್ನಿಸುತ್ತದೆ. ಎಂದು ಹೇಳಿ ಹೋಗುವುದಿಲ್ಲ ಎಂದು ಹಠ ಹಿಡಿದಳು" ಎಂದಳು ಕರೆನ್‌ಳ ತಾಯಿ.

"ಆದರೆ ನಾವು ಶಿಬಿರಕ್ಕೆ ಹೋಗಲೇಬೇಕೆಂದು ಅವಳನ್ನು ಒತ್ತಾಯಪಡಿಸಿದೆವು. ಅವಳು ಒಲ್ಲದ ಮನಸ್ಸಿನಿಂದ ಹೋದಳು. ನಾವು ಯುರೋಪಿನಲ್ಲಿದ್ದಾಗ, ಅವಳಿದ್ದ ಶಿಬಿರದಲ್ಲಿ ಪೋಲಿಯೋ ರೋಗ ಹರಡಿತು. ಅವಳೂ ಬಲಿಯಾದಳು," ಎಂದು ಸ್ಲೋನ್ ಕಣ್ಣೊರೆಸಿಕೊಂಡ.

ಒಂದು ನಿಮಿಷ ಮೂವರೂ ಮೌನದಿಂದಿದ್ದರು. ನಿಮ್‌ಗೆ ಆ ತಿಳಿನೀಲಿ ಕಾಗದ ಕಣ್ಣು ಮುಂದೆ ಕಟ್ಟಿತು. ಅದರೊಳಗಿನ ಆ ಕವನದ ಸಾಲುಗಳ ಅರ್ಥ ಆಗತೊಡಗಿತು:

ಹೀಗಾಗಿದ್ದರೆ, ಹಾಗಾಗಿದ್ದರೆ
ಇಂತಹ ಒಂದು ದಿನ ಒಂದು ಘಂಟೆ ಬದಲಾಗಿದ್ದರೆ,
ಅಸಡ್ಡೆ ಮಾಡಿದ ಒಂದು ಕೆಲಸ ಮಾಡಿರದಿದ್ದರೆ
ಮಾಡಿದ ಒಂದು ಕೆಲಸ ಮಾಡದೇ ಇದ್ದಿದ್ದರೆ ಆಗ ಬಹುಶಃ ಹೀಗಾಗುತ್ತಿತ್ತೇನೋ.
ನಂತರ ಹೀಗಿರುತ್ತಿರಲಿಲ್ಲವೇನೋ…

ಹಾಗೇ ಹೆಜ್ಜೆ ಹಾಕತೊಡಗಿದ್ದಂತೆಯೇ ಮೌನ ಮುರಿದ ಸ್ಲೋನ್ ಹೇಳಿದ: "ನಮ್ಮ ಅಪರಾಧವನ್ನು ನಾವಿಬ್ಬರೂ ನಮ್ಮ ಸಮಾಧಿಯವರೆಗೂ ಕೊಂಡೊಯ್ಯುತ್ತೇವೆ." ಅವರನ್ನು ಸಮಾಧಾನಪಡಿಸಿ ನಿಮ್ ತನ್ನ ಕೆಲಸಕ್ಕೆ ತೆರಳಿದ.

ಕೆಲವು ದಿನಗಳ ನಂತರ ಊಹಿಸಿದಂತೆಯೇ ಕರೆನ್‌ಳ ಒಂದು ಕವನ ನಿಮ್‌ನ ಕೈಸೇರಿತು:

ಚಿಕ್ಕವನಿದ್ದಾಗ ನೀನೆಂದಾದರೂ ರಸ್ತೆಯ ಅಂಚಿನಲ್ಲಿ ನಡೆಯುತ್ತಾ

ಬಿರುಕುಗಳನ್ನು ತುಳಿಯದೇ ಓಡುವ
ಆಟ ಆಡಿದ್ದೀಯಾ?
ಅಥವಾ ಪರ್ವಗಳ ನಂತರ
ಮನಸ್ಸಿನಲ್ಲೇ ಇಲ್ಲದ ಯೋಚನೆಗಳನ್ನು
ತುಂಬಿ, ಸಲ್ಲದ ದಾರಿಗಳನ್ನು ತುಳಿಯುತ್ತಾ,
ಪತನದಿಂದಾಗುವ ನಾಶಕ್ಕೆ ಭಯಪಟ್ಟರೂ
ವಿಚಿತ್ರವಾಗಿ ಅದನ್ನೇ ಆಶಿಸುತ್ತಾ
ನಡೆದಿದ್ದೀಯಾ?
ನಾಶವೆಂದೇನ?
ಅದೊಂದು ಅನಿಶ್ಚಿತ ಪದ
ಏಕೆನ್ನುವಿಯಾ?
ಕೆಲವೊಂದು ಪತನದಲ್ಲಿ ನಾಶವಿಲ್ಲದೆಯೆ
ಹೊಸ ಸಂತಸ ಕೀರ್ತಿಗಳ ಸಾಧ್ಯತೆಯೂ ಇದೆ.
ಪ್ರೇಮ ಪತನವೂ ಅವುಗಳಲ್ಲೊಂದು
ಆದರೂ ವಿವೇಕ ಎಚ್ಚರಿಸುತ್ತಿದೆ
'ಪತನದಲ್ಲೂ ನೋವು ಗಾಯಗಳು
ತಪ್ಪಿದವರೂ ಇಲ್ಲವೆಯೆ ಇಲ್ಲ' ಎಂದು
ಆದರೆ ವಿವೇಕಕ್ಕೆ ಗೋಲಿ ಹೊಡಿ
ಈಗ ಸದ್ಯಕ್ಕೆ ಯಾರು ವಿವೇಕಿಯಾಗಿದ್ದಾರೆ?
ಅಥವಾ ಆಗಬಯಸುತ್ತಾರ?
ನಾನಂತೂ ಇಲ್ಲ!
ನೀನು ಬಯಸುವೆಯಾ?

*

ನಿಪುನ್ ಕರನ್‌ಳೊಂದಿಗೆ ಆಕೆಯ ಕೋಣೆಯಲ್ಲಿ ಕುಳಿತು ಮಾತಾಡುತ್ತಿದ್ದ. ಕಾರ್ಯಭಾರದಿಂದ ಅವಳ ಭೇಟಿ ಆತನಿಗೆ ಸಾಧ್ಯವಾಗಿರಲಿಲ್ಲ. ಇಂದು ಪುರುಸೊತ್ತಾಗಿತ್ತು. ಅಂದು ನವೆಂಬರ್ ತಿಂಗಳ ಮೊದಲ ವಾರದ ಒಂದು ಸಂಜೆ. ಕೋಣೆಯಲ್ಲಿ ಮಂದವಾದ ಬೆಳಕಿತ್ತು. ಹಿತವಾಗಿತ್ತು. ಸುರಿಯುತ್ತಿದ್ದ ಮಳೆಯ ಧಾರೆ ಕಿಟಕಿಗಳನ್ನು ಅಪ್ಪಳಿಸುತ್ತಿತ್ತು. ಯಾಂತ್ರಿಕ ಶ್ವಾಸಕೋಶದ ಪೂಂಕಾರ ಕೃತ್ರಿಮ ಉಸಿರಾಟದ ಗಾಳಿಯ ಚಲನೆಯ ಸದ್ದು. ಒಳಗೆ ಅಡಿಗೆ ಮನೆಯಲ್ಲಿ ಕಪಾಟಿನ ಬಾಗಿಲು ತೆಗೆದು ಹಾಕಿದ ಶಬ್ದ, ಪಾತ್ರೆಗಳ ಶಬ್ದ ಎಲ್ಲವೂ ಸೇರಿ ಒಂದು ವಿಚಿತ್ರ ಆದರೂ ಅಪ್ಯಾಯಮಾನವಾದ ವಾತಾವರಣ ಉಂಟಾಗಿತ್ತು.

"ಅಂದು ಪವರ್ ಹೋದ ದಿನ ನಾನು ಚಲನಚಿತ್ರ ನೋಡಲು ಒಂದು ಥಿಯೇಟರ್‌ಗೆ ಹೋಗಿದ್ದೆ. ಅಲ್ಲಿ ಗಾಲಿ ಕುರ್ಚಿಗಳಲ್ಲಿ ಕುಳಿತೇ ಒಳ ಪ್ರವೇಶಿಸಬಹುದು. ಈಗ ಈ ಹಂಪರ್ ಡಿಂಕ್ ಬಂದ ಮೇಲೆ ನಾನು ಏನೆಲ್ಲಾ ಮಾಡಬಲ್ಲೆ ಗೊತ್ತಾ?"

"ಹಂಪರ್ ಡಿಂಕ್" ನಿಪುನ್ ಆಶ್ಚರ್ಯದಿಂದ ಉದ್ಗರಿಸಿದ.

"ಹಾಂ ಹಂಪರ್ ಡಿಂಕ್. ಅದು ನನ್ನ ಪ್ರೀತಿಯ ವ್ಯಾನ್. ಅದನ್ನು ಕಂಡರೆ ನನಗೆಷ್ಟು ಇಷ್ಟ ಅಂದರೆ ಅದನ್ನು ಕೇವಲ ವ್ಯಾನ್ ಎಂದು ಕರೆಯಲು ನನಗೆ ಮನಸ್ಸೇ ಬರಲಿಲ್ಲ. ಅಂತೆಯೇ ಅದಕ್ಕೊಂದು ಹೆಸರಿಟ್ಟೆ. ಹಿಂದೆ ಅಸಾಧ್ಯವಾಗಿದ್ದ ಎಷ್ಟೋ ಕೆಲಸಗಳು ಈಗ ಬಹಳ ಸುಲಭವಾಗಿವೆ. ಅಂದು ಜೋಸಿ ವ್ಯಾನ್ ನಡೆಸುತ್ತಿದ್ದಳು. ಇದ್ದಕ್ಕಿದ್ದಂತೆ ಸುತ್ತಲೂ ಕತ್ತಲಾಯಿತು– ಬೀದಿ ಮನೆ ಎಲ್ಲ ಕಡೆಗೂ."

"ಹೌದ್ದಾದು. ಸುಮಾರು ಒಂದು ನೂರು ಚದರ ಮೈಲಿಯಲ್ಲಿ ಎಲ್ಲಾ ಕಡೆ ಹೋಗಿತ್ತು," ಎಂದ ನಿಪುನ್.

"ನನಗೆ ಅದು ತಿಳಿಯದು. ಆದರೆ ಬಹಳ ದೂರ ಹೋಗಿತ್ತೆಂದು ಮಾತ್ರ ಗೊತ್ತು. ಜೋಸಿ ಕೂಡಲೆ ವ್ಯಾನನ್ನು ರೆಡ್‌ವುಡ್ ಗ್ರೋವ್ ಆಸ್ಪತ್ರೆಗೆ ಕೊಂಡೊಯ್ದಳು. ನನಗೇನಾದರೂ ತೊಂದರೆಯಾದರೆ ಆ ಆಸ್ಪತ್ರೆಗೇ ಹೋಗುವುದು. ಅಲ್ಲಿ ತುರ್ತು ಸರಬರಾಜಿಗೆ ಜನರೇಟರುಗಳಿವೆ. ಅಲ್ಲಿಯ ಸಿಬ್ಬಂದಿ ನನ್ನನ್ನು ನೋಡಿಕೊಂಡರು. ನಾನು ಮೂರು ದಿನ ಅಲ್ಲಿದ್ದು, ಪೂರ್ತಿ ಪವರ್ ಬಂದ ಮೇಲೆ ಮನೆಗೆ ಬಂದೆ."

"ಆಗ ನಾನು ನಿಮ್ಮ ಮನೆಗೆ ಫೋನ್ ಮಾಡಿ ವಿಷಯ ತಿಳಿದುಕೊಂಡೆ."

ಆಗ ಜೋಸಿ ನಗುತ್ತಾ ಬಂದು, "ಊಟ ಬಡಿಸಿದೆ," ಎನ್ನುತ್ತ ಟ್ರೇ ತಂದಳು. ಊಟ ಸರಳವಾಗಿದ್ದರೂ ರುಚಿಯಾಗಿತ್ತು. ಕಳೆದ ಸಲದಂತೆಯೇ ಈ ಸಲವೂ ನಿಪುನ್ ತಾನೇ ಕರೆನ್‌ಳಿಗೆ ಊಟ ಮಾಡಿಸಿದ. ಆ ಏಕಾಂತ, ಆ ಸಾಮೀಪ್ಯ, ಆ ರಸದೂಟ ಎಲ್ಲಾ ಕಳೆದ ಸಲದಂತೆಯೇ ರೋಮಾಂಚಕವಾಗಿತ್ತು. ಊಟ ಮಾಡುತ್ತ ಆನಂದದಿಂದ ಮಾತಾಡುತ್ತಿದ್ದರು. ಮಾತುಕತೆಯ ನಡುವೆ ಆ

ವ್ಯಾನಿನ ಕಾರಣದಿಂದಾಗಿ ಆಕೆಯ ತಂದೆಗೆ ಒದಗಿದ ಆರ್ಥಿಕ ಮುಗ್ಗಟ್ಟಿನ ಬಗ್ಗೆ ನಿಮ್‌ಗೆ ಗೊತ್ತಾಗಿ ಸಹಜವಾಗಿಯೇ, "ನಾನು ಸಹಾಯ ಮಾಡುವೆ" ಎಂದ.

"ಬೇಡ. ಖಂಡಿತ ಬೇಡ. ನಮ್ಮ ಸ್ನೇಹ ಸುಂದರವಾಗಿದೆ. ಅದು ಅಮೂಲ್ಯ. ನನಗೆ ಅದೊಂದೇ ಸಾಕು. ನಮ್ಮ ಮನೆಯವರೇನಾದರೂ ಈ ಬಗ್ಗೆ ಪ್ರಯತ್ನಪಟ್ಟರೆ ನಾನು ಸಹಿಸುವುದಿಲ್ಲ. ಈಗಾಗಲೇ ನನಗೆ ಬಹಳ ಸಹಾಯ ಮಾಡಿದ್ದೀಯೆ," ಒಂದು ಕ್ಷಣ ತಡೆದು ಆಕೆ ಹೇಳಿದಳು, "ನಿಮ್. ನಾನೊಬ್ಬ ಸ್ವಾಭಿಮಾನಿ. ತಪ್ಪು ತಿಳಿಯಬೇಡ."

"ಅದು ನನಗೆ ಗೊತ್ತು ಕರೆನ್, ಅದಕ್ಕೇ ನಿನ್ನನ್ನು ಗೌರವಿಸುತ್ತೇನೆ."

ಒಂದು ನಿಮಿಷ ಸುಮ್ಮನಿದ್ದ ಕರೆನ್, "ನಿಮ್, ನಿನ್ನದೊಂದು ಮಾತು ಕೇಳಲೇ?" ಎಂದಾಗ ಕೇಳು ಎಂದ.

"ನಾವಿಬ್ಬರೂ ಒಟ್ಟಿಗೆ ಹೊರಗೆ ಹೋಗೋಣವೇ? ಯಾವುದಾದರೂ ಒಂದು ಸಂಗೀತ ಕಾರ್ಯಕ್ರಮಕ್ಕೆ?"

"ಏಕಾಗಬಾರದು?"

ಕರೆನ್‌ಳ ಮುಖ ಅರಳಿತು. ಉತ್ಸಾಹದಿಂದ ಅವಳು, "ನಿನಗೆ ಯಾವಾಗ ಅನುಕೂಲವಾಗುತ್ತದೆಂದು ನನಗೆ ತಿಳಿಸಿದರೆ ಸಾಕು. ನಾನು ಎಲ್ಲಾ ಸಿದ್ಧತೆ ಮಾಡುತ್ತೇನೆ. ನಿಮ್ ನನಗೆ ಬಹಳ ಸಂತೋಷವಾಗಿದೆ. ಆ ಸಂತೋಷ ವ್ಯಕ್ತಿಸಲು ಮತ್ತೆ ಚುಂಬಿಸು," ಎಂದಳು.

ನಿಮ್ ಆಕೆಯ ಬಳಿ ಹೋದಾಗ ಅವಳು ಮುಖ ಓರೆ ಮಾಡಿದಳು. ಅರಳಿದ ತುಟಿಗಳು ಸೇರಿದವು. ನಿಮ್ ಕೈಯೆತ್ತಿ ಅವಳ ಕೆಂಬಣ್ಣದ ಕೇಶರಾಶಿಯಲ್ಲಿ ಮೆದುವಾಗಿ ಬೆರಳಾಡಿಸಿದ. ನಿಮ್‌ನ ಕಾಮಪ್ರಜ್ಞೆ ಮತ್ತೆ ಜಾಗೃತವಾಯಿತು.

ತನ್ನೆದುರಿಗಿರುವ ಈ ಸೌಂದರ್ಯರಾಶಿ ಪೂರ್ಣವಾಗಿದ್ದರೆ ಮುಂದಿನ ಕ್ಷಣಗಳು ಅದೆಷ್ಟು ಸವಿಯಾಗುತ್ತಿದ್ದವೋ ಎಂಬ ಯೋಚನೆ ಮೂಡಿತು. ಆ ಚಿಂತೆಯನ್ನು ಮನದಿಂದ ದೂರ ಸರಿಸಿ ಅವಳಿಂದ ತುಸುವೇ ದೂರ ಸರಿದರೂ ಬಲು ಸಮೀಪದಲ್ಲೇ ಮುಖವಿಟ್ಟು ಕುಳಿತ.

"ನನಗೆ ರೆಕ್ಕೆಗಳಿದ್ದರೆ ನಾನಿಂದು ಮರ್ ಎಂದು ಹಾರಿ ಹೋಗುತ್ತಿದ್ದೆ," ಕರೆನ್ ನುಡಿದಳು.

ಬಾಗಿಲಿನಲ್ಲಿ ಕೆಮ್ಮಿನ ದನಿ ಕೇಳಿಸಿತು. ಅಲ್ಲಿ ಜೋಸಿ ನಿಂತಿದ್ದಳು. ಅಡಿಗೆಯ ಮನೆಯ ಬಿಳಿ ಉಡುಪು ತೆಗೆದು ಕಂದು ಬಣ್ಣದ ಉಣ್ಣೆಯ ಉಡುಪು ಧರಿಸಿದ್ದಳು. ಅವಳು ಎಷ್ಟು ಹೊತ್ತಿನಿಂದ ಅಲ್ಲಿ ನಿಂತಿದ್ದಳೋ ಏನೋ ಎಂದು ನಿಮ್ ಯೋಚಿಸಿದ. ಅವಳನ್ನು ನೋಡಿದೊಡನೆ ಕರೆನ್, "ಓ, ಜೋಸಿ, ನೀನು ಆಗಲೆ ತಯಾರಾಗಿದ್ದೀಯಾ?" ಎಂದು ಕೇಳಿ, ನಂತರ ನಿಮ್ ಕಡೆ ತಿರುಗಿ, "ಜೋಸಿ ಇಂದು ತನ್ನ ಮನೆಗೆ ಹೋಗುತ್ತಿದ್ದಾಳೆ, ಎಲ್ಲರನ್ನೂ ನೋಡಿಕೊಂಡು ಬರಲು," ಎಂದು ಸೇರಿಸಿದಳು.

"ನಾನೇನೋ ಸಿದ್ಧಳಾಗಿದ್ದೇನೆ. ಆದರೆ ನಿನ್ನನ್ನು ಹಾಸಿಗೆಗೆ ಸೇರಿಸಿದ ನಂತರ ತಾನೇ ಹೋಗುವುದು?"

ಕರೆನ್ ತುಸು ನಾಚಿಕೆಯಿಂದ ಕೆಂಪಾದ ಮುಖದಿಂದ ಹೇಳಿದಳು, "ಬೇಡ... ಹೋಗು... ನಿಮ್... ಬೇಸರವಿಲ್ಲದಿದ್ದರೆ..."

ನಿಮ್ ಕೂಡಲೇ, "ಏನು ಮಾಡಬೇಕೆಂದು ನೀನು ಹೇಳಿದರೆ ಸಂತೋಷದಿಂದ ಮಾಡುತ್ತೇನೆ" ಎಂದ.

"ಹಾಗಿದ್ದರೆ ಸರಿ, ನಾನಿನ್ನು ಹೋಗುತ್ತೇನೆ. ಶುಭ ರಾತ್ರಿ," ಎಂದು ಜೋಸಿ ಹೇಳಿ ಹೊರಟಳು. ಸ್ವಲ್ಪ ಕಾಲದ ನಂತರ ಬಾಗಿಲು ಹಾಕಿದ ಶಬ್ದ ಕೇಳಿಸಿತು. ನಂತರ ಕರೆನ್, ಜೋಸಿ ನಾಳೆ ಬೆಳಗ್ಗೆಯ ವರೆಗೂ ಬರುವುದಿಲ್ಲ. ಸಾಮಾನ್ಯವಾಗಿ ಇಂಥ ವೇಳೆಯಲ್ಲಿ ಬೇರೊಬ್ಬಳು ಬಂದಿರುತ್ತಾಳೆ. ಇಂದು ಅವಳಿಗೂ ಮೈ ಸರಿಯಿಲ್ಲ. ಅದಕ್ಕೆ ಈ ದಿನ ನಮ್ಮಕ್ಕ ಸಿಂಥಿಯಾ ಬರುತ್ತಾಳೆ," ಎಂದು ಗಡಿಯಾರದ ಕಡೆ ನೋಡಿ, "ಅವಳು ಬರಲು ಇನ್ನೂ ಒಂದೂವರೆ ಘಂಟೆ ತಡವಾಗಬಹುದು. ಅದುವರೆಗೂ ಇರುತ್ತೀಯಾ?" ಎಂದು ಕೇಳಿದಳು.

"ಧಾರಾಳವಾಗಿ," ಎಂದ.

"ನಿನಗೇನಾದರೂ ಕೆಲಸವಿರುವುದಾದರೆ ಜೆಮಿನಿಯನ್ನು ಕರೆಯುತ್ತೇನೆ."

"ಬೇಡ ನಾನಿದ್ದೀನಲ್ಲ," ಎಂದವನೇ ನಿಮ್ ಅವಳತ್ತ ಬಾಗಿ ದೀರ್ಘವಾಗಿ ಚುಂಬಿಸಿದ. ರೋಮಾಂಚಿತಳಾದ ಕರೆನ್ ಮೆದುವಾಗಿ "ನಿಮ್ರಾಡ್" ಎಂದು ಉಸುರಿದಳು.

"ಹೇಳು ಕರೆನ್."

"ನಾನು ಮಲಗಬೇಕು."

"ಏನು ಮಾಡಬೇಕು, ಹೇಳು."

"ಕುರ್ಚಿಯ ಪ್ಲಗ್ ತೆಗೆ."

ನಿಮ್ ಕುರ್ಚಿಯ ಹಿಂದೆ ಹೋಗಿ ಪ್ಲಗ್ ತೆಗೆದ, ಕೂಡಲೇ ಬ್ಯಾಟರಿ ಕೆಲಸ ಆರಂಭಿಸಿತು. ಅವಳ ಮುಖದಲ್ಲಿ ತುಂಟ ನಗೆಯೊಂದು ಮಿಂಚಿತು. "ನನ್ನ ಹಿಂದೆ ಬಾ" ಎಂದು ಹೇಳಿ ತಲೆಯ ಬಳಿಯಿದ್ದ ನಳಿಕೆಯಲ್ಲಿ ಗಾಳಿಯನ್ನು ಊದುತ್ತಾ, ಎಳೆಯುತ್ತಾ ಸರಸರನೆಂದು ತನ್ನ ಕೊಠಡಿಯಿಂದ ಹೊರಬಂದು ಬೇರೊಂದು ಕೋಣೆಯ ಮೂಲಕ ತನ್ನ ಮಲಗುವ ಕೋಣೆ ಸೇರಿದಳು. ನಿಮ್ ಅವಳ ಈ ಚುರುಕಿನ ಓಡಾಟ ಕಂಡು ಬೆರಗಾದ. ಆ ಕೋಣೆಯಲ್ಲಿ ಒಂದು ಸಿದ್ಧಪಡಿಸಿದ ಹಾಸಿಗೆಯಿತ್ತು. ಪಕ್ಕದಲ್ಲಿ ದೀಪವೊಂದು ಮಂದವಾಗಿ ಉರಿಯುತ್ತಿತ್ತು. ಕರೆನ್ ತನ್ನ ಕುರ್ಚಿಯನ್ನು ಹಾಸಿಗೆಯ ಕಾಲಿನ ಭಾಗಕ್ಕೆ ತಂದು ನಿಲ್ಲಿಸಿದಳು. ನಿಮ್ ಕಡೆ ನೋಡಿದಳು.

"ಈಗೇನು?"

"ನನ್ನನ್ನು ಕುರ್ಚಿಯಿಂದ ಎತ್ತಿ ಹಾಸಿಗೆಯಲ್ಲಿ ಮಲಗಿಸು. ನೀನು ಬಲವಾಗಿದ್ದೀಯೆ, ನಿಮ್ರಾಡ್, ನನ್ನನ್ನು ನಿನ್ನ ತೋಳುಗಳಲ್ಲಿ ಎತ್ತಿಕೋ."

ನಿಮ್ ಹಾಗೇ ಮಾಡಿದ. ಬಲವಾದ ತೋಳುಗಳಿಂದ ಮುದ್ದು ನಾಯಿ ಮರಿಯನ್ನು ಎತ್ತುವಂತೆ ಎತ್ತಿದ. ಆಕೆಯ ಮೈಯ ಬಿಸಿ ಹಾಗೂ ನುಣುಪಿನ ಅನುಭವ ರೋಮಾಂಚನಗೊಳಿಸುವಂತಿತ್ತು. ಮಲಗಿಸಿದ ನಂತರ ಅವಳು, "ಉಸಿರಾಟದ ಯಂತ್ರವನ್ನು ಜೋಡಿಸು," ಎಂದಳು.

ಅವಳು ಹಾಸಿಗೆಯ ಮೇಲಿದ್ದಳು. ಅವಳ ತಲೆಗೂದಲು ದಿಂಬಿನ ಮೇಲೆ ಹರಡಿತ್ತು. "ಇನ್ನೇನು ಮಾಡಬೇಕು ?"

"ಇನ್ನು" ಅವಳ ಕೆಂಪು ಕೆನ್ನೆ, ಲಜ್ಜೆಯಿಂದ ಇನ್ನೂ ಕೆಂಪಾಯಿತು, "ನನ್ನ ಉಡುಪು ತೆಗೆ" ಎಂದಳು.

ಅವಳ ಕಣ್ಣು ಅರ್ಧ ಮುಚ್ಚಿತ್ತು. ನಿಮ್‌ನ ಕೈ ಕಂಪಿಸುತ್ತಿದ್ದವು. ಈಗ ನಡೆಯುತ್ತಿರುವುದು ನಿಜವೇ ಎಂಬ ಸಂದೇಹ ಅವನನ್ನು ಬಾಧಿಸುತ್ತಿತ್ತು. ಕೆಲವು ದಿನಗಳ ಹಿಂದೆ ಅವನು ತನಗೆ ತಾನೇ ಹೇಳಿಕೊಂಡಿದ್ದ ಕರೆನ್‌ಳೊಂದಿಗೆ ಪ್ರೇಮವೆಂದರೆ ಶರೀರ ಸಂಬಂಧವಿಲ್ಲದ ಪ್ರೇಮ ಎಂದು. ಆದರೆ ಅವನು ಅಂದುಕೊಂಡಿದ್ದು ತಪ್ಪೇ ? ಕರೆನ್‌ಳೊಂದಿಗೂ ರತಿ ಹಾಗೂ ಪ್ರೀತಿ ಸಾಧ್ಯವೇ? ಹೇಗೆ ಮಾಡುವುದು? ಅವಳ ಅಸಹಾಯಕತೆಯ ದುರುಪಯೋಗ ಮಾಡಿಕೊಂಡ ಹಾಗಲ್ಲವೇ ? ಹಾಗೆ ಮಾಡಬಹುದೆ ? ಹಾಗೆ ಮಾಡಬೇಕೇ ?– ನ್ಯಾಯಧರ್ಮದ ಸಮಸ್ಯೆಗಳು ಉತ್ತರವಿಲ್ಲದ ಪ್ರಶ್ನೆಗಳನ್ನು ಹೆಣೆದವು.

ಆದರೆ ಈ ವೇಳೆಗೆ ನಿಮ್ ತಗರಿವಿಲ್ಲದಂತೆ ಅವಳ ಉಡುಪು ತೆಗೆದಿದ್ದ. "ನಿಮ್" ಎಂದು ಮೆಲುದನಿಯಲ್ಲಿ ಕರೆದಾಗ ಅವನು ಬಾಗಿ ಚುಂಬಿಸಿದ. ಅವಳು ಅವನೆದುರು ವಿವಸ್ತ್ರಳಾಗಿದ್ದರೂ ಅವನ ತಲೆಯಲ್ಲಿ ಸಂದೇಹಗಳು, ಸಮಸ್ಯೆಗಳು ಜೊಂಬರ ಕುಣಿತ ನಡೆಸಿದ್ದವು.

"ನಿಮ್, ನಾನು ನಿನಗೊಂದು ವಿಷಯ ಹೇಳಬೇಕು."

"ಏನು ?"

"ನಾನು ಕನ್ಯೆಯೇನಲ್ಲ. ಅದಾಗಿದ್ದು ನಾನು ಹದಿನೈದು ವರ್ಷಗಳಾಗಿದ್ದಾಗ. ನನ್ನ ಗೆಳೆಯನೊಬ್ಬನಿದ್ದ. ನನಗೆ ಈ ರೋಗ ಬರುವ ಮೊದಲು..." ಅವಳ ಕಣ್ಣುಗಳಿಂದ ಕಣ್ಣೀರು ಧಾರಾಕಾರವಾಗಿ ಹರಿಯುತ್ತಿತ್ತು.

"ಬೇಡ, ಕರೆನ್, ಬೇಡ."

ಅವಳು ತಲೆಯಾಡಿಸಿದಳು. "ನಾನು ನಿನಗೆ ಹೇಳಬೇಕು. ಏಕೆಂದರೆ ನನ್ನ ಬಾಳಿನಲ್ಲಿ ಇಷ್ಟು ವರ್ಷಗಳಲ್ಲಿ ಬೇರೆ ಯಾರೂ ಬಂದಿಲ್ಲ– ಅಂದಿನ ಆ ಗೆಳೆಯನ ನಂತರ ಇಂದು ನೀನು." ಕಂಪಿಸುವ ದನಿಯಲ್ಲಿ ಆಕೆ ಅರ್ಧಂಬರ್ಧ ಹೇಳಿದಳು.

ಅವಳು ಹೇಳಿದ್ದನ್ನು ಅರ್ಥ ಮಾಡಿಕೊಳ್ಳಲು ಅವನಿಗೆ ಸ್ವಲ್ಪ ಕಾಲ ಹಿಡಿಯಿತು.

"ನೀನು ಹೇಳುತ್ತಿರುವುದು..."

"ಹೌದು, ನಿಮ್. ನನಗೆ ನೀನು ಬೇಕು ಈಗಲೇ."

ನಿಮ್ ಎಷ್ಟೋ ಸಲ ಅಂಗವಿಕಲ ಹೆಣ್ಣೊಂದಿಗೆ ಆರೋಗ್ಯಶಾಲಿ ಗಂಡಿನ ಸಂಭೋಗ ಹೇಗೆ ಇರಬಹುದೆಂದು ಯೋಚಿಸಿದ್ದ. ಕರೆನ್‌ಳಂತಹ ಹೆಂಗಸು ಪೂರ್ಣ ನಿಷ್ಕ್ರಿಯಳೇ? ಹಾಗಿದ್ದರೆ ಕೊನೆಯಲ್ಲಿ ಸುಖ ಯಾರಿಗೆ? ಒಬ್ಬರಿಗೋ? ಇಬ್ಬರಿಗೋ? ಅಥವಾ ಯಾರಿಗೂ ಇಲ್ಲವೋ?

ಇಂದು ಆತ ತನ್ನ ಪ್ರಶ್ನೆಗಳಿಗೆಲ್ಲ ಉತ್ತರಗಳನ್ನು ಪಡೆಯುತ್ತಿದ್ದ. ಎಲ್ಲ ಉತ್ತರಗಳೂ ಅನಿರೀಕ್ಷಿತವಾಗಿಯೇ ಇದ್ದವು. ಒಂದು ಅರ್ಥದಲ್ಲಿ ಕರೆನ್ ನಿಷ್ಕ್ರಿಯಳಾಗಿಯೇನೋ ಇದ್ದಳು. ಅವಳ ಶರೀರದಲ್ಲಿ ತಲೆಯೊಂದನ್ನುಳಿದು ಉಳಿದ ಅಂಗಗಳು ಚಲಿಸಲಶಕ್ತವಾಗಿದ್ದವು. ಆದರೂ ಅವಳು ಆಸಕ್ತಳಾಗಿದ್ದಳು, ಉತ್ಸುಕಳಾಗಿದ್ದಳು, ರೋಮಾಂಚಕವಾಗಿದ್ದಳು, ತೃಪ್ತಿದಾಯಕಳೂ ಆಗಿದ್ದಳು. ಆ ಸುಖ ಕ್ಷಣಿಕವೂ ಆಗಿರಲಿಲ್ಲ, ಏಕಮುಖಿಯೂ ಆಗಿರಲಿಲ್ಲ.

ಕೊನೆಯಲ್ಲಿ ನಿದ್ರೆಯಲ್ಲಿದ್ದವಳಂತೆ ಇದ್ದರೂ ಅವಳು ಅತೀವ ಸಂತೋಷದಿಂದ ಉಲಿದಳು. "ಈ ದಿನ ನನ್ನ ಜೀವನದಲ್ಲಿಯೇ ಮಹಾಸುದಿನ."



ಸಿಂಥಿಯಾ ಕರೆನ್‌ಳ ಮಲಗುವ ಕೋಣೆಗೆ ಹೋಗಿ ಬಾಗಿಲು ಹಾಕೊಂಡಳು. ಒಳಗಿನಿಂದ ನಿಮ್‌ಗೆ ಕೇವಲ ಗುಸುಗುಸು ಮಾತು ಕೇಳಿಬಂತು. ೧೫ ನಿಮಿಷಗಳ ನಂತರ ಆಕೆ ಹೊರಬಂದು ಆತನ ಎದುರಿಗೇ ಕುಳಿತು, "ಈ ದಿನ ಇಲ್ಲೇನು ನಡೆಯಿತೆಂದು ನನಗೆ ಗೊತ್ತು. ಕರೆನ್ ಎಲ್ಲಾ ಹೇಳಿದಳು" ಎಂದಳು.

ಅವಳ ನೇರ ಮಾತಿನಿಂದ ಬೆಚ್ಚಿದ ನಿಮ್ ಪೇರೇನೂ ತೋಚದೆ, "ಹೌದಾ?" ಎಂದ. ಮುಖ ಪೆಚ್ಚಾಗಿತ್ತು.

"ಇಲ್ಲಿ ನೋಡಿ, ನಿಮ್ರಾಡ್. ನಿಮಗೆ ಆಘಾತವುಂಟುಮಾಡಿದ್ದರೆ ಕ್ಷಮಿಸಿ. ನಾನು ಆಘಾತ

ಉಂಟು ಮಾಡಿರುವೆನೆಂದು ನನಗೆ ಗೊತ್ತು. ನಾನೊಂದು ವಿಷಯ ಹೇಳಲೆ? ಕರೆನ್ ನಿಮ್ಮನ್ನು ದಯಾಳು, ಸಭ್ಯ ಹಾಗೂ ತನಗೆ ಇದುವರೆಗೆ ಸಿಕ್ಕಿದವರಲ್ಲಿ ಅತಿ ಒಳ್ಳೆಯ ಸ್ನೇಹಿತನೆಂದು ಭಾವಿಸುತ್ತಾಳೆ. ನೀವು ಸಿಕ್ಕಿದ್ದು ತನ್ನ ಅದೃಷ್ಟವೆಂದು ನಂಬಿದ್ದಾಳೆ. ನಾನೂ ಹಾಗೆಯೇ ಭಾವಿಸುತ್ತೇನೆ."

ನಿವ್ ಅವಳತ್ತಲೇ ನೋಡುತ್ತಿದ್ದ. ಅವಳ ಕಣ್ಣಲ್ಲಿ ಹನಿ ಮೂಡಿತ್ತು.

"ಈ ದಿನ ನಾನು ಕೂಡ ಕರೆನ್‌ಳಷ್ಟೇ ತೃಪ್ತಳು ಹಾಗು ಸುಖಿ ಎಂದು ನನಗನ್ನಿಸುತ್ತಿದೆ.



ಕೆಲವರು ಕರೆನ್‌ಳಂಥವರನ್ನು ಕುಷ್ಠರೋಗಿಗಳಂತೆ ನೋಡುತ್ತಾರೆ. ನಾನು ಹಲವು ಬಾರಿ ಗಮನಿಸಿದ್ದೇನೆ. ಆದರೆ ನೀವು ಅವಳನ್ನೆಂದೂ ಆ ರೀತಿ ನೋಡಿಲ್ಲ" ಎಂದವಳೆ ಕಣ್ಣೊರೆಸಿಕೊಂಡಳು. ಆನಂದಬಾಷ್ಪದ ಪೂರ ಹರಿಯುತ್ತಿತ್ತು.

"ನೋಡಿ, ಇದೆಲ್ಲಾ ಆಕಸ್ಮಿಕವಾಗಿ ನಡೆದು ಹೋಯಿತು" ಎಂದ ನಿವ್.

"ಬಹಳಷ್ಟು ವಿಷಯಗಳು ಆಕಸ್ಮಿಕವೇ" ಎಂದ ಸಿಂಥಿಯಾ,

"ಈ ಬಗ್ಗೆ ಅಪರಾಧಭಾವ ನಿಮಗಿತ್ತೆ? ಈಗ ಇದೆಯೇ?" ಮತ್ತೆ ಕೇಳಿದಳು.

ಅವನು ಹೌದೆಂದು ತಲೆಯಾಡಿಸಿದ.

"ಹಾಗೆ ತಿಳಿಯಬೇಡಿ. ಎಲ್ಬನ್ ಡೈಮಂಡ್ ಎಂಬಾತ ಹವಾಯಿಯ ಒಬ್ಬ ವೈದ್ಯಕೀಯ ಪ್ರೊಫೆಸರ್. ಆತ 'ಅಂಗವಿಕಲರಲ್ಲಿ ಕಾಮ'ದ ಬಗ್ಗೆ ಅಧ್ಯಯನ ನಡೆಸಿದ್ದ. ಆತ ಬರೆದ ಲೇಖನದ ಪದಗಳು ನನಗೆ ನೆನಪಿಲ್ಲ. ಆದರೆ ಅದರ ಸಾರಾಂಶವೆಂದರೆ 'ಸಮಾಜದ ಕಟ್ಟು ನಿಟ್ಟಿನ ನಿಯಮಾವಳಿಗಳಲ್ಲದೇ ಅಂಗವಿಕಲರಿಗೆ ಬೇಕಾದಷ್ಟು ಸಮಸ್ಯೆಗಳಿವೆ. ಸ್ವಂತದ ಕಾಮತೃಪ್ತಿ ಸಮಾಜದ ಒಪ್ಪಿಗೆಗಿಂತ ಪ್ರಾಮುಖ್ಯ ಪಡೆಯುತ್ತದೆ. ಅದ್ದರಿಂದ ಯಾವ ರೀತಿಯ ಅಪರಾಧಭಾವವೂ ತಪ್ಪು. ಈ ವಿಷಯದಲ್ಲಿ, ಅವರ ಕಾಮತೃಪ್ತಿ ಯಾವ ವಿಧದಲ್ಲಾದರೂ ಸರಿ' ಎಂದು. ಅಂದ ಮೇಲೆ ತಪ್ಪು ಮಾಡಿದೆನೆಂದು ಕೊರಗುವುದು ಸಲ್ಲದ ಸಂಗತಿ. ಅಪರಾಧಿ ಭಾವವನ್ನು ತೊಡೆದು ಹಾಕಿ." ಎಂದಳು ಸಿಂಥಿಯಾ.

•

ಕೆಲವು ದಿನಗಳ ಹಿಂದೆ ನಿವ್‌ಗೆ ಕರೆನ್‌ಳಿಂದ ಒಂದು ಪತ್ರ ಬಂದಿತ್ತು. ಒಕ್ಕಣೆ ಹೀಗಿತ್ತು:

ದಿನಗಳು ಬರುತ್ತವೆ, ಹೋಗುತ್ತವೆ.

ಕೆಲವು ದಿನ ನೀನು ಮಹಾಜನಗಳೊಂದಿಗೆ ಸುದ್ದಿಯಲ್ಲಿರುತ್ತೀಯೆ. ಆದರೆ ಅವರೆಲ್ಲರಲ್ಲಿ ನಿವ್‌ರಾಡ್ ಮಾತ್ರ ನನ್ನ ಹೃದಯ ಪತ್ರಿಕೆಯ ಮುಖಪುಟಕ್ಕೆ ಅರ್ಹ. ನಿನ್ನ ಬಗ್ಗೆ ಓದುವುದು ಸುಖ ಕೊಡುತ್ತದೆ. ಅದಕ್ಕಿಂತ ಮುಖ್ಯವೆಂದರೆ

ನಿನ್ನನ್ನು ನೋಡುವುದು, ಕೇಳುವುದು, ಮುಟ್ಟುವುದು, ಪ್ರೀತಿಸುವುದು.

ಅದನ್ನು ಓದಿ ನಿಮ್ ನಿಟ್ಟುಸಿರೆಳೆದ. ಅವಳನ್ನು ನಿಜಕ್ಕೂ ನೋಡಬೇಕೆಂಬ ಆಸೆ ಅವನಲ್ಲಿ ಉತ್ಕಟವಾಗಿಯೇನೋ ಇತ್ತು. ಜೊತೆಗೆ ಒಂದು ರೀತಿಯ ಅಪರಾಧಭಾವ ಕೂಡ. ತಾವಿಬ್ಬರೂ ಪ್ರೇಮಿಸಿದ ಆ ಅವಿಸ್ಮರಣೀಯ ಸಂಜೆಯ ನಂತರ ಅವನು ಅವಳ ಮನೆಗೆ ಒಂದೆರಡು ಬಾರಿ ಹಗಲಿನ ವೇಳೆಯಲ್ಲಿ ಹೋಗಿದ್ದ. ಆದರೆ ಬಹಳ ಹೊತ್ತು ಅವಳೊಡನೆ ಕಳೆದಿರಲಿಲ್ಲ. ತನ್ನೊಡನೆ ಇನ್ನೂ ಹೆಚ್ಚು ಕಾಲ ಕಳೆಯಲು ಕರೆನ್ ಇಷ್ಟಪಡುತ್ತಾಳೆಂದು ಅವನಿಗೂ ಗೊತ್ತಿತ್ತು.

ಈಗ ಅವನ ಪತ್ನಿ ಪರವೂರಿಗೆ ಹೋಗಿದ್ದು ಕರೆನ್ ಜೊತೆ ಸ್ವಲ್ಪ ಹೆಚ್ಚು ಸಮಯ ಕಳೆಯಲು ಅವಕಾಶ ಕೊಟ್ಟಿತ್ತು. ಸಂಜೆಯಲ್ಲಿ ಅವಳ ಮನೆಯಲ್ಲೇ ಕಳೆಯುವ ಬದಲು ಒಂದು ಸಂಗೀತ ಕಾರ್ಯಕ್ರಮಕ್ಕೆ ಹೋಗುವುದರ ಮೂಲಕ ತನ್ನ ಆತ್ಮಸಾಕ್ಷಿಯೊಡನೆ ರಾಜಿಯ ಯತ್ನ ನಡೆಸಿದ.

ನಿಮ್ ಕರೆನ್‌ಳ ಮನೆಗೆ ಬಂದಾಗ ಅವಳು ಅವನಿಗಾಗಿ ಕಾಯುತ್ತಾ ಇದ್ದಳು. ಕೆಂಪು ಉಡುಪು ಹಾಗೂ ಮುತ್ತಿನ ಸರ ಅವಳ ಸೌಂದರ್ಯಕ್ಕೆ ಮೆರಗಿತ್ತಿದ್ದವು. ಅರೆತೆರೆದ ತುಂಬಿದ ತುಟಿ ಹಾಗೂ ತಿಳಿ ನೀಲಿ ಕಂಗಳು ಅವನನ್ನು ಮುಗುಳ್ನಕ್ಕು ಸ್ವಾಗತಿಸಿದವು. ಸಾಮೀಪ್ಯದ ಸಿಹಿಯನ್ನು ಚುಂಬನದೊಡನೆ ಸವಿದಾಗ ನಿಮ್‌ನಲ್ಲಿ ಎಲ್ಲೋ ಮರೆಯಾಗಿದ್ದ ಕಾಮ ಹುಚ್ಚೆದ್ದು ಕುಣಿಯಿತು. ಸದ್ಯ, ಹೊರಗೆ ಹೋಗುತ್ತಿದ್ದೇವಲ್ಲಾ! ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡ.

"ನಿಮ್, ನಿನ್ನನ್ನು ನೋಡಿದರೆ ನಿನಗೆ ಬಹಳ ಆಯಾಸವಾಗಿದೆ ಎನಿಸುತ್ತದೆ."

"ಹಾಗೇನಿಲ್ಲವಲ್ಲ!" ಎಂದು ನಗೆ ತಂದುಕೊಂಡ.

ಕರೆನ್ ಎಂದಿನಂತೆ ನಳಿಕೆಯಲ್ಲಿ ಗಾಳಿಯನ್ನು ಊದುತ್ತಾ, ಎಳೆಯುತ್ತಾ ತನ್ನ ಕುರ್ಚಿಯನ್ನು ಓಡಾಡಿಸತೊಡಗಿದಾಗ ಅವಳ ಚುರುಕಿನ ಕೈ ಚಳಕಕ್ಕೆ ಎಂದಿನಂತೆ ಇಂದೂ ಬೆರಗಾದ. ಅವಳು ಮನೆಯಿಂದ ಹೊರಗೆ ಬಂದು ಒಂದು ಕಾರಿಡಾರಿನ ಮೂಲಕ ಎಲಿವೇಟರಿಗೆ ಬಂದಳು. ಅದರಲ್ಲಿ ಆ ಮೊದಲೇ ಇದ್ದ ಹತ್ತರೊಳಗಿನ ಹುಡುಗಿ ಹುಡುಗ ಕರೆನ್‌ಳನ್ನು ಸ್ವಾಗತಿಸಿದರು. ಹಿಂದೆಯೇ ನಿಮ್ ಕೂಡ ಒಳಸೇರಿದ.

"ಹಲೋ ಫಿಲಿಫ್. ಹಲೋ ಹೆಂಡಿ! ಹೊರಗೆ ಹೋಗುತ್ತಿದ್ದೀರಾ?" ಕೇಳಿದಳು ಕರೆನ್. ಹುಡುಗ ಉತ್ತರಿಸಿದ:

"ಇಲ್ಲ ಕರೆನ್, ಕೆಳಗೆ ಆಟವಾಡಲು ಹೋಗುತ್ತಿದ್ದೇವೆ." ನಂತರ ನಿಮ್ ಕಡೆ ತೋರಿಸಿ, "ಅವರಾರು?" ಎಂದ.

"ನನ್ನ ಗೆಳೆಯ, ಗೋಲ್ಡ್‌ಮನ್." ನಂತರ ನಿಮ್‌ಗೆ ಆ ಹುಡುಗರ ಪರಿಚಯ ಮಾಡಿ ಕೊಟ್ಟಳು.

ಲಿಫ್ಟ್ ಕೆಳಗಿಳಿಯುತ್ತಿದ್ದಂತೆ ಆ ಹುಡುಗ ಕೇಳಿದ, "ಕರೆನ್, ನಾನು ನಿನ್ನ ಕೈ ಮುಟ್ಟಬಹುದಾ?"

"ಅಗತ್ಯವಾಗಿ."

ಅವನು ಹಾಗೇ ಮಾಡಿದ. ಅವಳ ಕೈ ಮೇಲೆ ತನ್ನ ಬೆರಳನ್ನು ಮೆದುವಾಗಿ ಆಡಿಸಿದ. "ನಿನಗೆ ತಿಳಿಯುತ್ತದಾ?"

"ಹೌದು. ನಿನ್ನ ಕೈ ತುಂಬ ಮೃದುವಾಗಿದೆ," ಅವನಿಗೆ ಸಂತೋಷವಾಯಿತು.

ಆಗ ಹುಡುಗಿ, ಹಿಂದೆ ಬೀಳಲಿಚ್ಛಿಸದೆ, "ಕರೆನ್, ನಿನ್ನ ಕಾಲು ಬದಲಾಯಿಸಬೇಕಾ?" ಎಂದಳು.

"ಹ್ಞೂ, ಬದಲಾಯಿಸು."

ಎಚ್ಚರಿಕೆಯಿಂದ, ಮೊದಲೇ ತಾನು ತಿಳಿದಿದ್ದಂತೆ ಅವಳು ಕರೆನ್‌ಳ ಬಲಗಾಲನ್ನು ಎಡಗಾಲಿನ ಮೇಲಿರಿಸಿದಳು.

"ಥ್ಯಾಂಕ್ಸ್ ಹೆಂಡಿ"

ಕೆಳಗಿಳಿದ ಕೂಡಲೇ ಇಬ್ಬರೂ ಇವರಿಗೆ ಗುಡ್ ಬೈ ಹೇಳಿ ಆಡಲು ಓಡಿದರು.

"ಓಹ್, ಎಷ್ಟು ಸುಂದರ ದೃಶ್ಯ!" ನಿಮ್ ನುಡಿದ.

ಕರೆನ್ ನಗುತ್ತಾ, "ಮಕ್ಕಳು ಎಷ್ಟು ಚೆನ್ನಾಗಿ ಆಡಂಬರವಿಲ್ಲದವರಾಗಿರುತ್ತಾರಲ್ಲವೇ? ಹಿರಿಯರಂತೆ ಅವರಿಗೆ ಭಯವೂ ಇಲ್ಲ. ಪೂರ್ವಾಗ್ರಹವೂ ಇಲ್ಲ. ನಾನು ಈ ಕಟ್ಟಡಕ್ಕೆ ಮೊದಲು ಬಂದಾಗ ಮಕ್ಕಳು ನನ್ನನ್ನು, 'ನಿನಗೇನಾಗಿದೆ? ನಿನಗೇಕೆ ನಡೆಯಲು ಸಾಧ್ಯವಿಲ್ಲ?' ಎಂದೆಲ್ಲಾ

ಕೇಳುತ್ತಿದ್ದರು. ಆಗ ಹಿರಿಯರು ಅವರನ್ನು ಗದರಿಸು ಸಮ್ಮನಿರಿಸುತ್ತಿದ್ದರು. ಇಂಥ ಪ್ರಶ್ನೆಗಳಿಂದ ನನಗೇನೂ ಬೇಸರವಿರಲಿಲ್ಲ, ಎಂದು ಆ ಹಿರಿಯರನ್ನು ಸಮಾಧಾನಪಡಿಸಲು ಬಹಳ ದಿನಗಳೇ ಹಿಡಿದವು. ಆದರೆ ಇಲ್ಲಿ ಈಗಲೂ ಕೆಲ ಪ್ರೌಢರಿಗೆ ನನ್ನ ಬಳಿ ಮಾತಾಡಲು ಸಂಕೋಚ. ನನ್ನನ್ನು ನೋಡಿದ ಕೂಡಲೇ ಅವರು ಮುಖ ತಿರುಗಿಸಿ ಬಿಡುತ್ತಾರೆ."

ಕಟ್ಟಡದ ಮುಂಬಾಗಿಲಿನಲ್ಲಿ ಜೋಸಿ ವ್ಯಾನ್ ತಂದು ಕಾಯುತ್ತಿದ್ದಳು. ಪ್ಯಾಲೇಸ್ ಆಫ್ ಆರ್ಟ್ಸ್ ರಂಗಮಂದಿರದಲ್ಲಿ ಗಾಲಿ ಕುರ್ಚಿಗಾಗಿಯೇ ವಿಶೇಷ ಸ್ಥಳ ಕಾದಿರಿಸಿದ್ದರು.

ರಂಗಮಂದಿರದಲ್ಲಿ ದೀಪಗಳು ನಂದಿ ಸಂಗೀತ ನಿರ್ದೇಶಕ ರಂಗಮಂಚವನ್ನೇರಿದಾಗ, ಜನರ ಚಪ್ಪಾಳೆಯ ನಡುವೆ, ಕರೆನ್ ಪಿಸುಗುಟ್ಟಿದಳು, "ನಮ್ಮಿಬ್ಬರ ಸಂಬಂಧ ಈಗ ಮೊದಲಿನಂತಿಲ್ಲ ಅಲ್ಲವೇ, ನಿವ್?"

ನಿವ್ ಅವಳ ಸೂಕ್ಷ್ಮಗ್ರಾಹಕತ್ವವನ್ನು ಕಂಡು ಅಚ್ಚರಿಗೊಂಡ. ಆದರೆ ಸಂಗೀತ ಆರಂಭವಾದ್ದರಿಂದ ಅವನು ಉತ್ತರಿಸಲು ವೇಳೆ ಸಿಗಲಿಲ್ಲ. ಮೂರನೇ ಹಾಡಿನ ವೇಳೆ– ಅದೊಂದು ಭಾವಪೂರ್ಣ ಗೀತೆ– ನಿವ್ ಅವಳ ಕಂಗಳಲ್ಲಿ ಅಶ್ರುಬಿಂದುಗಳನ್ನು ಗಮನಿಸಿದ.

ವಿರಾಮ ಕಾಲದಲ್ಲಿ, ಬೇರೆಲ್ಲರೂ ಸ್ಥಳ ಬಿಟ್ಟು ಹೋದಾಗ, ಅಲ್ಲಿ ಅವರಿಬ್ಬರೇ ಉಳಿದರು. ಕೆಲ ಕಾಲ ಇಬ್ಬರೂ ಮೂಕರಾಗಿದ್ದರು. ನಂತರ ಅವಳು, "ಈಗ ಬೇಕಿದ್ದರೆ ನೀನು ನನ್ನ ಪ್ರಶ್ನೆಗೆ ಉತ್ತರ ಕೊಡಬಹುದು," ಎಂದಳು.

ನಿಟ್ಟುಸಿರಿಟ್ಟು ಹೇಳಿದ, "ಯಾವುದೂ ಒಂದೇ ರೀತಿ ಇರುವುದಿಲ್ಲ, ಅಲ್ಲವೇ ?"

"ಇರಬೇಕೆಂದುಕೊಂಡರೆ ನಾವು ಮೂರ್ಖರು ಅಷ್ಟೇ. ನಾನೆಂದೂ ಹಾಗೆ ನಿರೀಕ್ಷಿಸುವುದಿಲ್ಲ. ಓಹ್! ಕನಸು ಕಾಣುವುದು, ಅಸಾಧ್ಯವಾದುದಕ್ಕೆ ಹಾತೊರೆಯುವುದು. ಒಳ್ಳೆಯದೆಲ್ಲಾ ಕೊನೆಯವರೆಗೂ ಉಳಿಯಬೇಕೆಂದು ಆಸೆಪಡುವುದು ಇವೆಲ್ಲಾ ಎಷ್ಟು ಮಜ! ಆದರೆ ಒಂದು ವಿಷಯ. ನಾನು ವಾಸ್ತವವಾದಿ. ನನ್ನೊಡನೆ ಪ್ರಾಮಾಣಿಕವಾಗಿ ಹೇಳು ನಿವ್, ಏನಾಯಿತು? ಆ ದಿನದಿಂದ ನಿನ್ನಲ್ಲಿ ಏಕೆ ಮತ್ತು ಏನು ಬದಲಾವಣೆಯಾಯಿತು ?"

ಆಗ ನಿವ್ ತನ್ನ ಪತ್ನಿಯ ಬಗ್ಗೆ, ಅವಳ ಜೀವಕ್ಕೊದಗಿರುವ ಅಪಾಯಕಾರಿ ಕಾಯಿಲೆ, ಅದೇ ಕಾರಣವಾಗಿ ಬದುಕು ಬಿಟ್ಟಿದ್ದ ಅವರ ಪ್ರೇಮ ಜೀವನ ಬೆರೆರ ಬಗೆ ಎಲ್ಲಾ ಹೇಳಿದ. ಕರೆನ್ ಮೂಕಳಾಗಿ ಕುಳಿತು ಕೇಳಿದಳು. ಕೊನೆಗೆ, "ನಿನ್ನ ಮುಖ ನೋಡಿದ ಕೂಡಲೇ ಏನೋ ವೈಯಕ್ತಿಕವಾದ ಮುಖ್ಯವಾದ, ಕಾರಣವಿದೆಯೆಂದು ತಿಳಿದೆ. ಈಗ ಎಲ್ಲಾ ತಿಳಿದು ನಿಮ್ಮ ಪುನರ್ಮಿಲನದ ಬಗ್ಗೆ ಸಂತೋಷವಾಗಿದೆ. ಆದರೆ ನಿನ್ನ ಪತ್ನಿಯ ಕಾಯಿಲೆಯ ವಿಷಯ ತಿಳಿದು ದುಃಖವಾಗಿದೆ," ಎಂದಳು.

"ಸದ್ಯದಲ್ಲೇ ಗುಣವಾಗಬಹುದು."

"ನಾನೂ ಹಾಗೇ ಆಶಿಸುತ್ತೇನೆ."

ಆ ವೇಳೆಗೆ ಕಾರ್ಯಕ್ರಮದ ಎರಡನೇ ಭಾಗ ಆರಂಭವಾಯಿತು. ಜನರೆಲ್ಲ ಅವರವರ ಸ್ಥಳಗಳಿಗೆ ಹಿಂತಿರುಗುತ್ತಿದ್ದರು. ಕರೆನ್ ಮೆಲ್ಲಗೆ, "ನಾನು ನೀನು ಇನ್ನು ಮುಂದೆಯೂ ಸ್ನೇಹಿತರಾಗಿರುತ್ತೇವೆಂದು ನನಗನ್ನಿಸುತ್ತದೆ. ನಾನು ನಿನ್ನನ್ನು ಆಗಾಗ ನೋಡಬಯಸುತ್ತೇನೆ" ಎಂದಳು.

ಅವನು ಅವಳ ಕೈಯನ್ನು ಹಿಡಿದು ಹೇಳಿದ, "ಹೌದು, ಎಂದೆಂದೂ ಸ್ನೇಹಿತರೇ."

ಮನೆಗೆ ಹಿಂದಿರುಗುವಾಗ ಪ್ರಯಾಣ ಮೌನದಿಂದ ಸಾಗಿತು. ಕರೆನ್‌ಳ ಮನೆಯ ಮುಂದೆ ಅವರು ಒಂದು ಚುಂಬನದೊಂದಿಗೆ ಶುಭರಾತ್ರಿ ಹೇಳಿದರು. ಅದರಲ್ಲಿ ರಾಗದ ಸೋಂಕಿರಲಿಲ್ಲ. ಅವಳು, "ನಾನು ದಣಿದಿದ್ದೇನೆ" ಎಂದು ಹೇಳಿದ್ದರಿಂದ ನಿವ್ ಕರೆನ್‌ಳ ಮನೆಯ ಒಳಗೆ ಹೋಗದೆ ವಿಷಾದದಿಂದ ನಿಧಾನವಾಗಿ ತನ್ನ ಕಾರಿನೆಡೆಗೆ ನಡೆದ.

•

ಟೆಲಿಫೋನಿನಲ್ಲಿ ಕರೆನ್‌ಳ ದನಿ ಕೇಳಿದೊಡನೆ ನಿವ್, 'ಕರೆನ್, ರೆಡ್‌ವುಡ್ ಗ್ರೂಪ್ ಆಸ್ಪತ್ರೆಗೆ ನಾಳೆ ಹೋಗುತ್ತೀಯಷ್ಟೇ?' ಎಂದು ಕೇಳಿದ.

'ಹೌದು, ನಾಳೆ ಮಧ್ಯಾಹ್ನ ವಿದ್ಯುಚ್ಛಕ್ತಿ ಸರಬರಾಜು ನಿಲ್ಲುವುದಕ್ಕೆ ಬಹಳ ಮುಂಚೆಯೇ ನಾನು ಅಲ್ಲಿರುತ್ತೇನೆ.'

'ನೀನು ಇಂದೇ ಹೋಗುವುದಿದ್ದರೆ ನನಗೆ

ಇನ್ನೂ ಸಮಾಧಾನವಾಗುತ್ತಿತ್ತು. ಹೋಗುವುದ ಕ್ಕಾಗುತ್ತದೆಯೇ?'

'ಹೋಗಬಹುದು ನಿಮ್, ಆದರೆ ಏಕೆ? ಏನಾಯಿತು?'

'ನಮ್ಮಲ್ಲಿ ಇನ್ನೂ ಸ್ವಲ್ಪ ಸಮಸ್ಯೆಗಳಿವೆ-ಅನಿರೀಕ್ಷಿತ ಸಮಸ್ಯೆಗಳು. ಆದ್ದರಿಂದ ಇಂದು ವಿದ್ಯುಚ್ಛಕ್ತಿ ಇಲ್ಲದೇ ಇರಬಹುದು. ಹಾಗಾಗದೆಯೂ ಇರಬಹುದು. ಆದರೂ ನೀನು ಆಸ್ಪತ್ರೆಯಲ್ಲಿ ಇದ್ದೀಯೆಂದರೆ ನನಗೆ ನೆಮ್ಮದಿ.'

'ಅಂದರೆ ನಿನ್ನ ಪ್ರಕಾರ ನಾನು ಈಗಲೇ ಹೋಗಬೇಕಲ್ಲವೇ?'

'ಹೌದು, ಆದಷ್ಟು ಬೇಗ, ಇದು ಕೇವಲ ಮುನ್ನೆಚ್ಚರಿಕೆಯ ಕ್ರಮ ಅಷ್ಟೇ.'

'ಆಗಲಿ ನಿಮ್, ಜೋಸಿ ಇಲ್ಲೇ ಇದ್ದಾಳೆ. ನಾವು ಈಗಲೆ ತಯಾರಾಗುತ್ತೇವೆ ಆಮೇಲೆ ನಿಮ್..'

'ಏನು?'

'ನೀನು ದಣಿದಿದ್ದೀಯೆಂದು ತೋರುತ್ತದೆ.'

'ಹೌದು.'

'ನಿನ್ನ ಬಗ್ಗೆ ಒಂದಿಷ್ಟು ಗಮನಿಸಿಕೊ ನಿಮ್.'

*

ಈಗಾಗಲೇ ಮಧ್ಯಾಹ್ನ ಎರಡು ಗಂಟೆಯಾಗಿದೆಯೆಂದು ತಿಳಿದು ಕರೆನಳಿಗೆ ಭಯವಾಯಿತು. ಅವಳು ನಿಮ್‌ಗೆ ಆಸ್ಪತ್ರೆಗೆ ಹೋಗುತ್ತೇನೆಂದು ಹೇಳಿ ಕೆಲವೇ ಕ್ಷಣಗಳು ಕಳೆದಂತಿತ್ತು. ಅವಳು ಬಹಳ ಅಂಗಡಿಗಳನ್ನು ಸುತ್ತಿದ್ದಳು ಎಂದಿನಂತೆ. ತನಗೊಂದು ಸುಂದರ ಉಡುಪನ್ನು ಬಹಳ ಕಡಿಮೆ ದರದಲ್ಲಿ ಕೊಂಡಳು. ತನಗೆ ಬೇಕಾದ ಕಾಗದ ಸಿಂಥಿಯಾಳ ಹುಟ್ಟುಹಬ್ಬಕ್ಕೆ ಉಡುಗೊರೆ ಎಂದು ಕಲ್ಲುಹರಳುಗಳ ನೆಕ್‌ಲೇಸೊಂದನ್ನು ಖರೀದಿಸಿದಳು. ಜೋಸಿಗೆ ಹಲವಾರು ಔಷಧಿ ವಸ್ತುಗಳನ್ನು ಕೊಳ್ಳುವುದಿತ್ತು. ಇಷ್ಟಕ್ಕೆಲ್ಲ ಬಹಳ ಕಾಲ ತೆಗೆದುಕೊಂಡಿತ್ತು.

ಮನೆ ಬಿಡುವ ಮೊದಲೇ ಊಟ ಮುಗಿಸಿಕೊಂಡು ಹೋಗಬೇಕೆಂಬ ಜೋಸಿಯ ಸಲಹೆಯನ್ನು ಕರೆನ್ ಅನುಮೋದಿಸಿದ್ದಳು. ಅಲ್ಲಿಂದ ಪೇಟೆಯಿಂದ ಬಂದಕೂಡಲೇ ಕರೆನ್ ನಿಮ್ಮಗೆ ಕಳಿಸಲು ಪದ್ಯವೊಂದರ ರಚನೆಯಲ್ಲಿದ್ದಾಗ ಜೋಸಿ ಇಬ್ಬರಿಗೂ ಊಟ ತಯಾರಿಸಿದಳು. ಊಟದ ನಂತರ ಜೋಸಿ ಆಸ್ಪತ್ರೆಯಲ್ಲಿ ಕರೆನ್‌ಳಿಗೆ ಬೇಕಾಗುವ ಪದಾರ್ಥಗಳನ್ನೆಲ್ಲ ಒಂದು ಸೂಟ್‌ಕೇಸಿಗೆ ತುಂಬುತ್ತಿದ್ದಳು.

ಇದ್ದಕ್ಕಿದ್ದಂತೆ. ತುಂಬ ಅಭಿಮಾನದಿಂದ ಕರೆನ್, 'ಜೋಸಿ ನೀನೆಷ್ಟು ಒಳ್ಳೆಯವಳೇ, ನೀನು ನನಗಾಗಿ ಏನೆಲ್ಲ ಮಾಡುತ್ತಿ. ಬೇರೂ ಬೇಸರಿಸುವುದಿಲ್ಲ. ನಾನು ನಿನಗೇನು ಕೊಡಲಿ? ಏನು ಕೊಡಬಲ್ಲೆ ಹೇಳು' ಎಂದಳು.

'ನಿನ್ನ ಜೊತೆಯಲ್ಲಿರುವುದೊಂದೇ ನನಗೆ ಸಾಕು,' ಜೋಸಿ ತಲೆಯೆತ್ತದೆ ತನ್ನ ಕೆಲಸ ಮುಂದುವರಿಸುತ್ತಾ ಹೇಳಿದಳು.

'ಜೋಸಿ ಆ ಕೆಲಸ ನಿಲ್ಲಿಸಿ ಇಲ್ಲಿ ಬಾ. ನಾನು ನಿನ್ನನ್ನು ಮುದ್ದಿಸಬೇಕು.' ನಾಚಿಕೆಯಿಂದ ನಗುತ್ತಾ ಜೋಸಿ ಬಳಿ ಬಂದಳು. 'ನಿನ್ನ ತೋಳುಗಳಿಂದ ನನ್ನನ್ನು ಬಳಸು' ಎಂದಳು. ಅವಳು ಹಾಗೇ ಮಾಡಿದಾಗ ಕರೆನ್ ಅವಳಿಗೆ ಮುದ್ದಿಟ್ಟು, 'ಜೋಸಿ ನಾನು ನಿನ್ನನ್ನು ಬಹಳ ಪ್ರೀತಿಸುತ್ತೇನೆ' ಎಂದಳು.

'ನಾನೂ ನಿನ್ನನ್ನು ಪ್ರೀತಿಸುತ್ತೇನೆ' ಎಂದು ಹೇಳಿ ಅವಳು ತನ್ನ ಕೆಲಸಕ್ಕೆ ಹಿಂತಿರುಗಿದಳು. ಸ್ವಲ್ಪ ಸಮಯದ ನಂತರ, 'ಎಲ್ಲಾ ಸಿದ್ಧವಾಗಿದೆ. ನಾನು ಹೋಗಿ ವ್ಯಾನ್ ತಂದುಬಿಡುತ್ತೇನೆ ನೀನೊಬ್ಬಳೇ ಇರುವೆಯಾ?' ಎಂದು ಕೇಳಿದಳು.

'ಅದಕ್ಕೇನಂತೆ, ನೀನು ಬರುವುದರೊಳಗೆ ನಾನೊಂದು ಫೋನ್ ಮಾಡಿ ಬಿಡುತ್ತೇನೆ' ಜೋಸಿ ಟೆಲಿಫೋನ್ ಸಲಕರಣೆಯನ್ನು ಅವಳ ತಲೆಯ ಬಳಿಯಿಟ್ಟು ಹೋದಳು.

ಕರೆನ್ ಟೆಲಿಫೋನ್ ಸಲಕರಣೆಗೆ ತಲೆ ತಾಗಿಸಿದ ಕೂಡಲೆ ಸ್ವಲ್ಪ ಹೊತ್ತು ಟ್ರಿಣ್ ಶಬ್ದದ ನಂತರ'ಆಪರೇಟರ್! ನಿಮಗೆ ಸಹಾಯಮಾಡಲೇ?' ಎಂಬ ಧ್ವನಿ ಕೇಳಿಬಂತು. 'ದಯವಿಟ್ಟು ನನಗಾಗಿ ಒಂದು ನಂಬರ ಕೊಡುತ್ತೀರಾ' ಎಂದು ತನ್ನ ತಂದೆಯ ಮನೆಯ ನಂಬರ್ ಕೊಟ್ಟಳು.

'ಒಂದು ನಿಮಿಷ' ಎಂದು ಹೇಳಿ ಆಪರೇಟರ್ ಸಂಪರ್ಕ ಕಲ್ಪಿಸಿದಳು, ಅಲ್ಲಿ ಯಾರೂ ಫೋನ್ ಎತ್ತಲಿಲ್ಲ. ಕರೆನ್ ಅಂದು ಬೆಳಿಗ್ಗೆ ತಾನೇ ಅವಳ ತಾಯಿಯೊಡನೆ ಮಾತಾಡಿದ್ದಳು. ಅವರು ಮನೆಯಲ್ಲೇ ಇರುತ್ತಾರೆಂದು ಅವಳಿಗೆ ಗೊತ್ತಿತ್ತು. ಆಪರೇಟರ್ ತಪ್ಪು ನಂಬರ ಕೊಟ್ಟಿರಬೇಕೆನಿಸಿತು. ತನ್ನ ತಲೆಯನ್ನು ಸಲಕರಣೆಯಿಂದ ದೂರ ಸರಿಸುವ ಮೂಲಕ ಸಂಪರ್ಕ ಕಡಿದುಕೊಂಡಳು. ಮತ್ತೆ ಮೊದಲಿಂದ ಪ್ರಯತ್ನಿಸಿದಳು. ಫಲಿತಾಂಶ ಅದೇ. ಸಿಂಥಿಯಾಳ ನಂಬರ್ ಕೇಳಿದಳು. ಅಲ್ಲೂ ಅದೇ ನಿರುತ್ತರ.

ಕರೆನ್‌ಳಿಗೆ ಅದೇನೋ ಮುಜುಗರವೆನಿಸಿತು. ಅವಳೆಂದೂ ಒಬ್ಬಳೇ ಇರಲಿಲ್ಲ. ಇದ್ದರೆ ಫೋನ್ ಮೂಲಕ ಯಾರೊಡನಾದರೂ ಮಾತಾಡುತ್ತಿದ್ದಳು. ಆದರೆ ಈಗ ಫೋನ್ ಕೂಡ ಸಹಕರಿಸುತ್ತಿಲ್ಲ. ಜೋಸಿಯನ್ನು ಹೋಗಲು ಬಿಡಬಾರದಿತ್ತು ಅನ್ನಿಸಿತು.

ಆ ಕ್ಷಣದಲ್ಲಿ ಮನೆಯ ಕೆಲವಾರು ವಿದ್ಯುದ್ದೀಪಗಳು ಆರಿದವು. ಹವಾನಿಯಂತ್ರಣ ಯಂತ್ರ ನಿಂತಿತು. ಅವಳ ಉಸಿರಾಟದ ಲಯದಲ್ಲಿ ಒಂದು ವಿಧದ ಬದಲಾವಣೆ ಕಂಡುಬಂತು. ಅವಳ ಶ್ವಾಸಕೋಶ ಬ್ಯಾಟರಿಗೆ ಬದಲಾಯಿಸಿಕೊಂಡಿತ್ತು.

ಇದ್ದಕ್ಕಿದ್ದಂತೆ ಅದೇನೋ ನೆನಪಾಗಿ ಕರೆನ್ ಬೆಚ್ಚಿದಳು. ಅವಳು ಹಾಗೂ ಜೋಸಿ ಒಂದು ಮುಖ್ಯ ವಿಷಯವನ್ನೇ ಮರೆತುಬಿಟ್ಟಿದ್ದರು. ಅಂದು ಅಂಗಡಿಗಳಿಗೆಲ್ಲಾ ಸುತ್ತಾಡಿದ್ದರಿಂದ ಗಾಲಿ ಕುರ್ಚಿಯ ಬ್ಯಾಟರಿ ಬಹಳ ದುರ್ಬಲವಾಗಿತ್ತು. ಅಂಗಡಿಯಿಂದ ಬಂದ ಕೂಡಲೇ ಜೋಸಿ ಕುರ್ಚಿಯ ಬ್ಯಾಟರಿಯನ್ನು ಬದಲಾಯಿಸಬೇಕಾಗಿತ್ತು. ಅದರ ಬದಲು ಅವಳು ಕುರ್ಚಿಗೆ ಮೆಯಿನ್‌ನಿಂದ ಸಪ್ಲೈ ಕೊಟ್ಟು ಬ್ಯಾಟರಿಯನ್ನು ಚಾರ್ಜ್ ಆಗಲು ಹಾಕಿದ್ದಳು. ಬಹಳ ದುರ್ಬಲವಾಗಿದ್ದುದರಿಂದ ಅದು ರೀಚಾರ್ಜ್ ಆಗಲು ಕಡಿಮೆ ಎಂದರೂ ಆರು ಘಂಟೆಗಳು ಬೇಕಾಗುತ್ತಿದ್ದವು.

ಈಗ ಕೇವಲ ಒಂದು ಘಂಟೆ ಮಾತ್ರ ಕಳೆದಿತ್ತು. ಪವರ್ ಹೋಗಿದ್ದರಿಂದ ಬ್ಯಾಟರಿಗೆ ಅಷ್ಟೇ ಜೀವ ಬಂದಿತ್ತು.

ಕರೆನ್‌ಳ ಕುರ್ಚಿಯ ಬಳಿಯಲ್ಲಿ ಇನ್ನೊಂದು ಸಿದ್ಧವಾದ ಬ್ಯಾಟರಿಯಿತ್ತು. ಆಸ್ಪತ್ರೆಗೆ ಹೋಗುವ ಮುನ್ನ ಅದನ್ನು ಕುರ್ಚಿಗೆ ಅಳವಡಿಸುವ ಯೋಜನೆ ಮಾಡಿದ್ದರು. ಅದು ಕರೆನಳ ಕಣ್ಣೆದುರೇ ಇತ್ತು. ಆದರೆ ಅದನ್ನು ಅವಳೇ ಜೋಡಿಸಿಕೊಳ್ಳುವ ಸಾಧ್ಯತೆ ಇರಲಿಲ್ಲ. ಬೇಗನೇ ಪವರ್ ಮತ್ತೆ ಬರಬಹುದೆಂದು ಆಶಿಸಿದಳು. ಎಂದಿಗಿಂತ ಹೆಚ್ಚಾಗಿ ಇಂದು ಜೋಸಿಯ ಬರುವಿಕೆಗಾಗಿ ಚಡಪಡಿಸಿದಳು.

ನಿಪ್‌ಗೆ ಟೆಲಿಫೋನ್ ಮಾಡುವ ಯತ್ನ ನಡೆಸಿದಳು. ಅವನು ಹೇಳಿದ್ದಂತೆಯೇ ಪೂರ್ವ ನಿಯಮಿತವಲ್ಲದ ಪವರ್ ನಿಂತುಹೋಗಿತ್ತು. ಅವಳು ತಲೆಯಿಂದ ಟೆಲಿಫೋನ್ ಸ್ವಿಚ್ ಒತ್ತಿದಾಗ ಮೊದಲೇ ಧ್ವನಿಮುದ್ರಿತವಾದ ಒಂದು ಸಂದೇಶ ಕೇಳಿಬಂತು: 'ದಯವಿಟ್ಟು ನಂತರ ಪ್ರಯತ್ನಿಸಿ, ಈಗ ಸಾಧ್ಯವಿಲ್ಲ.' ಅವಳು ಮತ್ತೆ ಪ್ರಯತ್ನಿಸಿದಳು. ಮತ್ತೆ ಅದೇ ಸಂದೇಶ.

ಈ ರೀತಿಯ ದೊಡ್ಡ ಪ್ರಮಾಣದ ಬ್ಲ್ಯಾಕ್ ಔಟ್ ಆದಾಗ ಹೆಚ್ಚು ಹೆಚ್ಚು ಜನ ಟೆಲಿಫೋನಿನ ಮೊರೆ ಹೋಗುತ್ತಾರೆ. ಹೆಚ್ಚು ಹೆಚ್ಚು ಜನ ಆಪರೇಟರನಿಂದ ಏನಾಯಿತೆಂದು ತಿಳಿಯಲು ಯತ್ನಿಸುತ್ತಾರೆ. ಟೆಲಿಫೋನ್ ವ್ಯವಸ್ಥೆಗೆ ಈ ಬೇಡಿಕೆ ಅತಿಯಾದಾಗ ಇಂಥ ಧ್ವನಿಮುದ್ರಿತ ಸಂದೇಶಗಳನ್ನು ಉಪಯೋಗಿಸುತ್ತಾರೆಂದು ಕರೆನಳಿಗೂ ಗೊತ್ತಿತ್ತು.

ಈಗ ನಿಜಕ್ಕೂ ಆಕೆಗೆ ಭಯವಾಗತೊಡಗಿತು.

ಜೋಸಿ ಮತ್ತು ಜೆಮಿನಿ ಇಬ್ಬರೂ ಆ ಕಟ್ಟಡದ ಲಿಫ್ಟಿನಲ್ಲಿ ಬಂದಿಗಳಾಗಿದ್ದರು. ಓಡಾಡುವವರ ಗಮನ ಸೆಳೆಯಲು ಅವರು ಹುಚ್ಚರಂತೆ ಅರಚುತ್ತಿದ್ದರು.

*

ಜೋಸಿ ಕರೆನಳನ್ನು ಬಿಟ್ಟು ಹೊರಟವಳೇ ನೆಟ್ಟಗೆ ಗ್ಯಾರೇಜಿಗೆ ಬಂದು ರಿಪೇರಿಯಾಗಿದ್ದ ವ್ಯಾನ್ ತೆಗೆದುಕೊಂಡು ಹೊರಟಳು. ಇದಕ್ಕೆಲ್ಲ ಅವಳಿಗೆ ಕೇವಲ ಹತ್ತು ನಿಮಿಷ ಹಿಡಿಯಿತು. ಕಟ್ಟಡದ ಬಾಗಿಲಲ್ಲಿ ಅವಳಿಗೆ ಜೆಮಿನಿ ಸಿಕ್ಕಿದ. "ನಮ್ಮ ಹುಡುಗಿ ಕರೆನ್ ಹೇಗಿದ್ದಾಳೆ?" ಎಂದು ಕೇಳಿದ. "ಚೆನ್ನಾಗಿದ್ದಾಳೆ" ಎಂದು ಹೇಳಿ ಜೋಸಿ ಬ್ಲ್ಯಾಕ್‌ಔಟ್ ಕಾರಣದಿಂದಾಗಿ ಆಸ್ಪತ್ರೆಗೆ ಹೊರಟಿರುವ ವಿಷಯ ತಿಳಿಸಿದಳು. 'ಹಾಗಿದ್ದರೆ ನಾನೂ ಮೇಲೆ ಬಂದು ಏನಾದರೂ ಸಹಾಯ ಸಾಧ್ಯವಿದ್ದರೆ ಮಾಡುತ್ತೇನೆ' ಎಂದು ಹೇಳಿದ.

ಲಿಫ್ಟಿನಲ್ಲಿ ಅವರು ಆರನೇ ಅಂತಸ್ತಿಗೆ ಹೊರಟರು. ಮೇಲೆ ಹೋಗುತ್ತಿದ್ದ ಲಿಫ್ಟು ಮೂರು ಮತ್ತು ನಾಲ್ಕನೇ ಅಂತಸ್ತಿನ ನಡುವೆ ನಿಂತಿತು. ದೀಪ ಆರಿತು. ಇಂಥ ತುರ್ತುಸ್ಥಿತಿಗಾಗಿ ಅಲ್ಲೊಂದು ಸಣ್ಣ ಬ್ಯಾಟರಿ ದೀಪವಿತ್ತು. ಅದನ್ನು ಹಾಕಿ ಅದರ ಮಂದ ಬೆಳಕಿನಲ್ಲಿ ಜೆಮಿನಿ ಅಲ್ಲಿದ್ದ ಎಲ್ಲಾ ಗುಂಡಿಗಳನ್ನು ಒತ್ತಿದ. ಏನೂ ಆಗಲಿಲ್ಲ. ಅವರು ಸಹಾಯಕ್ಕಾಗಿ ಕೂಗಲಾರಂಭಿಸಿದರು. ೩೦ ನಿಮಿಷಗಳಿಂದ ಕೂಗುತ್ತಿದ್ದರಾದರೂ ಯಾರೂ ಬಂದಿರಲಿಲ್ಲ.

ಜೋಸಿಗೆ ಈ ವೇಳೆಗೆ ಬ್ಯಾಟರಿ ಕುರಿತ ವಿಷಯ ನೆನಪಾಗಿತ್ತು. ಅವಳ ಆಕ್ರಂದನ ಮನ ಕರಗಿಸುವಂತಿತ್ತು. ಕಣ್ಣಿಂದ ನೀರು ಧಾರಾಕಾರವಾಗಿ ಸುರಿಯುತ್ತಿತ್ತು. ಗಂಟಲು ಗದ್ಗದವಾಯಿತು. ಮೂರು ಗಂಟೆಗಳ ನಂತರ ಪವರ್ ಬರುವವರೆಗೂ ಅಲ್ಲೇ ಇರಬೇಕಾಗುತ್ತದೆಂದು ಅವರಿಗೆ ಗೊತ್ತಿರಲಿಲ್ಲ.

ನಿಪ್‌ಗೆ ಕಾರ್ಖಾನೆಯಲ್ಲಿ ಕೆಲಸದ ಒತ್ತಡ ಬಹಳವಾಗಿತ್ತು. ಅವನಿಗೂ ಒಂದೆರಡು ಬಾರಿ ಕರೆನ್‌ಳ ನೆನಪು ಬಂದಿತಾದರೂ ಹೇಗೂ ಅವರು ಆಸ್ಪತ್ರೆಯಲ್ಲಿರುವುದರಿಂದ ಚಿಂತೆಯಿಲ್ಲ ಎಂದು ಸಮಾಧಾನಮಾಡಿಕೊಂಡು, ಈ ಎಲ್ಲಾ ಜಂಜಾಟಗಳೂ ಕಳೆದ ಮೇಲೆ ಒಂದು ಸಾರಿ ಆಸ್ಪತ್ರೆಗೇ ಫೋನ್ ಮಾಡಿ ಅವಳಿಗೆ ಧೈರ್ಯ ಹೇಳಬೇಕೆಂದುಕೊಂಡ.

*

ಕರೆನ್ ಈಗ ಭಯದಿಂದ ಬಿಳಿಚಿಕೊಂಡು ಬೆವರುತ್ತಿದ್ದಳು. ಜೋಸಿಗೆ ಇಷ್ಟು ತಡವಾಗುವುದಕ್ಕೂ ಏನೋ ಬಲವಾದ ಕಾರಣವಿರಬೇಕೆಂದು ಅವಳಿಗೆ ಅನ್ನಿಸುತ್ತಿತ್ತು. ಟೆಲಿಫೋನ್ ಮಾಡಲು ಹಲವಾರು ಬಾರಿ ಪ್ರಯತ್ನಿಸಿದಳಾದರೂ ಅದೇ ಧ್ವನಿಮುದ್ರಿತ ಸಂದೇಶ ಉತ್ತರವಾಗಿತ್ತು.

ಗಾಲಿಕುರ್ಚಿಯನ್ನು ಸರಿಯಾಗಿ ಬಾಗಿಲಿಗೆ ಹೊಡೆಯುವಂತೆ ಓಡಿಸಿದರೆ ಅದ

ದರೂ ಗಮನ ಸೆಳೆಯಬಹುದೇನೋ ಎಂದು ಯೋಚಿಸಿದಳು. ಆದರೆ ಹಾಗೆ ಮಾಡಲು ಯತ್ನಿಸಿದರೆ ಬ್ಯಾಟರಿ ಇನ್ನೂ ಬೇಗ ನಿರ್ಜೀವವಾಗುವ ಸಂಭವವಿತ್ತು. ಬ್ಯಾಟರಿ ಇನ್ನು ಬಹಳ ಕಾಲ ತನ್ನ ಉಸಿರಾಟವನ್ನು ನಡೆಸಲಾರದು ಎಂಬುದು ಅವಳಿಗೆ ಅನುಭವದಿಂದ ತಿಳಿದಿತ್ತು.

ನಿಜವಾಗಿ ಬ್ಯಾಟರಿಯಲ್ಲಿ ಇನ್ನು ಕೇವಲ ೧೫ ನಿಮಿಷಕ್ಕಾಗುವಷ್ಟು ಜೀವವಿತ್ತು. ಕರೆನಳ ಧಾರ್ಮಿಕ ನಂಬಿಕೆಗಳು ಎಂದೂ ಬಲವಾಗಿರಲಿಲ್ಲವಾದರೂ ಇಂದು ಅವಳು ಪ್ರಾರ್ಥಿಸತೊಡಗಿದಳು. ಅವಳು ದೇವರಲ್ಲಿ ಮೊರೆಯಿಟ್ಟಳು: 'ಜೋಸಿಯನ್ನು ಬೇಗ ಕಳಿಸು ಇಲ್ಲವೆ ಜೆಮಿನಿ ಅಥವಾ ಅಪ್ಪ, ಅಮ್ಮ, ನಿಮ್, ಸಿಂಥಿಯಾ ಅಥವಾ ಯಾರಾದರೂ ಸರಿ, ಯಾರಾದರೂ! ದೇವರೇ, ಅವರೇನೂ ಮಾಡಬೇಕಾಗಿಲ್ಲ. ಸುಮ್ಮನೆ ಆ ಬ್ಯಾಟರಿ ಇದಕ್ಕೆ ಜೋಡಿಸಬೇಕಷ್ಟೇ. ಅದೆ, ಅಲ್ಲಿ ಎದುರಿಗಿದೆಯಲ್ಲಾ ಅದು. ಅದನ್ನು ಯಾರಾದರೂ ಮಾಡಬಹುದು. ಬೇಕಿದ್ದರೆ ನಾನು ಹೇಳಿಕೊಡುತ್ತೇನೆ. ದೇವರೆ ಓ ದೇವರೇ ದಯವಿಟ್ಟು...'

ಅವಳು ಪ್ರಾರ್ಥಿಸುತ್ತಿರುವಾಗ ಅವಳ ಉಸಿರಾಟ ನಿಧಾನವಾದದ್ದು ಅನುಭವವಾಯಿತು ಗಾಬರಿಯಿಂದ ಮತ್ತೆ ಟೆಲಿಫೋನ್ ಮೈಕ್ರೋಸ್ವಿಚ್ ಮುಟ್ಟಿದಳು.

'ಇದು ಧ್ವನಿಮುದ್ರಿತ ಸಂದೇಶ......'

ಅವಳ ಶ್ವಾಸಕೋಶ ಇನ್ನೇನು ನಿಲ್ಲುವುದೆಂಬ ಸೂಚನೆಯನ್ನು ಒಂದು ಕರೆಗಂಟೆ ಸೂಚಿಸಿತು. ಈ ವೇಳೆಗೆ ಕರೆನ್ ಅರೆಪ್ರಜ್ಞಾವಸ್ಥೆಯಲ್ಲಿದ್ದಳು. ಕರೆಗಂಟೆಯ ಸೂಚನೆ ಅವಳಿಗೆ ಅಸ್ಪಷ್ಟವಾಗಿ ಕೇಳಿಸಿತು, ಎಲ್ಲೋ ದೂರದಿಂದ ಬಂದಂತೆ.

ಅವಳು ಉಸಿರಾಡಲು ವ್ಯರ್ಥ ಪ್ರಯತ್ನ ನಡೆಸುತ್ತಿದ್ದಳು. ಗಾಳಿಯನ್ನು ಒಳಗೆಳೆದುಕೊಳ್ಳಲು ಚಡಪಡಿಸುತ್ತಿದ್ದಳು. ಆದರೆ ಯಂತ್ರದ ಸಹಾಯ ಪೂರ್ತಿ ಇಲ್ಲದೆ ಅದೆಂತು ಸಾಧ್ಯ? ಅವಳ ಮೈ ನೀಲಿಯಾಗತೊಡಗಿತು. ಕಣ್ಣುಗಳು ಉಬ್ಬಿದವು. ಬಾಯಿ ಜೋರಾಗಿ ಆಡತೊಡಗಿತು. ಉಸಿರು ಕಟ್ಟಿತು. ಭಯಂಕರವಾದ ನೋವು ಅವಳ ಎದೆಯನ್ನು ಹಿಂಡುತ್ತಿತ್ತು. ಅಷ್ಟರಲ್ಲಿ ಅವಳಲ್ಲಿ ದಯೆತೋರಿ ಬ್ಯಾಟರಿ ಸತ್ತಿತು. ಅದರೊಂದಿಗೆ ಕರೆನ್ ಕೂಡ.

ಸಾಯುವ ಮುನ್ನ ಅವಳ ತಲೆ ಒಂದು ಪಕ್ಕಕ್ಕೆ ವಾಲಿದಾಗ ಅಪ್ರಯತ್ನವಾಗಿ ಟೆಲಿಫೋನ್ ಸ್ವಿಚಿಗೆ ತಾಗಿತು. ಆ ಕಡೆಯಿಂದ ಒಂದು ಧ್ವನಿ ಕೇಳಿ ಬಂತು: 'ಆಪರೇಟರ್. ನಿಮಗೆ ಸಹಾಯ ಮಾಡಲೆ?'

•

"ನಾವಿನ್ನೂ ವೇಗವಾಗಿ ಹೋಗುವುದಿಲ್ಲವೇ?" ನಿಮ್ ತನ್ನ ಕಾರಿನ ಚಾಲಕನನ್ನು ಕೇಳಿದ.

'ನಾನು ಕೈಲಾದಷ್ಟು ಪ್ರಯತ್ನಿಸುತ್ತಿದ್ದೇನೆ ಮಿ. ಗೋಲ್ಡ್‌ಮನ್, ಆದರೆ ಜನಸಂಚಾರ ಬಹಳವಿದೆ" ಎಂದ ಚಾಲಕ ಬೇಸರದ ಧ್ವನಿಯಲ್ಲಿ.

ಆದರೆ ನಿಮ್‌ನ ಮನಸ್ಸು ಚಿಂತೆಯಲ್ಲಿ ಮುಳುಗಿತ್ತು. ಪವರ್ ಕಟ್‌ನಿಂದಾಗಿ ಕರೆನ್ ಸತ್ತಳು ಎಂಬ ಸುದ್ದಿಯು ವಿನಾ ಸಿಂಥಿಯಾ ಬೇರೇನೂ ವಿವರವನ್ನೂ ಕೊಟ್ಟಿರಲಿಲ್ಲ. ನಿಮ್ ಆಗಲೇ ತನ್ನನ್ನು ದೂರಿಕೊಳ್ಳುತ್ತಿದ್ದ. ತಾನು ಮೊದಲೇ ಆಸ್ಪತ್ರೆಗೆ ಫೋನ್ ಮಾಡಿ ಅವಳು ಬಂದಿದ್ದಾಳೋ ಇಲ್ಲವೋ ನೋಡಬೇಕಿತ್ತು ಎಂದುಕೊಳ್ಳುತ್ತಿದ್ದ. ಈಗಾಗಲೇ ತಡವಾಗಿದೆಯೆಂದು ತಿಳಿದಿದ್ದರೂ ಆದಷ್ಟು ಬೇಗ ಅಲ್ಲಿ ಸೇರಲು ಅವನ ಮನಸ್ಸು ಚಡಪಡಿಸುತ್ತಿತ್ತು.



ಮನೆಯ ಬಾಗಿಲಿಗೆ ಹೋದಾಗ ಸಿಂಥಿಯಾ ಓಡಿ ಬಂದವಳೇ ಬಾಗಿಲು ಹಾಕುತ್ತಾ, 'ನೀವೀಗ ಒಳಗೆ ಬರುವಂತಿಲ್ಲ. ದೃಶ್ಯ ಬಹಳ ಭೀಕರವಾಗಿದೆ.' ಎಂದಳು. ಒಳಗೆ ಜೋರಾಗಿ ಅಳುತ್ತಿರುವ ಕರೆನ್‌ಳ ತಾಯಿ ಹಾಗೂ ಜೋಸಿ ಕಂಡರು. ಸಿಂಥಿಯಾಳ ಕಣ್ಣುಗಳೂ ಕೆಂಪಾಗಿದ್ದವು.

ಕರೆನಳ ಭೀಕರ ಏಕಾಕಿತನದ ದುರಂತಮೃತ್ಯುವಿನ ಬಗ್ಗೆ ಸಿಂಥಿಯಾ ತನಗೆ ಗೊತ್ತಿದ್ದಷ್ಟನ್ನು ತಿಳಿಸಿದಳು. ನಿವರ್ ತನ್ನನ್ನು ದೂರಿಕೊಳ್ಳಲು ಯತ್ನಿಸಿದ. ಸಿಂಥಿಯಾ ಅವನನ್ನು ತಡೆದು, "ಇಲ್ಲ ನಿವರ್‌ರಾಡ್, ನಾವೆಲ್ಲಾ ಏನು ಮಾಡಿದೆವೋ ಬಿಟ್ಟೆವೋ ಕರೆಳಿಗೆ ನೀವು ಮಾಡಿದಷ್ಟು ಬೇರೆ ಯಾರೂ ಮಾಡಿಲ್ಲ. ನೀವು ಆತ್ಮನಿಂದನೆ ಮಾಡಿಕೊಳ್ಳುವುದು ಅವಳಿಗೆ ಇಷ್ಟವಾಗುತ್ತಿರಲಿಲ್ಲ. ಹೋಗುವಾಗಲೂ ಅವಳು ನಿಮಗೇನೊ ಬಿಟ್ಟು ಹೋಗಿದ್ದಾಳೆ. ತಾಳಿ" ಎಂದು ಒಳಗೆ ಹೋದಳು.

ಮತ್ತೆ ಹೊರಗೆ ಬಂದು ಕಾಗದ ತಂದು ಅವನ ಕೈಗಿತ್ತು, "ಇದು ಅವಳ ಟೈಪ್ ಯಂತ್ರದಲ್ಲಿತ್ತು. ಅವಳು ಇಂಥ ಕೆಲಸ ಮಾಡುವಾಗ ಬಹಳ ಕಾಲ ತೆಗೆದುಕೊಳ್ಳುತ್ತಿದ್ದಳು. ಅವಳು ಈ ಕೆಲಸವನ್ನೇ ಮಾಡುತ್ತಾ...ಮಾಡುತ್ತಾ..." ಅವಳ ದನಿ ಕಟ್ಟಿತು. ಮಾತು ಮುಂದುವರೆಸಲಾಗದೆ ತಲೆಯಾಡಿಸಿದಳು.

"ಥ್ಯಾಂಕ್ಸ್" ಎಂದು ಹೇಳಿ ನಿವರ್ ಆ ಹಾಳೆಯನ್ನು ಮಡಚಿ ಜೇಬಿನಲ್ಲಿಟ್ಟು ಕಾರಿನೆಡೆಗೆ ನಡೆದ. ಮನಸ್ಸು ರೋದಿಸುತ್ತಿತ್ತು. ಹಿಂದಿನದೆಲ್ಲ ನೆನಪಾಯಿತು.

ನಿವರ್ ಜೇಬಿನಿಂದ ಚಿರಪರಿಚಿತವಾದ ತೆಳು ನೀಲಿ ಕಾಗದ ತೆಗೆದು ಬಿಡಿಸಿ ಕಾರಿನಲ್ಲಿದ್ದ ಮಂದವಾದ ದೀಪದ ಬೆಳಕಿನಲ್ಲಿ ಓದಲಾರಂಭಿಸಿದ.

ಪ್ರಿಯ ನಿವರ್‌ರಾಡ್,
ದೀಪಗಳು ಆರಲೇಬೇಕೆಂಬುದು
ಆಶ್ಚರ್ಯಕರವೇ?
ತುರ್ತು ದೀಪಗಳು ವಿಫಲವಾಗಿವೆ.
ಮಾನವ ಉರಿಸಿದ ಎಲ್ಲ ಜ್ವಾಲೆಗಳೂ
ಮೆತ್ತಗೆ ಉರಿಯಲಾರಂಭಿಸಿ ಆರುತ್ತವೆ.
ಆದರೂ ಬೆಳಕು ಜೀವನದಂತೆಯೇ
ಉಳಿಯುತ್ತದೆ.
ಅತಿ ಸಣ್ಣವಾದ ಮಿಣುಕು
ಹಾಗೂ ಜೋರಾಗಿ ಉರಿಯುವ ಜ್ವಾಲೆ
ಎತ್ತಿ ಹಿಡಿದಿವೆ......

"ಏನನ್ನು ಎತ್ತಿ ಹಿಡಿದಿವೆ?"-ಅವನು ಚಿಂತಿಸಿದ. ಕರೆನಳ ಕೊನೆಯ ಸಿಹಿಮಾತೇನೆಂಬುದು ನಿವರ್‌ಗೆ ಎಂದಿಗೂ ಅಜ್ಞಾತವೇ! ★

***************

ಲೇಖಕ ತನ್ನ ಮಿತ್ರನಿಗೆ— "ಈ ಸಂಪಾದಕರೆಲ್ಲ ನನ್ನ ವಿರುದ್ಧ ಷಡ್ಯಂತ್ರ ಹೂಡಿದ್ದಾರೆಂದು ನನಗೀಗ ಪೂರ್ಣ ಅರ್ಥವಾಗಿದೆ."

ಮಿತ್ರ— "ಹೇಗೆ ಹೇಳುತ್ತಿ?"

ಲೇಖಕ— "ಪರಿಶ್ರಮಪಟ್ಟು ಬರೆದ ಒಂದು ಕತೆಯನ್ನು ಹತ್ತು ಪತ್ರಿಕೆಗಳಿಗೆ ಕಳಿಸಿದ್ದೆ. ಎಲ್ಲರೂ ಅದನ್ನ 'ವಿಷಾದಿಸುತ್ತ ವಾಪಸ್' ಮಾಡಿದ್ದಾರೆ ಕಣೋ."

Printed & published by B. V. Jigjinni, Receiver for movable property of Loka Shikshana Trust, at Samyukta Karnataka Press, Koppikar Road, Hubli–580 020. Rept: Bombay: V. Satyamurthy Phone: 522412: Calcutta: H. Majumdar 46–4233; Madras: K. A. Subramanian Phone; 842381. New Delhi: B. B. Chopra Phone 714130.

KASTURI PRICE: 2-00 Regd. No. KRNO
*Registered with the Registrar of Newspapers for India under No. 3533/57*










